# ಹೆಣ್ಣಿನ ಕಣ್ಣು

ರಾ. ವೆಂ. ಶ್ರೀನಿವಾಸ






ಮೋಹನ ಪ್ರಕಾಶನ

ಕೃಷ್ಣಮೂರ್ತಿಪುರಂ : : ಮೈಸೂರು

# ಬಿನ್ನಹ

'ಹೆಣ್ಣಿನ ಕಣ್ಣು' ಕಾದಂಬರಿಯ ಕಥಾವಸ್ತು ಕಲ್ಪನೆಯ ಕೊನರಾದರೂ ಸಹಜ ಸಜೀವ ಚಿತ್ರ, ಎಂದು ನಂಬಿದ್ದೇನೆ. ಆದರೆ ಈ ಜಗತ್ತಿನಲ್ಲಿ ಇದ್ದ, ಇರುವ, ಬರುವ ಯಾವ ವ್ಯಕ್ತಿಯನ್ನೂ ಉದ್ದೇಶಿಸಿ ಇಲ್ಲಿ ಬರೆದಿಲ್ಲ. ಹಾಗೆ ಉದ್ದೇಶಿಸಿಕೊಳ್ಳುವ ರತ್ನ, ಮಹೇಶ್ವರ, ಲಕ್ಷಮ್ಮ, ಮಾದಪ್ಪ, ಕಮಲ, ಪುಟ್ಟಪ್ಪ, ಕರಿಯಪ್ಪ, ನಾಗರಾಜ ಈ ಜಗತ್ತಿನಲ್ಲಿದ್ದರೆ ನನ್ನ ನಂಬಿಕೆಗೆ ಸಜೀವ ಬೆಂಬಲ ದೊರೆತಂತಾಗುತ್ತದೆ; ಈ ಲೇಖನಿಯ ಕಲ್ಪನೆಗೆ ಗೆಲವಿನ ಗರಿ ಮೂಡುತ್ತದೆ. ಹಾಗಾದರೆ ನಾನು ಗೆದ್ದೆ!

ಈ ಕೃತಿಯನ್ನು ಬೇಗ ಬರೆದು ಮುಗಿಸುವಂತೆ ಪ್ರೇರೇಪಿಸಿ, ನನ್ನ ಇತರ ಕೃತಿಗಳ ಪ್ರಕಟಣೆಗೆ ನೆರವಿತ್ತಂತೆ ಇದಕ್ಕೂ ಸಹಾಯ ಮಾಡಿದ ಗೆಳೆಯ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೂ, ಪ್ರಕಾಶಕರಾದ ಹಂಸ ಲಿಮಿಟೆಡ್ ಸಂಸ್ಥೆಯವರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆ.

ಮೈಸೂರು ನಗರ　　　　　　　　　　ರಾ. ನೆಂ. ಶ್ರೀನಿವಾಸ

೧-೬-೧೯೫೦

## ಎರಡನೆಯ ಮುದ್ರಣ

ಈ ಕೃತಿ ಎರಡನೆಯ ಮುದ್ರಣ ಕಾಣಲು ಕಾರಣರಾದ ಕನ್ನಡಿಗರಿಗೆ ನಾನು ಚಿರಋಣಿ. ಮೊದಲನೆಯ ಮುದ್ರಣಕ್ಕೆ ದೊರೆತ ಆದರ ಸ್ವಾಗತಗಳೇ ಇದಕ್ಕೂ ದೊರೆಯುವುದೆಂದು ನಂಬಿದ್ದೇನೆ.

ರಾ. ನೆಂ. ಶ್ರೀನಿವಾಸ

೧

ಹದಿನೈದು ವರುಷಗಳ ಹಿಂದಿನ ಮಾತು. ಸೂರ್ಯನ ಬೆಳಕು ಕಂಡು ಕೇವಲ ಐದು ವರುಷವಾಗಿದ್ದ ಆ ಎಳೆಯ ಕಣ್ಣಿನ ಹುಡುಗಿ ಕುರ್ಚಿಯ ಮೇಲೆ ಕುಳಿತು, ಬಾದಾಮಿ ಹಲ್ವ ತಿಂದದ್ದು ಅದೇ ಮೊದಲು. ಗಾಜಿನ ಬಟ್ಟಲಲ್ಲಿದ್ದ ಬಿಸಿಬಿಸಿ ಕಾಫಿಯನ್ನು ಪೋಲೀಸ್ ಕರಿಯಪ್ಪ ಆರಿಸುತ್ತಿದ್ದಾಗ ಆ ಮಗು ಸುತ್ತ ನೋಡಿತು. ಹತ್ತಿರದಲ್ಲಿ ಕುಳಿತಿದ್ದ ಅನೇಕ ಮಂದಿ ಈ ಕಣ್ಣುಗಳನ್ನೇ ನೋಡುತ್ತಿದ್ದರು. ದಟ್ಟವಾದ ಕಪ್ಪುರೆಪ್ಪೆಗೂದಲಿನ ನಡುವೆ, ಅರೆಮುಚ್ಚಿದ್ದರೂ ಹೊಳೆಯುತ್ತಿದ್ದ ಅಂಥ ಕಣ್ಣುಗಳನ್ನು ಅಲ್ಲಿದ್ದವರೆಂದೂ ಕಂಡಿರಲಿಲ್ಲ.

ಹುಡುಗಿ ತುಂಬ ಚೆಲುವೆ. ಆ ಹುಡುಗಿಯನ್ನು ಕರಿಯಪ್ಪ ಹೋಟಲಿಗೆ ಕರೆದುಕೊಂಡು ಬಂದಾಗ, ಕಾಸಿಗಾಗಿ ಕೈಯೊಡ್ಡಿ ಬಾಗಿಲಲ್ಲಿಯೇ ನಿಂತಿದ್ದ ಗುಡಿಯ ಪೂಜಾರಿ ರಂಗಪ್ಪ, ಒಳಬಾಗಿಲಲ್ಲಿದ್ದ ಹಾಲಿನ ಹನುಮಂತ, ದೋಸೆ ತಿನ್ನುತ್ತಿದ್ದ ದಾಸಯ್ಯ, ನೀರಿನ ಮಾಣಿ ಲಚ್ಚ ಎಲ್ಲ ನೋಡಿದರು. ಆ ಎಲ್ಲ ಕಣ್ಣುಗಳೂ ಮೊದಲು ನೋಡಿದ್ದು ಈ ಎರಡು ಕಣ್ಣುಗಳನ್ನು; ಹುಡುಗಿಯ ಚೆಲುವೆಲ್ಲ ಈ ಕಣ್ಣುಗಳಲ್ಲೇ ಎಂಬಂತಿತ್ತು.

ಬಸ್ ಸ್ಟ್ಯಾಂಡಿನ ಹತ್ತಿರ ನಡೆದ ಸಂಗತಿ ಅಲ್ಲಿದ್ದವರಿಗೆಲ್ಲ ತಿಳಿಯದು. ಕರಿಯಪ್ಪನ ಹಿಂದೆ ಬಂದ ಬೋಳುತಲೆಯ ಬಿಳಿಮೀಸೆಯ ಒಬ್ಬ ಮುದುಕ, ಕರಿಯಪ್ಪನ ಎದುರಿಗೆ ಸ್ವಲ್ಪ ದೂರದಲ್ಲಿದ್ದ ಕುರ್ಚಿಯ ಮೇಲೆ ಕುಳಿತ. ಕಾಫಿ ಕುಡಿದಾದ ಮೇಲೆ ಕರಿಯಪ್ಪ ಕೈತೊಳೆಯಲು ನೀರಿನ ಹತ್ತಿರ ಹೋದಾಗ, ಮುದುಕ " ಈಗೇನು, ಹಾಗಾದರೆ ಟೇಷನ್ನಿಗೆ ಕರಕೊಂಡು ಹೋಗ್ತೀರ ? " ಎಂದ.

ಕರಿಯಪ್ಪ " ಹ್ಞ" ಎಂದು ಹುಡುಗಿಯ ಹತ್ತಿರ ಬಂದ.

ಹೆಸರಿಗೆ ತಕ್ಕಬಣ್ಣದ ಕೂದಲು ತುಂಬಿದ ಕಟ್ಟಿಗೆಯಂಥ ಕೈಗೆ ತನ್ನ ಕೋಮಲವಾದ ಅಂಗೈ ನೀಡಲು ಹುಡುಗಿ ಸಿದ್ಧವಾಗಿ ನಿಂತಿದ್ದಳು; ಮಾರ್ಗ ದರ್ಶಿ "ಹ್ಞೊ" ಎಂದಕೂಡಲೆ ಕೋಲು ಹಿಡಿದ ಕುರುಡಿಯಂತೆ ಅವಳು ಹಿಂಬಾಲಿಸಿದಳು.

ಕುರುಡಿ!

ಸೃಷ್ಟಿಕರ್ತ ಸೃಷ್ಟಿಸಿರುವ ಎಲ್ಲ ಕಣ್ಣುಗಳನ್ನೂ ಮೀರಿಸಿದ ಕಣ್ಣು ಅವಳ ಮುದ್ದುಮುಖದಲ್ಲಿವೆ. ಆ ಕಣ್ಣಿನ ಮಾಟ, ನೋಟ, ಆಟ ಜಗತ್ತಿನಲ್ಲಿ ಯಾವ ಕಣ್ಣಿಗೂ ಇಲ್ಲ.

ಅವಳೆಂಥ ಕುರುಡಿ! ಸಾವಿರ ಜನರನ್ನು ಕುರುಡು ಮಾಡೇನು, ಎನ್ನು ತ್ತಿತ್ತು ಆ ಕಣ್ಣಿನ ಕಾಂತಿ.

೨

ಬಸ್ ಸ್ಟ್ಯಾಂಡಿಗೆ ಮೂವತ್ತು ಗಜ ದೂರದಲ್ಲಿ ಮಾರಮ್ಮನ ಚೌಕ. ಚೌಕ ಎಂದರೆ ನಾಲ್ಕು ರಸ್ತೆ ಸೇರುವ ಚೌಕವಲ್ಲ. ಊರಿನ ಮುಖ್ಯವಾದ ಎಂಟು ಬೀದಿಗಳೂ ಒಂದುಗೂಡುವ ಕೇಂದ್ರ. ಉತ್ತರ ದಿಕ್ಕಿನ ಮೂಲೆಯಲ್ಲಿ ಬೀದಿ ಗಳೂ ರಸ್ತೆಯ ಅಂಚಿನ ಮೇಲೆ ಒಂದು ದೊಡ್ಡ ಬೇವಿನ ಮರ. ಬೇವಿನ ಮರದ ಕೆಳಗೆ, ಮೂರು ಕಲ್ಲುಚಪ್ಪಡಿ ನಿಲ್ಲಿಸಿ, ಒಂದು ಕಲ್ಲುಚಪ್ಪಡಿ ಹೊದಿಸಿದ ಪುಟ್ಟ ಮಾರಮ್ಮನ ಗುಡಿ. ಚೌಕದ ಮಧ್ಯದಲ್ಲಿರುವ ದೀಪದ ಮಂಕುಬೆಳಕು, ಆಡುವ ಮರದ ಎಲೆಗಳಲ್ಲಿ ನುಸುಳಿ ಕಣ್ಣು ಮಿಟುಕಿಸುವಂತೆ, ಇನ್ನೊಂದು ದೊಡ್ಡ ಚೌಕದ ಮೇಲೆ ಹನಿ ಹನಿಯಾಗಿ ಬೀಳುತ್ತಿತ್ತು. ಆ ಚೌಕಕ್ಕೆ ನಾಲ್ಕು ರಸ್ತೆಗಳಿಲ್ಲ, ನಾಲ್ಕು ಗೋಡೆಗಳಿವೆ. ನಾಲ್ಕು ಗೋಡೆ ಸೇರಿ ಅದೊಂದು ಮಹಾ ಚೌಕ. ಅಲ್ಲಿ ರಸ್ತೆ ಇಲ್ಲವೇ ಇಲ್ಲ ಎಂದಲ್ಲ—ಉಂಟು. ಎರಡು ರಸ್ತೆ; ಹಿಂದೊಂದು, ಮುಂದೊಂದು. ಹತ್ತಾರು ಜನ ಅವರವರ ಇಷ್ಟಾನುಸಾರ ಬಂದು, ಚೌಕದಲ್ಲಿ ನಿಂತು ಹೋಗುವುದು ಪದ್ಧತಿ. ಮುಂದಿನ ರಸ್ತೆಯಿಂದ ಬಂದವರಿಗೆ ವಿಚಿತ್ರ ಆತಿಥ್ಯ ನೀಡಿ ಹಿಂದಿನ ರಸ್ತೆಯಿಂದ ಹೊರಕ್ಕೆ ಕಳಿಸುವ ಕಬ್ಬಿನ ಗಾಣದಂಥ ಕಸಬು, ಕುಳ್ಳಗೆ ಬೆಳ್ಳಗೆ ದಪ್ಪಗೆ ಇರುವ ಲಕ್ಷ್ಮಮ್ಮನ

ಪಾಲಿಗೆ ಬಂದು ಹತ್ತು ವರುಷವಾಗಿತ್ತು. ತಾಯಿಯೂ ಆಗುವ ಭಾಗ್ಯವನ್ನು ಆರು ವರುಷದ ಮುದ್ದು ಕಮಲ ಕಲ್ಪಿಸಿದ್ದಳು.

ಲಕ್ಷಮ್ಮ ಆ ಮನೆಗೆ ದಣಿ ; ರಾಜ ರಾಣಿ ಎಲ್ಲ ಅವಳೇ. ಅವಳ ಕೋಣೆ, ತಂಬೂರಿ, ಗೆಜ್ಜೆ, ಇಸ್ಪೀಟು, ಸೀಸೆ, ಎಲೆಅಡಕೆತಟ್ಟೆ, ಹಾಸಿಗೆ ಇರುವ ಹಾಗೆ ಒಂದು ಗಂಡು ಜೀವವೂ ಇತ್ತು. ಪಾಪ ಹೇಳಿದ ಕೆಲಸ ಹೇಳಿದಂತೆ ಮಾಡುವ ಅತ್ಯಂತ ವಿಧೇಯ ಬುದ್ಧಿಶೂನ್ಯ ಭೃತ್ಯ ಅದು.

ಈ ದಣಿ, ಒಮ್ಮೆ ಊರಿನ ದೊಡ್ಡ ವ್ಯಾಪಾರಿಯಾಗಿದ್ದ ಹೀರಾಲಾಲ್‌ನ ಗಿಣಿಯಾಗಿದ್ದಾಗ ಮನೆಗೆ ಬೇರೆ ಯಾರೂ ಬರುತ್ತಿರಲಿಲ್ಲ. ಬರುವ ಹಾಗೆಯೂ ಇರಲಿಲ್ಲ ; 'ಬರಬೇಡಿ' ಎಂದು ಹೇಳಲೊ ಏನೊ, ಬಾಗಿಲಲ್ಲಿಯೆ ಗೋಡೆಯ ಮೇಲೆ ಸೇಟನ ದೊಡ್ಡ ಭಾವಚಿತ್ರ ಕಾವಲಾಗಿ ನಿಂತುಬಿಟ್ಟಿತ್ತು. ಆದರೆ ಈಗ ಅದೆಲ್ಲೊ ! ಅಂಗಡಿಗೂ ಅಂತಃಪುರಕ್ಕೂ ಓಡಾಡಲು, ಏನೂ ಅರಿಯದ ತಬ್ಬಲಿ ಹತ್ತು ವರುಷದ ನಂಜುಂಡಿಯನ್ನು ಸೇಟು ಅನ್ನ ಬಟ್ಟೆ ಕೊಟ್ಟು ನೇಮಿಸಿದ್ದ. ಹತ್ತು ವರುಷ ಇದ್ದುದು ಇಪ್ಪತ್ತು ವರುಷ ಆದರೂ ಹಸು ಗೂಸಿನ ಬುದ್ಧಿ ಹಸುಗೂಸಾಗಿಯೇ ಉಳಿಯಿತು. ನಂಜುಂಡಿ ನಂಜುಂಡಿ ಯಾಗಿಯೇ ಲಕ್ಷಮ್ಮನ ಗುಲಾಮನಾಗಿಯೇ ಬೆಳೆಯತೊಡಗಿದ. ಅವನಿಗೆ ಬೇರೆ ದಿಕ್ಕಿಲ್ಲದೆ ಇದ್ದುದರಿಂದ ಅದೇ ಮನೆ, ಲಕ್ಷಮ್ಮನೇ ತಾಯಿ, ಹೀರಾಲಾಲ್‌ನೇ ತಂದೆ ಎಂದು ನಂಬಿ ಲಕ್ಷಮ್ಮನ ಮನೆಯ ಅಡಿಗೆಯವನಾಗಿ, ಪರಿಚಾರಕನಾಗಿ, ಏಜೆಂಟಾಗಿ—ಎಲ್ಲ ಆಗಿ ಸೇವೆ ಸಲ್ಲಿಸುತ್ತಿದ್ದ.

ಹೀರಾಲಾಲ್ ಒಮ್ಮೆ ಬೊಂಬಾಯಿಗೆ ಹೋಗಿದ್ದಾಗ 'ಗುಜರಾತಿ ಭವನ' ದಲ್ಲಿ ಇಳಿದುಕೊಂಡಿದ್ದ. ಅವನಿದ್ದ ಕೋಣೆಯ ಪಕ್ಕದ ಕೋಣೆಯಲ್ಲಿ ಇಪ್ಪತ್ತು ವರುಷದ ಚೆಲುವೆ ಲಕ್ಷಮ್ಮ ಸೇಟಿಗೆ ಸಿಕ್ಕಿದಳು. ಆಕೆಯ ತಂದೆ ಕ್ರೈಸ್ತ ಮತಕ್ಕೆ ಸೇರಿ ಎ. ವಿ. ದಾಸ್ ಆಗಿ, ಲೂಸಿ ಎಂಬ ಹದಿನೆಂಟು ವರುಷದ ಹುಡುಗಿ ಯನ್ನು ಮೂರು ದಿನದ ಹಿಂದೆ ಮದುವೆ ಆದ. ತಾಯಿಯಿಲ್ಲದ ಮಗಳ ಮದುವೆ ನಿಶ್ಚಯಮಾಡುವ ನೆಪದಿಂದ ಆಕೆಯನ್ನು ಬೊಂಬಾಯಿಗೆ ಕರೆತಂದು, ಹೆಣ್ಣಿನ ಆಸೆಗಾಗಿ ತಾನು ಜಾತಿಗೆಟ್ಟು ಮದುವೆಯಾದ ತಂದೆಯೊಡನೆ ಮಗಳು ಜಗಳ ಆಡಬೇಕಾಯಿತು. ಲೂಸಿಯನ್ನು ಮದುವೆ ಆಗಬೇಕಾದರೆ ಸುಂದರ ರಾಜ್ ಕ್ರೈಸ್ತನಾಗಬೇಕಾಗಿತ್ತು. ಈ ನೂತನ ಕ್ರೈಸ್ತ ದಂಪತಿಗಳು, ಬಿಟ್ಟ

ಜಾತಿಯ ಮಗಳೊಂದಿಗೆ ಜೀವಿಸಬೇಕಾದರೆ, ಅವಳು ಅವರು ತೋರುವ ಕ್ರೈಸ್ತ ನೊಬ್ಬನನ್ನು ಮದುವೆ ಆಗಬೇಕು. ಈ ಕಟ್ಟಿಗೆ ಲಕ್ಷ್ಮಮ್ಮ ಒಪ್ಪದಿದ್ದುದರಿಂದ ವಿರಸ. ಸೇಟು ಆ ಹೋಟಲಿಗೆ ಬಂದ ಮಾರನೆಯ ದಿನ ಬೆಳಗಿನ ಜಾವ ನೂತನ ದಂಪತಿಗಳು ಈ ಹುಡುಗಿಯನ್ನು ಹೋಟಲಲ್ಲಿಯೇ ಬಿಟ್ಟು ಪರಾರಿ ಯಾದರು. ಲಕ್ಷ್ಮಮ್ಮ ಆಗ ಏನೂ ಅರಿಯದವಳು. ಬೀದಿಗೆ ಹೋಗುವ ಇಷ್ಟ ಅವಳಿಗಿರಲಿಲ್ಲ. ಸಾಕಷ್ಟು ಶಿಕ್ಷಣ, ವಿವೇಕ ಇಲ್ಲದ ಅವಳ ಮನಸ್ಸು ಕಾಮಕ್ಕೆ, ಶೃಂಗಾರಕ್ಕೆ, ಬೆಡಗಿಗೆ ಹಲವು ಬಾರಿ ಸೋತಿತ್ತು. ಆದರೆ, ತಾನು ಜಾತಿಗೆಡದೆ ಸಂಸಾರಂದಿಗಳಾಗಿ ಜೀವಿಸಬೇಕು ಎಂಬ ಬಯಕೆ ಒಂದೆಡೆ ಕುಳಿತು, ಆಗಾಗ ಎಚ್ಚರಿಸುತ್ತಿತ್ತು. ತಂದೆಯ ಮದುವೆಯಾದ ಮೇಲೆ, ಯೋಚನೆ ಮಾಡಿಮಾಡಿ ಅವಳ ಮೆದುಳು ಸಿಡಿಯುತ್ತಿತ್ತು. ವಯಸ್ಸು ಮೀರಿದ ತಂದೆ, ತನಗಿಂತ ಚಿಕ್ಕ ಹುಡುಗಿಯೊಂದಿಗೆ ಓಡಿಹೋದುದನ್ನು ನೋಡಿದ ಮೇಲಂತೂ ಅವಳ ಮನಸ್ಸು ಲಗಾಮು ತಪ್ಪಿತು. ವಯಸ್ಸಿಗೆ ತಕ್ಕ ಅನೇಕ ಯೋಚನೆಗಳು ಸುಳಿದುವು. ಹೋಟಲು ಮಾಲೀಕ ಮಂಗಳಪ್ರಸಾದ್‌ಗೆ ಈ ವಿಷಯ ತಿಳಿಸಿ ಆತನ ಸಹಾಯ ಬೇಡೋಣ; ಬೆಂಗಳೂರಿನಲ್ಲಿರುವ ದೂರದ ಅಕ್ಕನ ಮನೆಗೆ ಹೋಗೋಣ; ಹತ್ತಿರದಲ್ಲಿಯೇ ಅನಾಥ ಮಹಿಳಾಶ್ರಮ ಇದ್ದರೆ ಅದಕ್ಕೆ ಸೇರೋಣ, ಎಲ್ಲಿಯಾದರೂ ಕೆಲಸ ಹುಡುಕೋಣ, ಸೋದರಮಾವನ ನಾಟಕದ ಕಂಪನಿ ಹುಬ್ಬಳ್ಳಿಯಲ್ಲಿರಬಹುದು, ಆ ಕಂಪನಿ ಅಲ್ಲಿಗೆ ಹೋಗಿ ಇನ್ನೂ ಒಂದು ತಿಂಗಳಾಗಿದೆ, ಅಲ್ಲಿಗೆ ಹೋಗೋಣ, ಸಾಧ್ಯವಾದರೆ ಒಳ್ಳೆಯ ನಟಿ ಏಕಾಗಬಾರದು....ಛೆ, ಅದಕ್ಕೆ ಸೋದರಮಾವನೇ ಆಗಬೇಕೇನು ? ಈ ಊರಿನಲ್ಲಿ ಬೇಕಾದಷ್ಟು ಸಿನಿಮಾ ಕಂಪೆನಿಗಳಿವೆಯಂತೆ. ಹೊಟ್ಟೆಯಪಾಡಿಗಾಗಿ ನಾನೇಕೆ ಯಾವುದಾದರೂ ಒಂದು ಕಂಪನಿ ಸೇರಬಾರದು ?....ಹೀಗೇ ಏನೇನೋ ಆಲೋಚನೆ.

ತಂದೆ ಮದುವೆಯಾದ ಹುಡುಗಿಯೊಡನೆ ಯಾವಾಗ ಪರಾರಿಯಾದನೋ ಅವಳಿಗೆ ತಿಳಿಯದು. ಹಿಂದಿನ ಕಿಟಕಿಯಿಂದ ಕೋಣೆಯೊಳಕ್ಕೆ ನಸುಬೆಳಕು ಇಣುಕಿದಾಗ ಲಕ್ಷ್ಮಮ್ಮನಿಗೆ ಎಚ್ಚರವಾಯಿತು. ಕೋಣೆಯಲ್ಲಿ ತಾನು ಮತ್ತು ತಾನು ಮಲಗಿದ್ದ ಹಾಸಿಗೆ ಎರಡೇ. ತಂದೆಯ ಜೊತೆ ತಂದಿದ್ದ ಪೆಟ್ಟಿಗೆ, ತಂದೆ ಮತ್ತು ತನ್ನ ಹೊಸ ಚಿಕ್ಕಮ್ಮ ಮಲಗಿದ್ದ ಎರಡು ಹಾಸಿಗೆ, ರೈಲುತಂಬಿಗೆ

ಒಂದು ಬುಟ್ಟಿ, ಎರಡು ಕೈಚೀಲ, ಎಲ್ಲ ಮಾಯವಾಗಿದ್ದುವು. ಕೋಣೆಯಲ್ಲಿ ತಾನೊಬ್ಬಳೇ ಇದ್ದುದನ್ನು ನಂಬದೆ, ಆಗತಾನೆ ಬಿಟ್ಟ ಕಣ್ಣನ್ನುಜ್ಜಿ ಸುತ್ತ ನೋಡಿ ದಿಗ್ಗನೆದ್ದು ಹಾಸಿಗೆಯ ಮೇಲೆ ಕುಳಿತಳು. ಕೋಣೆಯ ಬಾಗಿಲು ಮುಂದಕ್ಕೆ ಹಾಕಿತ್ತು. ಏನು ಮಾಡಬೇಕೋ ತೋಚಲಿಲ್ಲ. ಎದ್ದು ಬಾಗಿಲು ತೆರೆದಳು. ನೂರಾರು ಮನೆಗಳ ಆಚೆ ಪೂರ್ವ ದಿಗಂತದಲ್ಲಿ ನಸುಬೆಳಕು ಮೂಡುತ್ತಿತ್ತು. ಮಿನುಗುವ ತಾರೆ, ಬೆಳಕಿನ ತೆರೆಯ ಹಿಂದೆ ಮಾಯವಾಗುತ್ತಿತ್ತು. ಜಗತ್ತಿಗೆಲ್ಲ ಬೆಳಕು ಹರಡುತ್ತಿದ್ದರೆ ಲಕ್ಷ್ಮಮ್ಮನಿಗೆ ಮಾತ್ರ ಕತ್ತಲು ಕವಿಯುತ್ತಿತ್ತು. 'ಅಯ್ಯೋ!' ಎಂದು ಕೂಗಿ, ಡಪ್ಪನೆ ಬಾಗಿಲು ಬಡಿದು ದೊಪ್ಪನೆ ಹಾಸಿಗೆಯ ಮೇಲೆ ಬಿದ್ದಳು. ಬಿಕ್ಕಿಬಿಕ್ಕಿ ಅತ್ತಳು.

ಪಕ್ಕದ ಕೋಣೆಯಲ್ಲಿಯೇ ಮಲಗಿದ್ದ ಸಾಹುಕಾರನನ್ನು ಈ ಬಿಕ್ಕಳಿಕೆ ಹೊಡೆದೆಬ್ಬಿಸಿತು. ಹೀರಾಲಾಲ್ ಬಹಳ ಹೊತ್ತು ಆಲಿಸಿದ. ಆಮೇಲೆ, ತಡೆಯಲಾರದೆ ಬಾಗಿಲು ತಟ್ಟಿ ಅವಳನ್ನು ವಿಚಾರಿಸಿದ....

* * * *

ಅಂದಿನಿಂದ ಅವಳ ಯೋಗಕ್ಷೇಮ ವಿಚಾರ ಅವನ ಪಾಲಿಗೆ ಬಂತು. ಹೊಸೂರಿಗೆ ಕರೆತಂದು ಅವಳಿಗಾಗಿ ಬೇರೆ ಮನೆ ಮಾಡಿದ. ತಂದೆಯ ಇಚ್ಛೆಯಂತೆ ಜಾತಿಗೆಟ್ಟು, ಅವನು ಹೇಳುವ ಗಂಡು ಪಶುವನ್ನು ಆಶ್ರಯಿಸುವುದಕ್ಕಿಂತ ಈ ಸೇಟಿನ ಸೂಳೆಯಾಗಿರುವುದು ಲೇಸು ಎನ್ನಿಸಿತು, ಇಪ್ಪತ್ತು ಮೀರಿದ ಲಕ್ಷ್ಮಮ್ಮನಿಗೆ.

ಅಂದಿನಿಂದ ಲಕ್ಷ್ಮಮ್ಮ ಮದುವೆಯಾಗದ ಸೇಟಿನ ಹೆಂಪತಿ, ಊರಿನ ಒಬ್ಬ ದೊಡ್ಡ ಸಾಹುಕಾರನ ಸೂಳೆ ಆದಳು.

ಸೇಟಿನ ದುಡ್ಡಿನಲ್ಲಿ ಸಂಗೀತ ಕುಣಿತ ಎಲ್ಲ ಕಲಿತಿದ್ದಾಯಿತು. ಉತ್ತರಾದಿ ಸಂಗೀತ ಹೇಳಿಕೊಡುತ್ತಿದ್ದ ರಹೀಂಖಾನ್ ಉಚಿತವಾಗಿ ಸೀಸೆಯ ಗಂಧದ ಪರಿಚಯವನ್ನೂ ಶಿಷ್ಯಳಿಗೆ ಮಾಡಿಕೊಟ್ಟ. ಮನೆಯ ಕಡೆ ಸ್ವಲ್ಪ ನಿಗ ಇಟ್ಟಿಕೊಂಡಿರು, ಎಂದು ಸೇಟಿನ ಬಾಯಿಂದ ಹೇಳಿಸಿಕೊಂಡ ಕಾನ್‌ಸ್ಟೇಬಲ್ ಕರಿಯಪ್ಪ ಚೆನ್ನಾಗಿಯೆ ನಿಗ ಇಟ್ಟುಕೊಂಡ. ತನಗೆ ಮೊದಲು ಇಷ್ಟವಿಲ್ಲದಿದ್ದರೂ ದುಡ್ಡಿಗಾಗಿ ಊರಿನ ಹಳೆಯ ಸೂಳೆ ರಾಧಮ್ಮ, ಕಸಬಿನಲ್ಲಿ ಹೊಸಬಳಾದ ಲಕ್ಷ್ಮಮ್ಮನಿಗೆ ಕುಣಿತ ಹೇಳಿಕೊಡತೊಡಗಿದಳು; ಕುಣಿತ ಕುಣಿತದಲ್ಲಾದರೆ ಮಾತು

ಕಸಬಿನ ಬಗ್ಗೆ ನಡೆಯುತ್ತಿತ್ತು. ಅವಳ ಶಿಕ್ಷಣವನ್ನು ಮೆಚ್ಚಿ, ಮನದಣಿಯ ಅಭ್ಯಾಸ ಮಾಡಿದ್ದ ಲಕ್ಷ್ಮಮ್ಮ ಅಪ್ಪಟ ಸೂಳೆಯಾದಳು. ಐದು ವರುಷಕ್ಕಿಂತ ಹೆಚ್ಚು ಕಾಲ ರಾಧಮ್ಮನ ಪಾಠ ಕಲಿಯುವ ಸುಯೋಗ ಲಕ್ಷ್ಮಮ್ಮನಿಗೆ ದೊರೆಯಲಿಲ್ಲ. ಗೆಳೆಯರ ಸಹಾಯದಿಂದ ಅವಳ ಅಂತ್ಯಕ್ರಿಯೆ ಮಾಡಿ ಗುರುದಕ್ಷಿಣೆ ಸಲ್ಲಿಸಬೇಕಾಯಿತು.

ಸೇಟಿಗೆ ಬೇಕಾದದ್ದು ತನ್ನ ಲಕ್ಷ್ಮಿಯ ಸಂಗೀತ, ಕುಣಿತ. ಆದರೆ ರಹೀಂಖಾನ್, ರಾಧಮ್ಮ, ತಬಲದ ಕಿಟ್ಟಪ್ಪ ಇವರ ಪ್ರಭಾವಕ್ಕೆ ಒಳಗಾದ ಹಕ್ಕಿ ಕುಣಿತ, ಸಂಗೀತ ಚೆನ್ನಾಗಿ ಕಲಿತರೂ ಅದನ್ನು ಸೇಟಿನ ಪಾಲಿಗೇ ಮೀಸಲಾಗಿಡದೆ ತಿಂದ ಮನೆಗೆ ಎರಡುಬಗೆಯತೊಡಗಿತು.

ಆದರೂ ಸೇಟಿನ ಹೆಸರಿನಲ್ಲಿ ದಿನ ಕಳೆಯುತ್ತಿತ್ತು. ಒಂದು, ಎರಡು, ಮೂರು, ನಾಲ್ಕು, ಐದು ವರುಷಗಳಾದುವು. ಕರಿಯಪ್ಪನ ಸ್ನೇಹಿತ ಮಾದಪ್ಪನಿಂದ ಸೇಟಿಗೂ ಲಕ್ಷ್ಮಮ್ಮನಿಗೂ ಇದ್ದ ಸಂಬಂಧ ಕಡಿದು ಬಿತ್ತು.

ಆ ಐದು ವರುಷಗಳಲ್ಲಿ ಲಕ್ಷ್ಮಮ್ಮ ಸಾಕಷ್ಟು ಸುಖ ಅನುಭವಿಸಿದ್ದಳು. ಮೊದಲು ಬಾಡಿಗೆಗೆಂದು ಗೊತ್ತುಮಾಡಿದ್ದ ಮನೆಯನ್ನು ಸೇಟು ಇವಳಿಗಾಗಿ ಕೊಂಡು ಇವಳ ಹೆಸರಿಗೆ ಕ್ರಯಪತ್ರ ಮಾಡಿಸಿದ್ದ. ಮೈತುಂಬ ಒಡವೆ ಹೊರಿಸಿದ್ದ. ಆತನಿಂದ, ಇತರರಿಂದ ಸಂಪಾದಿಸಿದ್ದ ಸಹಸ್ರಾರು ರೂಪಾಯಿಯನ್ನು ಮೈಸೂರು ಬ್ಯಾಂಕು, ಟ್ರೆಜರಿ ಎರಡೂ ಕಾಯುತ್ತಿದ್ದುವು. ಅನಾಥಳನ್ನು ಯೌವನದಲ್ಲಿ ಕೈ ಹಿಡಿದು ಕಾಪಾಡಿದ ಸೇಟಿನ ಗುರುತಾಗಿ ಮುದ್ದು ಕಮಲ ಒಂದು ವರುಷದ ಮೈತುಂಬಿದ ಮಗುವಾಗಿ ಆಡುತ್ತಿದ್ದಳು.

ಸಂಬಂಧ ಹರಿದು ಹೋದರೂ ಕರುಳಿನ ನಂಟು ಅಳಿಸಲಾಗದಿದ್ದುದರಿಂದ ಹೀರಾಲಾಲ್ ಮುದ್ದು ಕಮಲ ಮತ್ತು ಅವಳ ತಾಯಿಗಾಗಿ ತಿಂಗಳಿಗೆ ಇಪ್ಪತ್ತು ರೂಪಾಯಿ ಕಳಿಸಲು ಮೊದಲು ಮಾಡಿದ. ನಾಲ್ಕು ಐದು ವರುಷ ಹೀಗೆ ಕಳೆಯಿತು. ಪೂನಾದಲ್ಲಿದ್ದ ತನ್ನ ಅಣ್ಣ ಸತ್ತು ಹೋದಾಗ ಆತನ ದೊಡ್ಡ ಜವಳಿ ಅಂಗಡಿಯನ್ನು ನೋಡಿಕೊಳ್ಳಲು ಹೀರಾಲಾಲ್ ಹೊಸೂರು ಬಿಡಬೇಕಾಯಿತು. ಅತ್ತಿಗೆಗೆ ಕ್ಷಯ ತಗುಲಿ ಮೂರು ವರುಷವಾಗಿತ್ತು. ಅವಳು ಈಗಲೊ, ಆಗಲೊ ಎನ್ನುವ ಹಾಗಾಗಿದ್ದಳು. ದುಡ್ಡು ಕೊಟ್ಟು ಹೆಂಡತಿ ಮಾಡಿಕೊಂಡಿದ್ದ ಲಕ್ಷ್ಮಮ್ಮ, ದುಡ್ಡಿಗೆ ಹೆಂಡತಿಯಾದುದನ್ನು ನೂರಾರು ಸಲ

ಕಣ್ಣಾರಕಂಡು ಅವನಿಗೆ ಬೇಸರವಾಗಿತ್ತು. ಊರಿಗೆಲ್ಲ ಅವನದೊಂದೇ ಆಗಿದ್ದ 'ಸ್ಟೇಷನರಿ ಕಂಪನಿ' ಷುರುವಿನಿಂದಲೂ ಚೆನ್ನಾಗಿ ಸಂಪಾದಿಸಿತ್ತು. ಆದರೆ ಹಿರೇಹಳ್ಳಿಯ ಜೋಡಿದಾರರ ಮಗ ಮಾದಪ್ಪ 'ಮಾದಪ್ಪ ಅಂಡ್ ಸನ್' ಅನ್ನು ತನ್ನ ಅಂಗಡಿಯ ಮುಂದೆಯೇ ಹಾಕಿದ ಮೇಲೆ ಗಿರಾಕಿ ಹಂಚಿಹೋಯಿತು. ಆ ಅಂಗಡಿಯ ಮುಂದೆ ವ್ಯಾಪಾರ ಮಾಡುವುದೇ ಕಷ್ಟವಾಯಿತು. ಲಕ್ಷಮ್ಮ ಕೈಬಿಟ್ಟಮೇಲಂತೂ ಒಮ್ಮೊಮ್ಮೆ ಜೀವಕ್ಕೇ ಭಯವಾಗುತ್ತಿತ್ತು. ಮಾದಪ್ಪ, ಪೋಲೀಸ್ ಕರಿಯಪ್ಪ, ರಹೀಂಖಾನ್, ಸಣ್ಣಸಿದ್ದ, ಸೈಕಲ್‌ಷಾಪ್ ಸಿಂಗ್ ಇವರ ಕಣ್ಣ ಮುಂದೆ ಬಾಳುವುದೇ ಕಷ್ಟವಾಗತೊಡಗಿತ್ತು. ಬೇಸರಕ್ಕೆ ಸರಿಯಾಗಿ ಅಣ್ಣ ಕಣ್ಣುಮುಚ್ಚಿದುದರಿಂದ ಸೇಟು ಪೂನಾಕ್ಕೆ ಪ್ಯಾಕು ಮಾಡಲು ಸಿದ್ಧನಾದ.

ಊರು ಬಿಡುವ ಮುನ್ನ ಲಕ್ಷಮ್ಮನನ್ನು ಒಮ್ಮೆ ನೋಡಿಯೇ ಬಿಡೋಣ ಎನ್ನಿಸಿತು. ಈ ಕರುಳಿನ ಕೂಸು ಕಮಲ ಕರೆಯುತ್ತಿದ್ದಳು. ಆದರೆ ಲಕ್ಷಮ್ಮ ಜಮೀನು ಖರೀದಿಗಾಗಿ ರಾಯನಹುಂಡಿಗೆ ಹೋದವಳು ಒಂದು ವಾರ ಬರುವ ಹಾಗಿರಲಿಲ್ಲ. ತಾನು ಅನ್ನ ಬಟ್ಟೆ ಕೊಟ್ಟು ಸಾಕಿ ಇವರ ಮನೆಯಲ್ಲಿ ಬಿಟ್ಟಿದ್ದ ನಂಜುಂಡಿ ಲಕ್ಷಮ್ಮನನ್ನೇ ಆಶ್ರಯಿಸಿಕೊಂಡು ಆ ಮನೆಯ ಕಾವಲಾಗಿ ಬಿದ್ದಿದ್ದ. ಹೀರಾಲಾಲ್ ಅವಳಿಗಾಗಿ ಒಂದು ವಾರ ಕಾಯಲಾಗದೆ, ಏನನ್ನೋ ಸುತ್ತಿದ ಕಾಗದದ ಮಡಿಕೆಯೊಂದನ್ನು ಕವರಿನಲ್ಲಿಟ್ಟು ಅಂಟಿಸಿ, ಲಕ್ಷಮ್ಮನಿಗೆ ಕೊಡಬೇಕೆಂದು ಹೇಳಿ ಹೊರಟುಹೋದ.

ಹೋಗುವಾಗ ನಂಜುಂಡಿಯ ಮುಖ ನೋಡಬೇಕಾಯಿತು. ಪಾಪ, ಏಕೋ ತಡೆಯಲಾಗಲಿಲ್ಲ. ನಂಜುಂಡಿಯ ಕೈಲಿ ಒಂದು ರೂಪಾಯಿ ಇಟ್ಟು 'ನಾನು ಬರ್ತೀನಿ ನಂಜುಂಡಿ' ಎಂದು ಅಂಗಡಿಯ ಕಡೆ ನಡೆದ.

ಹಳ್ಳಿಯಿಂದ ವಾಪಸು ಬಂದ ಮೇಲೆ ಲಕ್ಷಮ್ಮನಿಗೆ ಎಲ್ಲ ತಿಳಿಯಿತು. ಸೇಟು ಊರುಬಿಟ್ಟುದನ್ನು ಕೇಳಿದಾಗ ಸ್ವಲ್ಪ ವ್ಯಥೆಯಾಯಿತು. ಆದರೆ ಊರೆಲ್ಲ ಹಬ್ಬಿ ಹರಡಿದ ಬಳ್ಳಿಗೆ, ಹಳೆಯ ಆಸರೆ ಹೋದುದಕ್ಕೆ ಹೆಚ್ಚು ದುಃಖವಾಗಲಿಲ್ಲ.

ಸೇಟು ಬಂದು ಹೋದ ಗುರುತಾಗಿ ಕಮಲಳ ಕಿವಿಯಲ್ಲಿ ಒಂದು ಜೊತೆ ಲೋಲಕ್ ಓಲಾಡತೊಡಗಿತು.

೩

ರಾಯನಹುಂಡಿಯಿಂದ ಜಮೀನು ಕ್ರಯಪತ್ರದೊಡನೆ ತಾಯಿ ಮಗಳು ವಾಪಸು ಬಂದು ಎಂಟು ದಿನಗಳಾಗಿದ್ದುವು. ಯುಗಾದಿ ಹಬ್ಬಕ್ಕೆ ಎರಡೇ ದಿನ ಉಳಿದಿತ್ತು. ಆಗಲೆ ಒಂದೊಂದಾಗಿ ವರುಷದ ಬಹುಮಾನ ಬಾಗಿಲಬಳಿಗೆ ಬಂದು ಬೀಳುತ್ತಿದ್ದವು. ಮಾಮೂಲಿನಂತೆ ನಂಜುಂಡಿ ಆಸಾಮಿಗಳನ್ನು ಭೇಟಿ ಮಾಡಿ ಹಬ್ಬದ ವಸೂಲಿ ನಡಸುತ್ತಿದ್ದ. ಮಾದಪ್ಪ ಬೆಳ್ಳಿಯ ಬಾದಾಮಿ ತಟ್ಟೆ ಮಾಡಿಸಿ ಕಳಿಸಿದ್ದ. ರಹೀಂಖಾನ್ ರಂಜಾನಿಗೆ ದೊಡ್ಡ ಬಹುಮಾನ ಕೊಡುವುದು ಪದ್ಧತಿಯಾಗಿದ್ದುದರಿಂದ ಯುಗಾದಿಗೆ ಒಂದು ಚಿಕ್ಕ ಬೆಳ್ಳಿಯ ಲೋಟ ಮಾತ್ರ ಕಳಿಸಿದ್ದ. ಬೇಸಗೆಯ ಬೇಗೆಯನ್ನು ನೀಗಿ ತಣ್ಣಗೆಮಾಡಲು ಸಣ್ಣಸಿದ್ದ ಬೆಳ್ಳಿಯ ಪನ್ನೀರುದಾನಿ ಕೊಟ್ಟು ಹೋದ. ಕೇವಲ ಒಂದು ತಿಂಗಳ ಹಿಂದೆ ಆ ಮನೆಯೊಳಕ್ಕೆ ಕಾಲಿಟ್ಟ ಬಟ್ಟೆ ಅಂಗಡಿ ರಾಜಣ್ಣ ಎಂಟು ಗಜ ಸೆವೆಂಟೀನ್‌ನಾಟ್ ಮಲ್ಲು ಕಳಿಸಿದ್ದ. ಮಾದಪ್ಪನ ಮಿತ್ರ ನಾರಾಯಣ ಶೆಟ್ಟಿ ಮಾಮೂಲಿನಂತೆ ಹಬ್ಬದ ಉಡುಗೊರೆ ಹದಿನೈದು ರೂಪಾಯಿ ಕಳಿಸಿದ್ದ. ಆಸೆ ತೀರದ ಈ ಗೋಲಕದಲ್ಲಿ ಎಲ್ಲ ಬಂದು ಬೀಳುತ್ತಿದ್ದುವು.

ಲಕ್ಷ್ಮಿಗೆ ಕಳಿಸಿದ ಉಡುಗೊರೆಯೊಂದಿಗೆ ಮಾದಪ್ಪ ಕಳಿಸಿದ್ದ ಬಣ್ಣದ ಸಾಮಾನಿನ ಸೆಟ್ಟು, ರಹೀಂಖಾನ್ ಕಳಿಸಿದ್ದ ಪುಟ್ಟ ಕರ್ಪೂರದ ಬೊಂಬೆ, ರಾಜಣ್ಣ ಕಳಿಸಿದ್ದ ಹಸಿರು ಬಣ್ಣದ ಟೇಪು, ಸಣ್ಣಸಿದ್ದ ಕೊಟ್ಟ ಕುದುರೆಗಾಡಿ, ಎಲ್ಲ ಕಮಲಳಿಗೆ ಹಬ್ಬದ ನೆನಪು ಮಾಡಿದ್ದುವು.

ಸೇಟು ಇದ್ದಿದ್ದರೆ ಧನುಮಾಸಿನ ಫ್ರಾಕು ಹೊಲಿಸುತ್ತಿದ್ದ. ಈ ಬಾರಿ ಕಮಲಳಿಗೆ ಅದು ಚೆನ್ನಾಗಿ ಒಪ್ಪುತ್ತದೆ. ಅವಳು ತನ್ನ ವಯಸ್ಸಿಗೆ ಮೀರಿ ಬೆಳೆದಿದ್ದಾಳೆ. ಹೆಚ್ಚು ಜರಿ ಹಾಕಿಸದೆ ಲೇಟೆಸ್ಟ್ ಫ್ಯಾಷನ್ನಿನಲ್ಲಿ ಹೊಲಿಸಿದರೆ ಅವಳಿಗೆ ತುಂಬ ಚೆನ್ನಾಗಿರುತ್ತದೆ, ಎಂದು ಲೋಲಕ್ ನೋಡಿದ ಲಕ್ಷಮ್ಮನಿಗೆ ಅನ್ನಿಸಿತು. ಈ ಹುಡುಗಿಯ ತಂದೆ ತನ್ನನ್ನು ಬಿಟ್ಟರೂ ಯುಗಾದಿಯ ಉಡುಗೊರೆ ಕಳಿಸುವುದನ್ನು, ತಿಂಗಳ ಕಂತು ಕೊಡುವುದನ್ನು ತಪ್ಪಿಸಿರಲಿಲ್ಲ. ಆದರೆ ಆತ ಊರುಬಿಟ್ಟು ಹೋದ ಮೇಲೆ ಈ ಪದ್ಧತಿ ಮುಂದುವರಿಯುವುದೆಂದು ಲಕ್ಷಮ್ಮ ನಂಬಿರಲಿಲ್ಲ. ಅವಳ ಊಹೆ ತಪ್ಪಾಯಿತು.

ಬಾಗಿಲಲ್ಲಿ ಅಂಚೆಯ ರಾಮಣ್ಣ ಆ ಮನೆಯ ಮುಂದೆ ಮೊದಲ ಬಾರಿ 'ಪೋಸ್ಟ್' ಎಂದು ಕೂಗಿದ. ಕೋಣೆಯಲ್ಲಿದ್ದ ಲಕ್ಷಮ್ಮ ಹೊರಗೆ ಬಂದಳು. ರಾಮಣ್ಣ 'ನಿಮಗೆ ಮನಿಯಾರ್ಡರ್ ಇದೆ' ಎಂದು ಹೇಳಿ ಫಾರಂ ತೆಗೆದು ಆಕೆಯ ಕೈಗೆ ಕೊಟ್ಟು, ಜಗಲಿಯ ಮೇಲೆ ಕುಳಿತ. ಲಕ್ಷಮ್ಮ ಫಾರಂನ್ನು ಒಳಗೆ ಒಯ್ದು ರುಜು ಮಾಡಿ ವಾಪಸು ತಂದಳು. ಸೇಟು ಕಮಲಳಿಗಾಗಿ ಕಳಿಸಿದ್ದ ಇಪ್ಪತ್ತು ರೂಪಾಯಿ ಲಕ್ಷಮ್ಮನ ಕೈಲಿ ಬಿತ್ತು.

ರಾಮಣ್ಣ ಹತ್ತೊಂಬತ್ತು ಗಟ್ಟಿ ರೂಪಾಯಿ, ಒಂದು ರೂಪಾಯಿಯ ಚಿಲ್ಲರೆಯನ್ನು ಆಕೆಯ ಕೈಯಲ್ಲಿ ಹಾಕಿ ಸುಮ್ಮನೆ ಕುಳಿತ.

ಲಕ್ಷಮ್ಮ "ಇನ್ನೇನು?" ಎಂದಳು.

"ಏನೂ ಇಲ್ಲ, ನಮಗೆ...."

"ಏನು ಕೊಡಬೇಕು?"

"ಏನಾದರೂ ತಮಗೆ ತಿಳಿದದ್ದು...."

"ಮನಿಯಾರ್ಡರ್ ತಲಪಿಸಿದರೆ ದುಡ್ಡು ಕೊಡಬೇಕೇನು?"

"ಇಲ್ಲ....ತಮ್ಮ ಖುಷಿ?" ದೇಶಾವರದ ನಗೆ ನಕ್ಕು ರಾಮಣ್ಣ ಎದ್ದು ನಿಂತ.

ಫಾರಂಗೆ ತಾರೀಕು ಹಾಕಿದ್ದ ಲೇಖನಿ ಬಲಗೈಯೊಳಗೇ ಇತ್ತು. ದೇಶಾವರದ ನಗೆಗೆ ಮುಸುಕು ಹಾಕಲು, ಅದೃಷ್ಟವಿದ್ದಷ್ಟು ದಕ್ಕುವುದಾದರೆ ಕೈ ಖಾಲಿ ಮಾಡಲು, ಕಿವಿಯ ಮೇಲೆ ಹೊಸೆದು ಹೊಸೆದು ಸುತ್ತಿದ್ದ ರುಮಾಲಿನ ಸಂದಿಯಲ್ಲಿ ಲೇಖನಿ ಸಿಕ್ಕಿಕೊಂಡಿತು. ಮುಖವನ್ನು ಸವರಿದ ಬಲಗೈ ಬಿಡುವು ಮಾಡಿಕೊಂಡು ಕೆಳಗಿಳಿಯಿತು.

ಲಕ್ಷಮ್ಮ ಚಿಲ್ಲರೆಯಲ್ಲಿ ಒಂದಾಣೆ ತೆಗೆದು 'ಹ್ಣು' ಎಂದಳು.

ಹದಿನೆಂಟು ಕಡೆ ಸಂಪಾದಿಸಿದ್ದ ಚಿಲ್ಲರೆಯ ನಡುವೆ ಈ ಒಂದಾಣೆಯನ್ನೂ ಹಾಕಿ ರಾಮಣ್ಣ ಮುಂದೆ ಹೆಜ್ಜೆ ಇಟ್ಟ. ಬಾಗಿಲು ಮುಂದಕ್ಕೆ ಮಾಡಿಕೊಂಡು ಲಕ್ಷಮ್ಮ ಕೋಣೆಗೆ ಹೊರಡುವುದರಲ್ಲಿದ್ದಳು.

ಬೀದಿಯ ಬಾಗಿಲು 'ಕಿರ್ರರ್ರ್' ಎಂದು ಕರೆಯಿತು. ಕರಿಯಪ್ಪ ಬಂದ ಎಂಬುದನ್ನು ಆ ವಿಚಿತ್ರ ಬೂಟ್ಸಿನ ಶಬ್ದ ಸೂಚಿಸಿತು.

ಆ ಮನೆಗೆ ಹಳಬನಾಗಿದ್ದ ಕರಿಯಪ್ಪ ಒಳಗೆ ಬಂದು ಪಡಸಾಲೆಯಲ್ಲಿದ್ದ

ಆರಾಮು ಕುರ್ಚಿಯ ಮೇಲೆ ಕುಳಿತ. ಜೊತೆಯಲ್ಲಿ ಬಂದಿದ್ದ ಹುಡುಗಿ ಅವನ ಹತ್ತಿರ ಸುಮ್ಮನೆ ನಿಂತುಕೊಂಡಳು.

ಲಕ್ಷ್ಮಮ್ಮ ದುಡ್ಡನ್ನು ಕೈಯಲ್ಲಿಯೇ ಇಟ್ಟುಕೊಂಡು ಕರಿಯಪ್ಪನ ಎದುರಿಗಿದ್ದ ಕುರ್ಚಿಯ ಕಡೆ ಬಂದಳು.

" ಏನು ಅಪರೂಪ ? "

" ಏನಿಲ್ಲ....ಸೋಮವಾರ ಬಂದಿದ್ದೆ ? "

" ಓ....ಹೌದು....ಇದ್ಯಾರು ಹುಡುಗಿ ? " ಎಂದು ಕುತೂಹಲದಿಂದ ಕೇಳುತ್ತ ಕುರ್ಚಿಯ ಮೇಲೆ ಕುಳಿತಳು. ಅವಳ ಕಣ್ಣು ಆ ಹುಡುಗಿಯ ಎರಡು ಕಣ್ಣುಗಳನ್ನು ದಿಟ್ಟಿಸಿ ನೋಡಿತು. ಹುಡುಗಿ ಲಕ್ಷ್ಮಮ್ಮನನ್ನು ಒಮ್ಮೆ ನೋಡಿ ತಲೆ ತಗ್ಗಿಸಿಕೊಂಡಿತು.

ರುಮಾಲನ್ನು ತೆಗೆದು ಕುರ್ಚಿಯ ಕೈಮೇಲಿಟ್ಟು ಬಲಗೈ ತಲೆ ಸವರಿಕೊಳ್ಳುತ್ತಿದ್ದಾಗ, ಕರಿಯಪ್ಪ " ಇಲ್ಲಿ ಬಿಡಲು ತಂದಿದ್ದೇನೆ. ಕಮಲವ್ವನ ಜೊತೆ ಆಡಿಕೊಂಡು ಇರಲೀಂತ " ಎಂದ.

" ಯಾರ ಮಗಳು ? "

" ಅಪ್ಪ ಯಾರೋ ಗೊತ್ತಿಲ್ಲ....ಬಸ್ ಸ್ಟಾಂಡಿನ ಹತ್ತಿರ ಸಿಕ್ಕಿತು. ಅಮ್ಮನ ಜೊತೆ ನಿನ್ನೆ ಈ ಊರಿಗೆ ಬಂತಂತೆ. ಅವರಮ್ಮ ಬೆಂಗಳೂರಿನೋಳಂತೆ....ಅವಳೆಂಥ ತಾಯಿ ನೋಡು !—ನೀರು ಕುಡಿಯೋಷ್ಟರಲ್ಲಿ ಇದನ್ನು ಬಿಟ್ಟು ಬಸ್ಸು ಹತ್ತಿ ಓಡಿಬಿಟ್ಟಿದ್ದಾಳೆ. ಪಾಪ, ಅಳ್ತಾ ನಿಂತಿತ್ತು. ನಾನು ಕಂಡು ಸೀನಪ್ಪನ ಹೋಟ್ಲಲ್ಲಿ ತಿಂಡಿ ಕೊಡಿಸಿ ಕರಕೊಂಡು ಬಂದೆ. ಟೇಷನ್ನಿಗೆ ಒಯ್ಯೋಣ ಅನ್ಕೊಂಡೆ. ....ಏನೋ ಹೊಳೀತು. ಹಂಗೇ ಈ ಕಡೆ ಬಂದೆ.

ಅಷ್ಟು ಹೊತ್ತಿಗಾಗಲೆ ಲಕ್ಷ್ಮಮ್ಮನಲ್ಲೂ ಆ ಯೋಚನೆ ಹೊಳೆದಿತ್ತು. ಬೀದಿಯ ಬಾಗಿಲ ಮೂಲಕ ಬಿದ್ದ ಬೆಳಕು, ತಲೆಯೆತ್ತಿ ನೋಡಿದ ಆ ಹುಡುಗಿಯ ಎಳೆಯ ಕಣ್ಣುಗಳಲ್ಲಿ ಮಿಂಚಿದಾಗ ಲಕ್ಷ್ಮಮ್ಮನ ಮೆದುಳಿನಲ್ಲಿ ಆ ಆಸೆ ಮಿಂಚಿ ಬೆಳಗಿತು.

ತನ್ನ ಕಸಬಿಗೆ ಕಣ್ಣು ಮುಖ್ಯ. ಅದಕ್ಕೆ ತಕ್ಕ ಕಣ್ಣುಗಳನ್ನು ಈ ಪುಟ್ಟ ಹುಡಗಿಗೆ ಇಟ್ಟು, ದೇವರು ತಾನಾಗಿಯೇ ಈ ಹೂವನ್ನು ಕರಿಯಪ್ಪನ ಸಂಗಡ ಕಳಿಸಿದ್ದಾನೆ, ಎಂದುಕೊಂಡಳು. ಸುಮ್ಮನೆ ನಿಂತಿದ್ದ ಹುಡುಗಿಯನ್ನು ಕುರಿತು

“ ಕೂತ್ಕೋಮ್ಮಾ....ಇವಳ ಹೆಸರೇನು ಅಂದ್ಹಾಗೆ....ನಿನ್ನ ಹೆಸರೇನಮ್ಮಾ ? ” ಎಂದು ಕೇಳಿದಳು.

ಕರಿಯಪ್ಪ “ ರತ್ನ” ಎಂದ.

“ ಅವಳೇ ಹೇಳಲಿ. ಏನಮ್ಮ ನಿನ್ನ ಹೆಸರು ? ”

“....”

“ ಹೇಳು....—ನಿಂಗೆ ಊಟ, ತಿಂಡಿ, ಆಟದ ಸಾಮಾನು ಎಲ್ಲ ಕೊಡ್ತೀನಿ. ಕಮಲೂ ಸ್ಕೂಲಿಂದ ಬರ್ತಾಳೆ. ಅವಳ ಜೊತೆ ನೀನು ಆಟ ಆಡ್ಕೊಂಡು ಸುಖವಾಗಿರ್ತೀಯೆ....ಹೇಳಮ್ಮ ನಿನ್ನ ಹೆಸರು ? ”

“ ರತ್ನ”—ತಲೆ ತಗ್ಗಿಸಿದ ಮುಖದಿಂದಲೇ ಉತ್ತರ ಬಂತು.

ಲಕ್ಷಮ್ಮನ ಮತ್ತು ಕರಿಯಪ್ಪನ ಪಾಲಿಗೆ ಅದು ರತ್ನವಾಗಿಯೇ ಇತ್ತು.

ಕರಿಯಪ್ಪ “ ಲಕ್ಷ್ಮೀ, ಇದು ಹಬ್ಬದ್ದು.” ಎಂದು ತಲೆ ತಗ್ಗಿಸಿ ನಕ್ಕ.

ಅದುವರೆಗೆ ಬಂದ ಹಬ್ಬದ ಉಡುಗೊರೆಗಳೆಲ್ಲಕ್ಕಿಂತ ಅದು ಹೆಚ್ಚು ಬೆಲೆ ಬಾಳುವಂಥದು. ಅದರಲ್ಲಿಯೂ ಅಂಥ ಇಂಥ ವಸ್ತುವಲ್ಲ ; ಮಾಟವಾದ ಕಣ್ಣಿನ ನೋಟದ ಮಾಟಗಾತಿ, ಮೂವತ್ತು ಮೀರಿದ ಲಕ್ಷಮ್ಮನಿಗೆ ರತ್ನಕ್ಕಿಂತ ಮಿಗಿಲಾಗಿಯೇ ಕಾಣಿಸಿದಳು. ತಾನು ಪ್ರಾರಂಭಿಸಿದ್ದ ವ್ಯಾಪಾರಕ್ಕೆ ಸಾಕಷ್ಟು ಬಂಡವಾಳ ಒದಗಿಸಬೇಕು, ಊರಿನ ಸೇವೆ ಮಾಡಿ ಮಾಡಿ ಸಾವಿರಾರು ರೂಪಾಯಿಯನ್ನು ಲಕ್ಷಾಂತರ ರೂಪಾಯಿ ಮಾಡಬೇಕು ಎಂಬ ಆಸೆ ಅಂಕುರಿಸಿ ಬೆಳೆದು ಬಳ್ಳಿಬಳ್ಳಿಯಾಗಿ ಹರಡಿದ್ದ ಲಕ್ಷಮ್ಮನ ಹೃದಯಕ್ಕೆ ಹೂವಿನಂತಿದ್ದ ಈ ಹುಡುಗಿಯ ಮುಖ ಆನಂದವನ್ನುಂಟುಮಾಡಿತು.

ತಲೆಯೆತ್ತಿ ನೋಡಿದ ಕರಿಯಪ್ಪ “ ಕಮಲವ್ವ ಎಲ್ಲಿ ಕಾಣೋಕಿಲ್ಲ ? ” ಎಂದ.

“ ಸ್ಕೂಲಿಗೆ ಹೋಗಿದ್ದಾಳೆ....ಇನ್ನೇನು ಬರೋ ಹೊತ್ತು”

ಬೀದಿಯ ಬಾಗಿಲ ಹತ್ತಿರ ಗೆಜ್ಜೆಯ ಶಬ್ದ ಕೇಳಿತು. ಮರುಕ್ಷಣದಲ್ಲಿಯೇ ಕಮಲ ಸ್ಲೇಟಿನ ಚೀಲ ಹಿಡಿದು ಪಡಸಾಲೆಗೆ ಓಡಿ ಬಂದಳು.

“ ಎಲಾ ಇವಳಾ !........ನೂರು ವರುಷ ಆಯಸ್ಸು! ನೆನಸ್ಕೊಂಡ್ ಕೂಡ್ಲೆ ಹಾಜರ್‍ರು” ಎಂದು ಕರಿಯಪ್ಪ ಕಮಲಳನ್ನು ಸೆಳೆದು ಆಲಿಂಗಿಸಿ ನುಡಿದ.

ಕಮಲ ಚೀಲದೊಡನೆಯೆ, ಕುರ್ಚಿಯ ಮೇಲೆ ಕುಳಿತಿದ್ದ ಕರಿಯಪ್ಪನ

ಎರಡು ಮಂಡಿಯ ಮಧ್ಯೆ ತಬ್ಬಿ ನಿಂತಳು. ಹುಡುಗಿಯ ಮುಂಗುರಳನ್ನು ನೇವರಿಸುತ್ತ ಕರಿಯಪ್ಪ “ ಏನವ್ವ ಸ್ಕೂಲಾಯ್ತು ? ” ಎಂದ.

“ ಆಯ್ತು. ಇವಳ್ಯಾರು ಮಾವು ? ” ಎಂದು ಕಮಲ ಕುತೂಹಲದಿಂದ ರತ್ನಳ ಕಡೆ ತೋರಿಸಿದಳು.

“ ರತ್ನ ಮರೀ. ನಿನ್ನ ತಂಗಿ ” ಎಂದು ಲಕ್ಷಮ್ಮ ಕರಿಯಪ್ಪನ ಕಡೆ ಕಣ್ಣು ಮಿಟುಕಿಸಿದಳು.

ಕರಿಯಪ್ಪನ ಕಣ್ಣು ಆ ಉತ್ತರಕ್ಕೆ ತನ್ನ ಒಪ್ಪಿಗೆಯನ್ನು ಸೂಚಿಸಿತು.

“ ರತ್ನಾ,....ಕಮಲು ನೀನು ಅಕ್ಕ ತಂಗಿ. ಆಡ್ಕೊಳ್ಳಿ ಹೋಗಿ........ ಕಮಲೂ, ಹಬ್ಬಕ್ಕೆ ಬಂದಿರೋ ಆಟದ ಸಾಮಾನು ತೋರಿಸೆ ನಿನ್ತಂಗೀಗೆ.... ಇಬ್ಬರೂ ಹೋಗಿ, ಅಡಿಗೆ ಆಗೋ ವರೆಗೂ ಕೋಣೇಲೀ ಆಟ ಆಡ್ತಾ ಇರಿ ” ಎಂದು ತಾಯಿ ಮಗಳಿಗೆ ಹೇಳಿ, ಇಬ್ಬರನ್ನೂ ಪಡಸಾಲೆಯಿಂದ ಆಚೆ ಕಳಿಸುವ ಏರ್ಪಾಟು ಮಾಡಿದಳು. ಹೊಸದಾಗಿ ಬಂದ ಬಣ್ಣದ ಸಾಮಾನಿನ ಸೆಟ್ಟು, ಟೇಪು, ಬೊಂಬೆ, ಗಾಡಿ—ಎಲ್ಲ ತನ್ನ ತಂಗಿಗೆ ತೋರಿಸಲು ಕಮಲು ಉತ್ಸಾಹ ದಿಂದ “ ಬಾಮ್ಮ ರತ್ನಾ ಆಡೋಣ ” ಎಂದು ತಬ್ಬಿ ಕರೆದಳು.

“ ಏ, ರತ್ನ ಅಂತೀಯೇನೇ........ತಂಗೀ ಅನ್ನು” ಎಂದು ಲಕ್ಷಮ್ಮ ಮಗಳನ್ನು ತಿದ್ದಿದಳು.

ಕಮಲು “ ಬಾ ತಂಗಿ ಹೋಗೋಣ ” ಎಂದು ಕೈಹಿಡಿದು ಎಳೆದಳು. ರತ್ನ ತಲೆಯೆತ್ತಿ ಕರಿಯಪ್ಪನ ಮುಖವನ್ನೊಮ್ಮೆ ಲಕ್ಷಮ್ಮನ ಮುಖವನ್ನೊಮ್ಮೆ ನೋಡಿದಳು. ಇಬ್ಬರ ಮುಖದಲ್ಲಿಯೂ ಮಮತೆಯ ಮಂದಹಾಸ ಮಿನುಗು ತ್ತಿತ್ತು. ಕಣ್ಣೂ, ತುಟಿಯೂ ‘ ಹ್ಞು, ಹೋಗು ಆಡಮ್ಮಾ, ಇದು ನಿನ್ನ ಮನೆ ’ ಎಂದುವು.

ತಂಗಿಯ ಕೈಹಿಡಿದುಕೊಂಡು ಕುಣಿಯುತ್ತಾ ಓಡಿದ ಕಮಲಳ ಹಿಂದೆ ಹೊಸ ಗೆಳತಿಯಂತೆ ನಡೆದಳು........

ಕರಿಯಪ್ಪ “ ಲಕ್ಷ್ಮೀ, ಇದು ಗುಟ್ಟಾಗಿರಬೇಕು........ಆಮೇಲೆ ನನ್ನ ತಲೆಗೆ ಬಂದೀತು ! ” ಎಂದ.

“ ಛೆ, ಅದಕ್ಕೇ ನಾನು ಮರೀಗೆ ನಿನ್ನ ತಂಗಿ ಎಂದು ಹೇಳಿದ್ದು. ಯಾರಾ ದರೂ ಕೇಳಿದರೆ ಹೇಳೋಣ, ಅದಕ್ಕೇನು—ನನ್ನ ತಂಗಿ ಮಗಳೂಂತ.”

" ನೀನು ಹೇಳ್ತೀಯೆ........ಆದರೆ ಹುಡುಗಿ ? "

" ಆ ವಿಷಯ ನನಗೆ ಬಿಡಿ."

" ಸರಿ. ನಾನೂ ಸರಿಯಾಗಿ ಹೇಳಿದೀನಿ ಟೀಷನ್ನಿನಲ್ಲಿ ಚೆನ್ನಾಗಿ ಹೊಡೀತಾರೇಂತ. ಹುಡುಗೀಗೂ ಯಾಕೋ ಅವರಮ್ಮನ ಜೊತೆ ಇರುವ ಇಷ್ಟವಿರಲಿಲ್ಲ. ಅದಕ್ಕೇ ಅದು ಸಲೀಸಾಗಿ ಇಲ್ಲಿಗೆ ಬಂತು " ಎನ್ನುತ್ತ ರುಮಾಲನ್ನು ತಲೆಯ ಮೇಲಿಟ್ಟುಕೊಂಡು ಮೇಲೆದ್ದ ಕರಿಯಪ್ಪ ಕೈ ಜಾಡಿಸಿಕೊಂಡು " ಇನ್ನು ನಾನು ಬರ್ತೀನಿ " ಎಂದ.

ದಾರಿ ತಪ್ಪಿದ ಹುಡುಗಿಯನ್ನು ವಾರಸುದಾರರಿಗೆ ತಲಪಿಸುವುದು ಕಾನ್ ಸ್ಟೇಬಲ್ ಕರ್ತವ್ಯ ಎಂದು ಜನ ನಂಬಿದ್ದರು. ಅವರು ಅವನ ಕೈಯಲ್ಲಿಟ್ಟ ಹುಡುಗಿಗೆ ಅತ್ಯಂತ ಅನುಕೂಲವಾದ ಜೋಪಾನವಾದ ನೆಲೆಕಾಣಿಸಿ, ಕೈಜಾಡಿಸಿಕೊಂಡ ಭೂಪತಿ ಕರಿಯಪ್ಪ ಎರಡರಲ್ಲಿ ಗೆದ್ದಿದ್ದ.

ಲಕ್ಷಮ್ಮನಿಗೆ ಯುಗಾದಿ ಹಬ್ಬದ ಉಡುಗೊರೆ ಕೊಡಲು ಕಾಸಿಲ್ಲದಾಗ ಆ ಬರಿಗೈಯಿಗೆ ಈ ರತ್ನ ಸಿಕ್ಕಿತು. ತನ್ನ ಬಗ್ಗೆ ಆಗಲೆ ಅರೆ ಮನಸ್ಸು ಮಾಡಿಕೊಂಡಿದ್ದ ಲಕ್ಷಮ್ಮನ ಪೂರ್ಣ ಕಟಾಕ್ಷವನ್ನು ಪುನಃ ಸಂಪಾದಿಸಲು ಏನಾದರೂ ವಿಶ್ವಪ್ರಯತ್ನ ಮಾಡಬೇಕಾಗಿತ್ತು. ದೇವರು ಎರಡಕ್ಕೂ ದಾರಿ ತೋರಿಸಿ ಅವನನ್ನು ಕಾಪಾಡಿದ.

ಲಕ್ಷಮ್ಮ ಬಾಗಿಲ ಮರೆಯಲ್ಲಿ ನಿಂತು ನಗುತ್ತ " ಯಾವಾಗ ಮತ್ತೆ ? " ಎಂದಳು.

ಮೆಟ್ಟಿಲು ಇಳಿದ ಕರಿಯಪ್ಪ " ಬರ್ತೀನಿ " ಎಂದು ನಕ್ಕ.

೪

ಕಮಲ ರತ್ನಳನ್ನು ಬಹಳ ಬೇಗ ಚೆನ್ನಾಗಿ ಒಗ್ಗಿಸಿಕೊಂಡುಬಿಟ್ಟಳು.

ಅಚ್ಚುಕಟ್ಟಾದ ಸ್ನಾನ, ಶುಭ್ರವಾಗಿ ಒಗೆದ ಕಮಲಳ ಲಂಗ ಅಂಗಿ, ಊಟ ಆಗುವ ಹೊತ್ತಿಗೆ ರತ್ನ ಅದೇ ಮನೆಯಲ್ಲಿಯೇ ಹುಟ್ಟಿ ಬೆಳೆದಂತಾಗಿ ಬಿಟ್ಟಳು. ಅವಳ ಅಮ್ಮ ಅವಳನ್ನು ಅಷ್ಟು ಅಕ್ಕರೆಯಿಂದ ಕಾಣುತ್ತಿರಲಿಲ್ಲ. ಸದಾ ಏನಾದರೂ ನೆಪ ಹಾಕಿಕೊಂಡು ಬಯ್ಯುತ್ತಿದ್ದಳು. ಚಿಕ್ಕಮ್ಮನ ಊರಿಗೆ ಕರೆದುಕೊಂಡುಹೋಗಿ ಬಿಡುತ್ತೇನೆ, ಎಂದು ಅಮ್ಮ ಹೇಳಿದಾಗ ಮನಸ್ಸಿಗೆ

ಆನಂದವಾಯಿತು. ಚಿಕ್ಕಮ್ಮನ ಮನೆಯಲ್ಲಿ ಚೆನ್ನಾಗಿರಬಹುದು ಎಂದುಕೊಂಡಿದ್ದಳು. ಆದರೆ, ಆ ತಾಯಿ ಎನಿಸಿಕೊಂಡವಳು ಮಧ್ಯದಲ್ಲಿಯೇ ಕೈಬಿಟ್ಟು ಹೋದಳು. ಅವಳು ಕೈಬಿಟ್ಟ ಮಾತ್ರಕ್ಕೆ ದೇವರು ಕೈಬಿಡುತ್ತಾನೆಯೆ! ಚಿಕ್ಕಮ್ಮನ ಮನೆಯ ಬದಲು ದೊಡ್ಡಮ್ಮನ ಮನೆಗೆ ತಲಪಿಸಿದ್ದ. ಕಮಲ, ಲಕ್ಷಮ್ಮ, ಮೊದಲು ಅಡಿಗೆ ಮಾಡುತ್ತಿದ್ದ, ಆಮೇಲೆ ಇಬ್ಬರಿಗೂ ಸ್ನಾನ ಮಾಡಿಸಿದ, ಅನಂತರ ಮೂವರಿಗೂ ಬಡಿಸಿದ ನಂಜುಂಡಿ—ಈ ಮೂವರೂ ತನ್ನ ಹತ್ತಿರದ ಬಂಧುಗಳಂತೆ ಕಂಡರು—ಅವಳಿಗೆ ಅಂಥ ಬಂಧುಗಳೇ ಇಲ್ಲದಿದ್ದುದರಿಂದ.

ಅಂದು ರಾತ್ರಿ ಮಲಗಿದ್ದಾಗ ಹುಡುಗಿಗೆ ಏಕೋ ನಿದ್ದೆ ಬರಲಿಲ್ಲ. ಇಬ್ಬರು ಹುಡುಗರೂ ನಡುಮನೆಯಲ್ಲಿ ಮಲಗಿದ್ದರು. ನಂಜುಂಡಿ ಪಡಸಾಲೆಯಲ್ಲಿ ಮಲಗಿಕೊಂಡಿದ್ದ. ಲಕ್ಷಮ್ಮ ಒಬ್ಬಳೇ ಕೋಣೆಯಲ್ಲಿ ಮಂಚದ ಮೇಲೆ ಇದ್ದಳು.

ಸುಮಾರು ಹನ್ನೆರಡು ಗಂಟೆಯ ಹೊತ್ತಿನಲ್ಲಿ ಹುಡುಗಿ ಬಿಕ್ಕಿಬಿಕ್ಕಿ ಅಳುವುದಕ್ಕೆ ಮೊದಲು ಮಾಡಿತು. ರತ್ನ ಎಂದು ದನಿಯಲ್ಲಿಯೇ ಗುರುತಿಸಿದ ಲಕ್ಷಮ್ಮ ಎದ್ದು ಬಂದು ನೋಡಿದಳು. ರತ್ನ ಹಾಸಿಗೆಯ ಮೇಲೆ ಎದ್ದು ಕುಳಿತು ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ಲಕ್ಷಮ್ಮನಿಗೆ 'ಅಯ್ಯೊ ಪಾಪ' ಎನ್ನಿಸಿತು. ಅಲ್ಲಿಯೇ ಮಾತಾಡಿಸಿದರೆ ಕಮಲ ಎದ್ದುಬಿಟ್ಟಾಳೆಂದು ರತ್ನಳನ್ನು ಎತ್ತಿ "ಬಾಮ್ಮ ಅಳಬೇಡ....ನನ್ನ ಹತ್ತಿರ ಮಲಕ್ಕೋ" ಎಂದು ಕೋಣೆಗೆ ಕರೆದುಕೊಂಡು ಹೋಗಿ ಬಾಗಿಲು ಹಾಕಿದಳು.

ಅತ್ಯಂತ ಪ್ರಕಾಶಮಾನವಾದ ತೂಗುದೀಪ ಕೋಣೆಯಲ್ಲಿ ಉರಿಯುತ್ತಿತ್ತು. ದೊಡ್ಡ ಚಪ್ಪರ ಮಂಚದ ಮೇಲೆ ಹಾಸಿದ್ದ ಎರಡು ಹಾಸಿಗೆಯ ಮೇಲೆ ರತ್ನಳನ್ನು ಎತ್ತಿ ಕೂಡಿಸಿದಳು. ರತ್ನಳ ದುಃಖ ಮಿತಿಮೀರಿತು. ಜೋರಾಗಿ ಅಳತೊಡಗಿದಳು.

"ಷ್‌ಷ್‌ಷ್....ಅಳಬಾರದು. ಎಲ್ಲ ಎದ್ದುಬಿಡ್ತಾರೆ....ನಿಂಗೇನುಬೇಕು ಹೇಳು....ಏನಾಗುತ್ತೆ ನಿಂಗೆ?....ನೀರು ಬೇಕ?" ಎಂದು ಲಕ್ಷಮ್ಮ ಪಕ್ಕದಲ್ಲಿ ಕುಳಿತುಕೊಂಡು, ಕೆದರಿದ ತಲೆಗೂದಲು ಸವರುತ್ತ ಕೇಳಿದಳು.

ಹುಡುಗಿಯ ಅಳು ಸ್ವಲ್ಪ ಕಡಮೆ ಆಯಿತು. ಆದರೆ 'ಊ್ಞ' ರಾಗ ಇನ್ನೂ ನಿಲ್ಲಲಿಲ್ಲ.

" ಥೂ ಅಳಬಾರದಮ್ಮ....ನಿಂಗೇನು ಬೇಕು ಹೇಳು. ಅಮ್ಮನ ಹತ್ತಿರ ಹೋಗ್ತೀಯಾ ? " ಎಂದಳು.

ತಕ್ಷಣವೆ " ಉಹ್ಞು " ಎಂದು ಉತ್ತರ ಬಂತು. ಈ ಉತ್ತರ ಲಕ್ಷಮ್ಮನನ್ನು ಕೆರಳಿಸಿತು.

ತಾಯಿಯ ಹತ್ತಿರ ಹೋಗುತ್ತೀಯಾ, ಎಂದರೆ ಕಡ್ಡಿ ಮುರಿದಂತೆ 'ಉಹ್ಞು' ಎಂಬ ಉತ್ತರ. ತಪ್ಪಿಸಿಕೊಂಡ ಎಳೆಯ ಹುಡುಗಿಯ ಬಾಯಿಂದ ಈ ಉತ್ತರ ಬರುವುದನ್ನುಆಕೆ ಕನಸಿನಲ್ಲಿಯೂ ಕಂಡಿರಲಿಲ್ಲ. ಆದರೆ ಈ ಹುಡುಗಿ ಆ ಉತ್ತರಕೊಟ್ಟು ಬೆರಗುಮಾಡಿದಳು.

" ಯಾಕಮ್ಮ ಅಮ್ಮ ನಿಂಗೆ ಬೇಡ್ವಾ ! ಅಮ್ಮ ಎಲ್ಲಮ್ಮಾ?........ ಊರಿಗೆ ಹೊರಟೋದ್ಲಾ ನಿನ್ಬಿಟ್ಬಿಟ್ಟು ?........ನಿಂಗೆ ಸಿಟ್ಟಾ ನಿಮ್ಮಮ್ಮನ ಮೇಲೆ ? " ಎಂದು ಲಕ್ಷಮ್ಮ ಒಂದಾದಮೇಲೊಂದು ಪ್ರಶ್ನೆ ಹಾಕಿದಳು—ಹುಡುಗಿ ಒಂದಕ್ಕೂ ಉತ್ತರಕೊಡುವುದಿಲ್ಲವೆಂದು ತಿಳಿದು. ಆದರೆ ರತ್ನ ಎಲ್ಲ ಪ್ರಶ್ನೆಗಳಿಗೂ ಸರಿಯಾದ ಉತ್ತರ ಕೊಡುವ ಶಕ್ತಿ ಪಡೆದಿದ್ದಳು. ಉತ್ತರ ಕೊಡುತ್ತೇನೆ ಎಂಬುದನ್ನು ಸೂಚಿಸಲೋ ಎಂಬುವಂತೆ ಅಳುವನ್ನು ನಿಲ್ಲಿಸಿಬಿಟ್ಟಳು. ಆದರೂ ಬಿಕ್ಕಳಿಕೆ ಉಕ್ಕಿಉಕ್ಕಿ ಬರುತ್ತಿತ್ತು. ಬಿಕ್ಕುತ್ತಲೇ,

" ನಂಗೇನೂ ಬೇಡ........ಅಣ್ಣ........" ಎಂದು ಅಳತೊಡಗಿದಳು. ' ಅಣ್ಣ ' ಎಂಬ ಮಾತು ಬಂದಕೂಡಲೆ ಕಣ್ಣೀರು ತುಂಬಿ ಹರಿಯಿತು. ಅಳು ಉಕ್ಕಿ ಬಂತು.

" ಯಾರಮ್ಮ ನಿಮ್ಮಣ್ಣ ? "

" ನಮ್ಮಣ್ಣ....ನ-ಮ್ತಂ-ದೆ "

" ಎಲ್ಲಿದಾರಮ್ಮ ? "

" ಇಲ್ಲ...." ಅಳು ಜೋರಾಯಿತು.

" ಥೂಥು........ಅಳಬಾರದು........ಪ್ಪೋಲೀಸ್ನೋರು ಬಂದುಬಿಡ್ತಾರೆ. ಆಮೇಲೆ ಹಿಡಕೊಂಡುಹೋಗಿ ಕರಿಯಪ್ಪ ಹೇಳಿದರಲ್ಲ ಹಾಗೆ ಕೋಣೇಲಿ ಕೂಡಿಹಾಕಿಬಿಡ್ತಾರೆ " ಎಂದು ಹೆದರಿಸಿದ್ದಾಯಿತು.

ಅಳು ಹೆಚ್ಚಾಗಲಿಲ್ಲ. ಲಕ್ಷಮ್ಮ ಐದು ನಿಮಿಷ ಸುಮ್ಮನೆ ಕುಳಿತಳು....

ರತ್ನ ಅಳುವನ್ನು ನಿಲ್ಲಿಸಿದಳು. ಆದರೂ ದುಃಖ ಒಳಗಿತ್ತು. ಕಣ್ಣೀರಿ

ನಲ್ಲಿ ಮಿಂದಿದ್ದ ಎರಡು ಕೈಗಳಿಂದಲೂ ಕಣ್ಣನುಜ್ಜಿಕೊಳ್ಳುತ್ತಿದ್ದಳು. ಅವಳ ಮುಖ ಮತ್ತು ಮುಂಗೈಗಳು ಕೆಂಪಗಾಗಿದ್ದುವು.

ಹುಡುಗಿ ಸಮಾಧಾನ ತಂದುಕೊಂಡಳೆಂದು ತಿಳಿದು ಲಕ್ಷಮ್ಮ,

" ಯಾಕೆ ರತ್ನ ಅತ್ತಿದ್ದು ? ಇಲ್ಲೇ ಪಾಚೋ ನೀನು "—ಎಂದು ಮೈ ದಡವಿ, ಮಲಗಿಸಲು ಪ್ರಯತ್ನಿಸಿದಳು.

"ಇಲ್ಲ" ಎಂದು ಹಾಗೆಯೇ ಹಾಸಿಗೆಯ ದಿಂಬಿಗೆ ಒರಗಿ ಹುಡುಗಿ ಮಲಗಿಕೊಂಡಿತು.

" ಮತ್ತೆ ಯಾಕೆ ಅತ್ತಿದ್ದು ? "

" ಇಲ್ಲ "—ಮತ್ತೆ ದುಃಖ ತುಂಬಿ ಬಂತು. ಅಳುವುದಕ್ಕೆ ಮೊದಲು ಮಾಡಿತು.

" ಥೂ ಅಳಬಾರದಮ್ಮ....ನೀನು ದಡ್ಡಿ ಆಗ್ಬಿಡ್ತೀಯೆ....ನಿಂಗೇನು ಬೇಕು ಹೇಳು.... ಅನ್ನ ಬೇಕ ? "

" ಇಲ್ಲ—ಅಣ್ಣ ? " ಎಂದು ಹುಡುಗಿ ಅಳುವುದನ್ನು ಮುಂದುವರಿಸಿದಳು.

"ಅಣ್ಣ ಎಲ್ಲಿದಾರಮ್ಮ ? "

" ಇಲ್ಲ."

" ಅಮ್ಮ ? "

" ಅಮ್ಮ ಇಲ್ಲ."

ಪಾಪ, ಈ ಮಾತು ಕೇಳಿ ಲಕ್ಷಮ್ಮನಿಗೆ ತುಂಬ ದುಃಖವಾಯಿತು. ಅಪ್ಪ ಅಮ್ಮ ಇಬ್ಬರನ್ನೂ ಕಳೆದುಕೊಂಡ ತಬ್ಬಲಿ ಮಗು ಇರಬಹುದು. ಆ ಮಗುವಿನ ಮುಖವನ್ನೇ ನೋಡುತ್ತ ಸುಮ್ಮನೆ ಕುಳಿತಳು. ಅತ್ತು ಅತ್ತು ಕೆಂಪಗಾಗಿದ್ದ ಕಣ್ಣುಗಳನ್ನು ತೋರಿಸಲಾರೆನೆಂದು ಅರೆಮಡಿಸಿದ ಎಡ ತೋಳು ಎರಡು ಕಣ್ಣುಗಳನ್ನೂ ಮುಚ್ಚಿಕೊಂಡಿತ್ತು. ಮಧ್ಯಾಹ್ನ ಹನ್ನೊಂದು ಗಂಟೆಯಲ್ಲಿ ಸ್ನಾನಮಾಡಿ ಹಾಕಿಕೊಂಡ ಕಮಲಳ ಲಂಗ ಅಂಗಿ ನೆಂದು ಒದ್ದೆಯಾಗಿತ್ತು. ಮಾಸಿ ಮುದುಡಿ ಹೋಗಿತ್ತು. ಅಳು ನಿಂತಿದ್ದರೂ ಹೃದಯ ಒಳಗೆ ಅಳುತ್ತಿತ್ತೊ, ಏನೊ ! ಅದರ ಫಲವಾಗಿ ಎದೆ ಬಿಕ್ಕಳಿಕೆಯೊಡನೆ ಉಬ್ಬುತ್ತಿತ್ತು ; ಬಿಸಿಯುಸಿರಿನೊಡನೆ ಕುಗ್ಗುತ್ತಿತ್ತು.

'ಅಮ್ಮ ಇಲ್ಲ'—ಆಶ್ಚರ್ಯ!

ತಾಯಿ ಹೆತ್ತ ಮಗಳನ್ನು ನೀರು ಕುಡಿಸುವ ನೆಪದಿಂದ ಬಸ್ ನಿಲ್ದಾಣದಲ್ಲಿ ಇಳಿಸಿ, ನಲ್ಲಿಯ ಹತ್ತಿರದಲ್ಲಿದ್ದ ಮಗುವನ್ನು ಅಲ್ಲಿಯೇ ಬಿಟ್ಟು, ಬಸ್ಸಿನಲ್ಲಿ ಪರಾರಿಯಾದ ಸಂಗತಿಯನ್ನು ಕರಿಯಪ್ಪನ ಬಾಯಿಂದ ಕೇಳಿದಾಗ ಲಕ್ಷಮ್ಮ 'ಅವಳೆಂಥ ತಾಯಿಯಪ್ಪ!' ಎಂದುಕೊಂಡಿದ್ದಳು.

ಈಗ ತಿಳಿಯಿತು ಅವಳಿಗೆ ತಾಯಿ ಇಲ್ಲ ಎಂಬುದು.

ಆ ವಾರಸುದಾರಳೆನ್ನಿಸಿಕೊಂಡವಳು ಹುಡುಗಿ ಕಳೆದು ಮೂರು ದಿನವಾದರೂ ಯಾವ ಸ್ಟೇಷನ್ನಿನಲ್ಲೂ ಕಂಪ್ಲೇಂಟು ಕೊಡದಿದ್ದುದನ್ನು ನೋಡಿದ ಮೇಲೆ ತಾಯಿ ಇಲ್ಲ, ತಂದೆ ಇಲ್ಲ; ಈ ಜಗತ್ತಿನಲ್ಲಿ ಆ ಹುಡುಗಿಗೆ ಲಕ್ಷಮ್ಮನನ್ನು ಬಿಟ್ಟರೆ ವಾರಸುದಾರರೇ ಇಲ್ಲ, ಎನ್ನಿಸಿತು.

ಮಲಗಿದ ಹುಡುಗಿಯ ಕಡೆ ನೋಡಿದಳು.

ಅತ್ತು ಅತ್ತು ಆಯಾಸವಾಗಿದ್ದ ಹುಡುಗಿಗೆ ಗಾಢನಿದ್ರೆ ಬಂದಿತ್ತು.

೫

ಬೆಂಗಳೂರಿನ ಬ್ಯಾಂಕ್ ಒಂದರಲ್ಲಿ ನರಸಿಂಹ ಕಾಮತ್ ಕ್ಯಾಷಿಯರ್ ಆಗಿದ್ದ. ಅವನ ಹೆಂಡತಿ ಸುಗುಣಾಬಾಯಿ ನಾಲ್ಕು ವರುಷದ ರತ್ನಳನ್ನು ಬಿಟ್ಟು, ಹುಟ್ಟಬೇಕಾಗಿದ್ದ ಹೊಸ ಕೂಸನ್ನು ಹೊಟ್ಟೆಯಲ್ಲಿಯೇ ಇಟ್ಟುಕೊಂಡು ಕಣ್ಣು ಮುಚ್ಚಿದಳು. ನರಸಿಂಹ ಕಾಮತ್ ಎರಡನೆಯ ಮದುವೆ ಮಾಡಿಕೊಳ್ಳಲು ಇಷ್ಟಪಡಲಿಲ್ಲ. ಆದರೆ ಅವನ ಸ್ನೇಹಿತರು ಇವನನ್ನು ಬಿಡಲಿಲ್ಲ. ಬಲವಂತದಿಂದ, ತಾಯಿ ತಂದೆ ಇಲ್ಲದೆ ಜೀವನ ಕಳೆಯುವುದೇ ಕಷ್ಟವಾಗಿದ್ದ ಇಪ್ಪತ್ತು ವರುಷದ ಸುಂದರ ಯುವತಿ ವನಜಳನ್ನು ಗಂಟುಹಾಕಿದರು. ಪುಟ್ಟ ರತ್ನಳಿಗೆ ಒಬ್ಬ ತಾಯಿ ಬೇಕಲ್ಲ ಎಂದುಕೊಂಡು ಇವನೂ ಸಮಾಧಾನಪಟ್ಟುಕೊಂಡ. ಆದರೆ ಆತ ಒಂದು ವರುಷವೂ ಅವಳೊಡನೆ ಸಂಸಾರ ಮಾಡಲಿಲ್ಲ. ಮದುವೆಯಾದ ಆರು ತಿಂಗಳಲ್ಲಿಯೇ ಹೊಸ ಹೆಂಡತಿ ಹಳೆಯ ಮಗಳನ್ನು ನೋಡಿಕೊಳ್ಳುವ ರೀತಿಯನ್ನು ಕಂಡು ನಿರಾಸೆಗೊಂಡಿದ್ದ ಆತನಿಗೆ ಕಾಲರಬೇರೆ ತಗುಲಿ ಈ ಲೋಕ ಬಿಟ್ಟುಬಿಟ್ಟ. ತಂದೆತಾಯಿ ಇಬ್ಬರನ್ನೂ ಕಳೆದುಕೊಂಡ ಮಗುವಿನಿಂದ, ಮನಸ್ಸಿಲ್ಲದ ಮದುವೆಗೆ—ಏನೋ ಆಗಲಿ, ಹೊಟ್ಟೆಯ

ಪಾಡು ಕಳೆದೀತಲ್ಲ ಎಂದು ಒಪ್ಪಿಕೊಂಡಿದ್ದ ವನಜಳಿಗೆ ಶನಿ ಗಂಟುಬಿದ್ದಹಾಗಾಯಿತು. ದುಡಿಯುವಾತ ಕಣ್ಣು ಮುಚ್ಚಿದ ಮೇಲೆ ದಿನ ಕಳೆಯುವುದು ಹೇಗೆ? ಆಸ್ತಿಪಾಸ್ತಿ ಹಣಕಾಸು ಒಂದೂ ಇಲ್ಲದೆ, ಬಾಡಿಗೆ ಮನೆಯಲ್ಲಿದ್ದ ವನಜಳಿಗೆ ಜೀವನ ಬೇಡವಾಯಿತು. ಏನೇನೋ ಯೋಚಿಸಿದಳು. ಕಡೆಗೆ ಒಂದು ಉಪಾಯ ಹೊಳೆಯಿತು. ಎಷ್ಟೋ ಮಂದಿ ಬಡ ಹೆಂಗಸರು ಕ್ರೈಸ್ತ ಮತಕ್ಕೆ ಸೇರಿ ನೆಮ್ಮದಿಯಿಂದ ಜೀವನ ಮಾಡುತ್ತಿದ್ದುದನ್ನು, ಕಾನ್ವೆಂಟಿನಲ್ಲಿ ಕೆಲವು ದಿನ ಓದು ಕಲಿತಿದ್ದ ಅವಳು ಕಣ್ಣಾರ ಕಂಡಿದ್ದಳು. ತನ್ನ ಗೆಳತಿ ಮೇರಿಗೆ ತಿಳಿಸಿದರೆ ಅವಳು ತಕ್ಕ ಏರ್ಪಾಟು ಮಾಡುವಳೆಂದುಕೊಂಡು, ಫ್ರೇಸರ್ ಟವನಿನಲ್ಲಿದ್ದ ಅವಳ ಮನೆಗೆ ಹೋದಳು. ಅವಳಿಂದ ತನ್ನ ಇಚ್ಛೆ ನೆರವೇರುವಂತಾಯಿತು. ಮಿಲಿಟರಿಯಲ್ಲಿ ಕೆಲಸಕ್ಕಿದ್ದ ಡೇವಿಡ್‌ಗೆ ಇನ್ನೂ ಮದುವೆ ಆಗಿರಲಿಲ್ಲ ಅವನೂ ಐದು ವರುಷಗಳ ಹಿಂದೆ ಕ್ರೈಸ್ತಮತಕ್ಕೆ ಸೇರಿದ್ದ. ಹೊಸದಾಗಿ ಆ ಮತಕ್ಕೆ ಸೇರಿದವಳಾದರೂ ಚಿಂತೆಯಿಲ್ಲ, ಇಪ್ಪತ್ತು ವರುಷ ಮೀರಿದ ಸುಂದರ ಯುವತಿಯನ್ನು ತಾನು ಮದುವೆಯಾಗುವುದಾಗಿ ಮೇರಿಯ ಅಣ್ಣನೊಡನೆ ಆತ ಅನೇಕ ಬಾರಿ ಹೇಳಿದ್ದ. ಮಾತುಕತೆ ನಡೆಯಿತು.

'ರತ್ನಳನ್ನು ಅವಳ ತಂದೆತಾಯಿ ಕಡೆಯ ಬಂಧುಗಳಿಗೆ ತಲಪಿಸಿ ವನಜ ಒಬ್ಬಳೇ ಕ್ರೈಸ್ತಮತಕ್ಕೆ ಸೇರುವುದಾದರೆ, ಈ ಸಂಬಂಧಕ್ಕೆ ನಾನು ಒಪ್ಪಿದ್ದೇನೆ' ಎಂದು ಡೇವಿಡ್ ಹೇಳಿದ. ಹುಡುಗಿಯ ಬಂಧುಗಳ ವಿಳಾಸ ತಿಳಿಯದ, ಪರಿಚಯವಿಲ್ಲದ ವನಜ ಈಗ ಏನುಮಾಡಬೇಕೆಂದು ಯೋಚಿಸಿದಳು. ಅವಳೂ ಏಕೆ ಕ್ರಿಶ್ಚಿಯನ್ ಆಗಬಾರದು ಎನ್ನಿಸಿದಾಗ—ಛೆ! ಆಮೇಲೆ ಅವಳ ತಂದೆಯ ಸ್ನೇಹಿತರು ಸೇರಿ ಗಲಾಟೆಮಾಡಿಬಿಟ್ಟಾರು, ಎಂದುಕೊಂಡಳು. ಬಹಳ ಹೊತ್ತು ಯೋಚನೆಮಾಡಿ ಕಡೆಗೆ ಒಂದು ಉಪಾಯ ಹುಡುಕಿದಳು. ಕೆಸ್ತೂರಿನಲ್ಲಿ ಆ ಹುಡುಗಿಯ ಚಿಕ್ಕಮ್ಮ ಇದ್ದಾಳೆ ಎಂದು ಕೇಳಿದ್ದಳು. ಅಲ್ಲಿಗೆ ಅವಳನ್ನು ಒಯ್ದು ಬಿಡಲು ಕೈಯಲ್ಲಿ ದುಡ್ಡಿರಲಿಲ್ಲ. ಮೇರಿಗೆ ಈ ವಿಷಯ ತಿಳಿಸಿದಾಗ ಈ ಏರ್ಪಾಟಿನ ಬಗ್ಗೆ ಅವರಿಬ್ಬರೂ ಬಹಳ ಹೊತ್ತು ವಿಚಾರಮಾಡಿದರು.

"ಊರಿಗೆ ಹೋಗಿ, ಅವಳ ಚಿಕ್ಕಮ್ಮನಿಗೆ ಏನು ಹೇಳುವುದು? ಅವಳನ್ನು ತಾನು ಹೇಗೆ ಗುರುತಿಸುವುದು? ಎಂದೂ ನೋಡದ ಈ ಹುಡಗಿಯನ್ನು ಅವಳು ತಾನೇ ಹೇಗೆ ಗುರುತಿಸಿಯಾಳು? ಅವರ ಚಿಕ್ಕಮ್ಮ ಈ ಹುಡುಗಿ

ಯನ್ನು ಇಟ್ಟುಕೊಳ್ಳಲು ಇಷ್ಟಪಡದಿದ್ದರೆ? ಆ ಊರಿನಲ್ಲಿಯೇ ಇಲ್ಲದಿದ್ದರೆ? ಇದ್ದರೂ ಅವಳ ಮನೆ ಸಿಕ್ಕದಿದ್ದರೆ? ತಾನು ಮತ್ತು ಆ ಹುಡುಗಿ ಎಲ್ಲಿ ಉಳಿದುಕೊಳ್ಳುವುದು? ಅವರು ತನ್ನ ಪಾಡು ಏನು, ಎಂದು ಕೇಳಿದರೆ ಏನು ಹೇಳಬೇಕು? ಛೆ, ಈ ವಿಚಾರಕ್ಕೆ ಇಷ್ಟೆಲ್ಲ ಏಕೆ ಯೋಚಿಸಬೇಕು? ಬೆಂಗಳೂರಿನಲ್ಲಿಯೇ ಇರುವ ಅನಾಥಾಶ್ರಮಕ್ಕೆ ಏಕೆ ಸೇರಿಸಬಾರದು?....ಅವಳ ರೂಪ, ಕಣ್ಣು ನೋಡಿದರೆ, ಯಾರಿಗಾದರೂ ಅವಳನ್ನು ಹತ್ತಿರ ಇಟ್ಟುಕೊಂಡಿರೋಣ ಎನ್ನಿಸುತ್ತದೆ, ವನಜಳಿಗೂ ಎಷ್ಟೋ ಬಾರಿ ಹಾಗೆನ್ನಿಸಿತ್ತು. ಆದರೆ, ಅದೇಕೊ ಡೇವಿಡ್ 'ಆ ಹುಡುಗಿ ಬೆಂಗಳೂರಿನಲ್ಲಿದ್ದರೆ, ನನಗೆ ಈ ಹೆಣ್ಣು ಬೇಡ' ಎಂದು ಹೇಳಿಬಿಟ್ಟಿದ್ದಾನೆ. ತನ್ನ ಹೆಂಡತಿಯಾಗುವವಳ ಹಿಂದಿನ ಜಾತಿಯ ಬಂಧು ತನ್ನ ಕಣ್ಣೆದುರಿಗೆ ಜೀವಿಸುವುದನ್ನು ನೋಡಿ ಆತ ಸಹಿಸುವಂತಿರಲಿಲ್ಲ. ಆದ್ದರಿಂದ ಹುಡುಗಿಯನ್ನು ಬೆಂಗಳೂರಿನಲ್ಲಿ ಇಟ್ಟುಕೊಳ್ಳುವ ಹಾಗೇ ಇಲ್ಲ.

ವಿಚಾರ ಮಾಡಿಮಾಡಿ ಸಾಕಾಯಿತು. ಕೊನೆಗೂ ಒಂದು ವಿಚಿತ್ರ ಉಪಾಯವನ್ನೇ ಇಬ್ಬರೂ ಒಪ್ಪಿಕೊಂಡರು.

'ಹುಡುಗಿಯನ್ನು ಕೆಸ್ತೂರಿಗೆಂದು ಕರೆದುಕೊಂಡು ಹೋಗುವುದು. ದಾರಿಯ ಯಾವುದಾದರೂ ದೊಡ್ಡ ಊರಿನಲ್ಲಿ ಬಸ್ಸು ನಿಂತಾಗ, ತುಂಬ ಗಲಾಟೆ ಇದ್ದರೆ, ಐದಾರು ಬಸ್ಸು ನಿಂತಿದ್ದರೆ, ಇಬ್ಬರೂ ಇಳಿಯುವುದು. ತಿಂಡಿಯೋ ನೀರೋ ಕಾಫಿಯೋ ಕೊಡಿಸಲು ದೂರ ಹೋಗಿ, ಗಲಾಟೆಯ ಗುಂಪಿನಲ್ಲಿ ಹುಡುಗಿಯನ್ನು ಬಿಟ್ಟು, ತಾನು ತನ್ನ ಬಸ್ಸಿನಲ್ಲಿ ಕುಳಿತು ಹೊರಟುಬಿಡುವುದು. ಈ ಹಂಚಿಕೆ ಗೆದ್ದರೆ ಸರಿ, ಇಲ್ಲದಿದ್ದರೆ ಹುಡುಗಿ ವಾಪಸು ಬರುತ್ತಾಳೆ. ತಂದು ತಲಪಿಸಿದವರಿಗೆ ಮನಸ್ಸಿಲ್ಲದ ನಮಸ್ಕಾರ ಹಾಕಿ ಮುಂದೆ ಹೊರಡುವುದು. ಎರಡು ಮೂರು ಕಡೆ ಈ ಯೋಜನೆಯನ್ನು ಕಾರ್ಯರೂಪಕ್ಕೆ ತಂದರೆ ಒಂದಲ್ಲ ಒಂದು ಕಡೆ ಈ ಏರ್ಪಾಟು ಯಶಸ್ಸು ಗಳಿಸೀತು. ಆಮೇಲೆ ಈ ವಿಚಾರವನ್ನು ಯಾರ ಕಿವಿಗೂ ಹಾಕದೆ ಇದ್ದುಬಿಟ್ಟರೆ ಆಯಿತು....ಇಲ್ಲದಿದ್ದರೆ ಗೊತ್ತೇ ಇದೆ, ಕೆಸ್ತೂರಿಗೆ ಹೋಗುವುದು. ಅಲ್ಲಿ ಆ ಚಿಕ್ಕಮ್ಮ ಸಿಕ್ಕದಿದ್ದರೆ ಗುಟ್ಟಾಗಿ ಯಾರಿಗಾದರೂ ಮಾರಿಬಿಡುವುದು.'

"ಅದಕ್ಕೆ ಬೇಕಾದರೆ ಏರ್ಪಾಡು ಮಾಡಿಕೊಡುತ್ತೇನೆ. ಕೆಸ್ತೂರಿನಲ್ಲಿ ರಿಚರ್ಡ್ ಎಂಬಾತ ಇದ್ದಾನೆ. ಹುಡುಗಿಯ ಚಿಕ್ಕಮ್ಮ ಸಿಕ್ಕದಿದ್ದರೆ ಅವನ

ಮನೆಯಲ್ಲಿಯೇ ಇಳಿದುಕೋ. ಅವನಿಗೆ ಕಾಗದ ಬರೆದುಕೊಡುತ್ತೇನೆ. ಹುಡುಗಿ ಚೆನ್ನಾಗಿದ್ದಾಳೆ. ಮಾರುವ ಯೋಚನೆ ಇದ್ದರೆ ವಿಷಯವನ್ನು ಅವನ ಕಿವಿಗೆ ಹಾಕಿಬಿಡು. ಎಲ್ಲ ಅವನು ಮಾಡಿಬಿಡುತ್ತಾನೆ. ಅವನ ಕಸಬೇ ಅದು" ಎಂದು ಮೇರಿ ಹಂಚಿಕೆಯನ್ನು ಪ್ರೋತ್ಸಾಹಿಸಿದಳು.

ಮೇರಿಯ ಅಣ್ಣನಿಂದ ಸಾಕಷ್ಟು ಧನಸಹಾಯ ಪಡೆದು ಒಂದೆರಡು ಬಟ್ಟೆಬರೆ ತುಂಬಿದ ಚೀಲವನ್ನು ಮಾತ್ರ ತೆಗೆದುಕೊಂಡು ವನಜ ರತ್ನಳೊಡನೆ ಕೆಸ್ತೂರಿನ ಬಸ್ಸು ಹತ್ತಿದಳು. ಬೆಂಗಳೂರಿಗೆ ಮೂವತ್ತು ಮೈಲಿ ದೂರದಲ್ಲಿರುವ ಹೊಸೂರಿನಲ್ಲಿ ಅವಳ ಯೋಜನೆ ಗೆದ್ದಿತು.

ಆಗ ಸ್ಟ್ಯಾಂಡಿನಲ್ಲಿ ಬೇರೆಬೇರೆ ಟೈಮಿನ ಮೂರು ಬಸ್ಸುಗಳು ನಿಂತಿದ್ದುವು. ಬಹಳ ಜನ ಇಳಿದು ಹತ್ತಿರದ ಹೋಟಲಿನಲ್ಲಿ ತಿಂಡಿ ಕಾಫಿ ತೆಗೆದುಕೊಳ್ಳುತ್ತಿದ್ದರು. ವನಜ ಬಸ್ಸಿನಲ್ಲಿ ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದು ಆಮೇಲೆ ಇಡ್ಲಿ ತೆಗೆದುಕೊಳ್ಳಲು ಕೆಳಗಿಳಿದಳು. ಬೇಸಿನ್ನಿನಲ್ಲಿ ಬಿಸಿಬಿಸಿ ಇಡ್ಲಿ ತುಂಬಿಕೊಂಡು ಅಲ್ಲಿ ಇಲ್ಲಿ ಜಿಂಕೆಯಂತೆ ಓಡಾಡುತ್ತಿದ್ದ ಪುಟ್ಟಮಾಣಿಯನ್ನು ಕರೆದು ಎರಡೆರಡು ಇಡ್ಲಿ ಕೊಂಡಳು. " ನನಗೆ ಎರಡು ಹೆಚ್ಚು, ನೀನು ತಿನ್ನಮ್ಮ" ಎಂದು ಹುಡುಗಿಯ ಕೈಗೆ ಇನ್ನೊಂದು ಇಡ್ಲಿ ಹಾಕಿ, ವನಜ ಮೂರು ಬಸ್ಸಿನಾಚೆ, ದೂರದಲ್ಲಿದ್ದ ನಲ್ಲಿಯಲ್ಲಿ ಕೈ ತೊಳೆದುಕೊಂಡು ಬರಲು ಹೋದಳು. ಇನ್ನೇನು ಬಸ್ಸು ಹೊರಡುವುದಕ್ಕೆ ಸ್ವಲ್ಪ ಹೊತ್ತಿರಬಹುದು ಎಂದು ಗೊತ್ತಾದಾಗ ವನಜ 'ರತ್ನಾ ನಿಧಾನವಾಗಿ ತಿನ್ನು. ತುಂಬುಕೋ ಬೇಡ. ಹೋಗು........ಅಲ್ಲಿ ನಲ್ಲಿ ಇದೆ ನಿಧಾನವಾಗಿ ತಿಂದು ಕೈತೊಳೆದುಕೊಂಡು ನೀರು ಕುಡ್ಕೊಂಡು ಬಾ, ಎಂದು ಹೇಳಿದಳು. ಬೆಳಗ್ಗೆ ಮನೆಯಲ್ಲಿ ಬರಿಯ ಕಾಫಿ ಕುಡಿದಿದ್ದ ರತ್ನಳಿಗೆ ತುಂಬ ಹಸಿವಾಗಿತ್ತು. ಎರಡು ಇಡ್ಲಿಯನ್ನು ತಿಂದು ಪೂರೈಸಿದ್ದಳು. ಚಟ್ನಿ ಖಾರವಾಗಿದ್ದುದರಿಂದ ಸ್ವಲ್ಪ ನೀರು ಕುಡಿದು ಇನ್ನೊಂದನ್ನು ತಿನ್ನೋಣವೆಂದು ದೂರದಲ್ಲಿದ್ದ ನಲ್ಲಿಯ ಹತ್ತಿರಕ್ಕೆ ಹೋದಳು. ನಲ್ಲಿಯಲ್ಲಿ ಹತ್ತಾರು ಜನ ಮುತ್ತಿಕೊಂಡಿದ್ದರು. ವನಜ ರತ್ನಳನ್ನೇ ನೋಡುತ್ತ ಬಸ್ಸನ್ನೇರಿ ತನ್ನ ಸ್ಥಾನದಲ್ಲಿ ಕುಳಿತಳು. ಹುಡುಗಿ ನಲ್ಲಿ ಖಾಲಿ ಆಗುವ ವರೆಗೆ ಅಲ್ಲಿಯೇ ಸುಮ್ಮನೆ ನಿಂತಿತ್ತು. ಜನ ವಾಪಸು ಹೋಗಿ ಅವರವರ ಬಸ್ಸು ಹತ್ತುತ್ತಿದ್ದರು. ಹುಡುಗಿ ಸ್ವಲ್ಪ ನೀರು ಕುಡಿದು ಉಳಿದಿದ್ದ ಇಡ್ಲಿಯನ್ನು ತಿಂದು ಮುಗಿಸಿತು. ಆದರೆ ಚಟ್ನಿಯ

ಖಾರ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಬಾಯೆಲ್ಲ ಉರಿಯುತ್ತಿತ್ತು. 'ಭರ್' ಎಂದು ಸುರಿಯುತ್ತಿದ್ದ ನೀರಿಗೆ ಬಾಯಿ ಒಡ್ಡಿ ಮನದಣಿಯ ನೀರು ಕುಡಿದಳು. ತಕ್ಷಣವೆ ಬಸ್ಸು ಹೊರಟ ಶಬ್ದವಾಯಿತು. 'ಅಯ್ಯೊ, ಬಸ್ಸು ಹೊರಟಿತಲ್ಲ' ಎಂಬ ಗಾಬರಿಯಲ್ಲಿ ಮಗುವಿಗೆ ನೆತ್ತಿ ಹತ್ತಿತು. ಮೂಗಿನಲ್ಲೆಲ್ಲ ನೀರು ಬಂತು. 'ಅಮ್ಮಾ' ಎಂದು ಕೂಗಿ ಕೆಮ್ಮುತ್ತ ದೂರ ನಿಂತಿತು. ಅಷ್ಟು ಹೊತ್ತಿಗಾಗಲೆ ಕೆಸ್ತೂರು ಬಸ್ಸು ಮಾರಮ್ಮನ ಚೌಕ ದಾಟಿತ್ತು. ಉಳಿದ ಎರಡು ಬಸ್ಸುಗಳು ಹಾಗೇ ನಿಂತಿದ್ದುವು. ಅವರ ಅಮ್ಮ ಕುಳಿತಿದ್ದ ಬಸ್ಸೇ ಮೊದಲು ಹೊರಟು ಹೋಗಿತ್ತು. ಹುಡುಗಿಯ ಸುತ್ತ ಜನ ಕವಿದುಬಿಟ್ಟರು. ಅವಳ ಮುದ್ದು ಮುಖ ಅಳುತ್ತಿದ್ದರೂ ಆಕರ್ಷಕವಾದ ಕಣ್ಣುಗಳು ಅಲ್ಲಿದ್ದವರನ್ನೆಲ್ಲ ಸುತ್ತ ಸೇರಿಸಿಕೊಂಡಿತು. ಸೀನಪ್ಪನ ಹೋಟಲಿನಲ್ಲಿ ಕಾಫಿ ಕುಡಿಯಲು ಬಂದಿದ್ದ ಕರಿಯಪ್ಪ ಜನರ ಮಧ್ಯೆ ಬಂದುನಿಂತ.

ಆ ಎರಡು ಬಸ್ಸಿನಲ್ಲಿ ಕುಳಿತಿದ್ದ ಒಬ್ಬಿಬ್ಬರು "ನೀನು ಯಾವ ಊರಿಗೆ ಹೋಗಬೇಕಮ್ಮ?" ಎಂದು ಕೇಳಿದರು.

ಹುಡುಗಿ ಅಳುತ್ತ "ಚಿಕ್ಕಮ್ಮನ ಊರಿಗೆ" ಎಂದು ಹೇಳಿತು.

"ನಿಮ್ಮಪ್ಪನ ಹೆಸರೇನು?" ಎಂದು ಕರಿಯಪ್ಪ ಹುಡುಗಿಯ ಭುಜ ಮುಟ್ಟಿ ಕೇಳಿದ.

ಹುಡುಗಿ ಅವನನ್ನು ನೋಡಿ ಅಳುವುದನ್ನು ಹೆಚ್ಚು ಮಾಡಿತು.

ಪಕ್ಕದಲ್ಲಿ ನಿಂತಿದ್ದ, ಹದಿನೆಂಟು ವರುಷ ವಯಸ್ಸಿನ ಒಬ್ಬ ವಿದ್ಯಾರ್ಥಿ "ಅಳಬೇಡ, ಹೇಳಮ್ಮ. ಹೆದರ್ಕೋಬೇಡ. ಪೋಲಿಸ್ನೋರು ನಿನ್ನನ್ನ ನಿಮ್ತಂದೇ ಹತ್ತಿರ ಕರಕೊಂಡ್ಹೋಗಿ ಬಿಡ್ತಾರೆ." ಎಂದ.

ಇನ್ನೊಬ್ಬಾತ "ಯಾರಮ್ಮ ನಿಮ್ತಂದೆ?" ಎಂದು ಕೇಳಿದ.

ಹುಡುಗಿ ಸಮಾಧಾನ ಮಾಡಿಕೊಂಡು "ಇಲ್ಲ." ಎಂದು ಉತ್ತರ ಕೊಟ್ಟಿತು.

"ನಿಮ್ತಂದೆ ಇಲ್ಲವಾ?" ಕರಿಯಪ್ಪ ಮತ್ತೆ ಪ್ರಶ್ನಿಸಿದ.

ಮಗು ಅಳುತ್ತ "ಅಣ್ಣ....ಇಲ್ಲ." ಎಂದು ಹೇಳಿತು.

"ಅಮ್ಮ?" ಎಂದು ಕರಿಯಪ್ಪ ಮತ್ತೊಂದು ಪ್ರಶ್ನೆ ಹಾಕಿದ.

ಹುಡುಗಿ ತಕ್ಷಣವೆ ಉತ್ತರ ಹೇಳದೆ ಸ್ವಲ್ಪ ಹೊತ್ತು ಸುಮ್ಮನಿದ್ದು "ಇಲ್ಲ"

ಎಂದಿತು.

"ಚಿಕ್ಕಮ್ಮ?" ಎಂದು, ಕಸಬಿಗೆ ತಕ್ಕಂತೆ ಮತ್ತೊಂದು ಪ್ರಶ್ನೆಯನ್ನು ಕರಿಯಪ್ಪ ಕೇಳಿದ.

"ಚಿಕ್ಕಮ್ಮ!" ಎಂದು ಮಗು ಅಳಲು ಮೊದಲುಮಾಡಿತು.

ಪಾಪ, ಚಿಕ್ಕಮ್ಮ ತಾಯಿಯಿಲ್ಲದ ಈ ತಬ್ಬಲಿಯನ್ನು ಊರಿಗೆ ಕರೆದು ಕೊಂಡು ಹೋಗುತ್ತಿರಬಹುದು. ದಾರಿಯಲ್ಲಿ ಈ ವಿಚಿತ್ರ ನಡೆದುಹೋಯಿತು ಎಂದು ಅಲ್ಲಿದ್ದ ಜನ ಆಡಿಕೊಂಡರು.

ಚಿಕ್ಕಮ್ಮನ ಊರು ಯಾವುದೋ! ಆ ಹುಡುಗಿಗೆ ಆ ಊರಿನ ಹೆಸರು ಗೊತ್ತಿಲ್ಲ. ಈ ಬಸ್ಸುಗಳೆರಡೂ ಆ ಲೈನಿನ ಬಸ್ಸುಗಳಲ್ಲ. ವಾಪಸು ಬೆಂಗಳೂರಿಗೆ ಕಳಿಸೋಣವೆಂದರೆ ಆ ಹುಡುಗಿಯ ವಾರಸುದಾರರು ಬೆಂಗಳೂರಿನಲ್ಲಿ ಇದ್ದಾರೊ, ಇಲ್ಲವೊ! ಏನು ಮಾಡುವುದು?—ಅಲ್ಲಿದ್ದವರಾರಿಗೂ ಸರಿಯಾದ ಮಾರ್ಗ ಹೊಳೆಯಲಿಲ್ಲ. ಮಂಡ್ಯಕ್ಕೆ ಪ್ರಯಾಣ ಮಾಡುತ್ತಿದ್ದ ಲಾಯರೊಬ್ಬರು "ಹುಡುಗಿ ಇಲ್ಲೇ ಇರಲಿ. ವಾರಸುದಾರರು ನೋಡಿಕೊಂಡು ಇಲ್ಲಿಯ ಪೋಲೀಸ್ ಸ್ಟೇಷನ್ನಿಗೆ ತಂತಿ ಕೊಡುತ್ತಾರೆ. ಆಗ ಅವರ ವಿಳಾಸಕ್ಕೆ ಹುಡುಗಿಯನ್ನು ತಲಪಿಸಬಹುದು. ಅದೇ ಸರಿಯಾದ ಏರ್ಪಾಟು." ಎಂದು ತಿಳಿಸಿದರು.

ಉಳಿದ ಎರಡು ಬಸ್ಸುಗಳಿಗೂ ಹೊರಡುವ ಹೊತ್ತಾಗಿದ್ದುದರಿಂದ ಅವುಗಳ ಪಾಡಿಗೆ ಅವು ಊರು ಬಿಟ್ಟುವು. ಜನ ಕದಲಿತು.

ಕರಿಯಪ್ಪ, ಹುಡುಗಿಯೊಡನೆ ಹೊರಟಾಗ ಅವನ ಹಿಂದೆ ಐದಾರು ಜನ ಹೊರಟರು. ಆತ "ಹಿಂದ್ಯಾಕೆ ಬರ್ತೀರ! ಇಲ್ಲೇನು ಕೋತಿ ಕುಣೀತದಾ?" ಎಂದು ಗದರಿಸಿದ.

ಆ ಹುಡುಗಿಯ ಕೈಹಿಡಿದುಕೊಂಡು "ನಿನ್ನ ಹೆಸರೇನಮ್ಮಾ?" ಎಂದು ಕೇಳಿದ.

"ರತ್ನ."

"ಬಸ್ಸು ಹೊರಟುಹೋದಾಗ ನೀನು ಎಲ್ಲಿದ್ಯಮ್ಮಾ?"

"ನಲ್ಲೀಲಿ ನೀರು ಕುಡೀತಾ ಇದ್ದೆ."

"ನಿಮ್ಮಮ್ಮ, ಅಲ್ಲ—ಚಿಕ್ಕಮ್ಮ?"

" ಅಲ್ಲಿ ದೂರ ನಿಂತಿದ್ರು."

" ನೀರಡಿಕೆ ಆಗಿತ್ತ ? "

" ಹ್ಞ....ಚಿಕ್ಕಮ್ಮ ಇಡ್ಲಿ ಕೊಡಿಸಿದ್ರು....ತುಂಬಾ ಖಾರ ಆಯ್ತು.... ನೀರು ಕುಡಿ ಅಂದ್ರು....ದೂರ ನಲ್ಲಿ ಇದೆ, ನಿಧಾನವಾಗಿ ತಿನ್ನು....ನೀರು ಕುಡ್ಕೊಂಡು ಬಾ ಅಂತಂದ್ರು........ಕುಡೀತಾ ಇದ್ದೆ........ಬಸ್ಸು ಹೊರಟ್ಹೋಯ್ತು....ಚಿಕ್ಕಮ್ಮ ಕಾಣಿಸ್ಲೇ ಇಲ್ಲ....ಕೆಮ್ಮು ಬ-ಂ-ತು...." ಪುನಃ ಅಳುವುದಕ್ಕೆ ಮೊದಲುಮಾಡಿತು.

" ಅಳಬಾರದು....ಬಾ, ಅಲ್ಲಿ ಹೋಟೆಲಲ್ಲಿ ಸಿಹಿತಿಂಡಿ ಕೊಡಿಸ್ತೀನಿ, ಖಾರ ಹೋಗ್ಬಿಡುತ್ತೆ" ಎಂದು ಕರಿಯಪ್ಪ ಹುಡುಗಿಗೆ ಸಮಾಧಾನಮಾಡಿದ.

ಏನೂ ಅರಿಯದ, ಎಳೆಮನಸ್ಸಿನ ಹುಡುಗಿ ಅಳುವುದನ್ನು ನಿಲ್ಲಿಸಿ, ಕರಿಯಪ್ಪನೊಡನೆ ಹೋಟೆಲ ಕಡೆ ಹೊರಟಿತು.

ಹುಡುಗಿಯ ಪೂರ್ವಕತೆ ತಿಳಿಯದಿದ್ದರೂ, ಬಸ್ಸಿನಲ್ಲಿ ಹೊಸೂರು ತಲಪಿದ ಮೇಲೆ ನಡೆದ ಎಲ್ಲ ಕತೆಯನ್ನೂ ವಿವರವಾಗಿ, ಹಬ್ಬದ ಹಿಂದಿನ ರಾತ್ರಿ ಕರಿಯಪ್ಪನ ಬಾಯಿಂದ ಲಕ್ಷಮ್ಮ ಕೇಳಿದಳು.

೬

ರತ್ನ ಈಗ ಪುಟ್ಟರತ್ನ ಅಲ್ಲ. ಇದರ ಬೆಲೆ ದಿನದಿನಕ್ಕೂ ಹೆಚ್ಚುತ್ತಿದೆ. ಎರಡು ಹಕ್ಕಿಗಳನ್ನು ಊರ ಸೇವೆಗೆ ಮೀಸಲಾಗಿಡಲು ನಿಶ್ಚಯಿಸಿದ್ದ ಲಕ್ಷಮ್ಮ ಒಂದು ಭಾಗದಲ್ಲಿ ಸೋತಿದ್ದಳು. ಆದರೆ ಇನ್ನೊಂದು ಭಾಗದಲ್ಲಿ, ಊಹಿಸಿದ್ದಕ್ಕಿಂತ ಹೆಚ್ಚಾಗಿ ಯಶಸ್ಸು ಗಳಿಸಿದ್ದಳು. ರತ್ನಳಷ್ಟು ರೂಪವಂತೆ, ಬುದ್ಧಿವಂತೆ ಅಲ್ಲದಿದ್ದರೂ ತೆಳ್ಳಗೆಬೆಳ್ಳಗೆ ತಕ್ಕಮಟ್ಟಗಿದ್ದ ಕಮಲು ಹೆತ್ತ ತಾಯಿಯ ಇಚ್ಛೆಯನ್ನು ನೆರವೇರಿಸಲಿಲ್ಲ. ತಾಯಿ ಎಷ್ಟೆಷ್ಟೋ ಹೇಳಿದಳು. ಆದರೆ ಮಗಳು ದುಡ್ಡಿಗೆ ದೇಹ ಮಾರಲು ಇಷ್ಟಪಡಲಿಲ್ಲ. ರತ್ನ, ಕಮಲು ಇಬ್ಬರೂ ಒಂದೇ ಶಾಲೆಯಲ್ಲಿ ಅಭ್ಯಾಸಮಾಡುತ್ತಿದ್ದರು. ಒಬ್ಬಳ ಪೋಷಣೆಯಲ್ಲಿಯೇ ಬೆಳೆದು ಯುವತಿಯರಾಗುತ್ತಿದ್ದರು. ಆದರೆ ಇಬ್ಬರೂ ಬೇರೆ ಬೇರೆ ಕನಸು ಕಾಣುತ್ತಿದ್ದರು.

ಬೇರೆಯವರಿಗೇಕೆ ದುಡ್ಡು ಕೊಟ್ಟು, ಪಾಠ ಹೇಳಿಸಬೇಕೆಂದು ತಾಯಿಯೇ ಇಬ್ಬರಿಗೂ ಸಂಗೀತ ಮತ್ತು ಕುಣಿತ ಹೇಳಿಕೊಡುತ್ತಿದ್ದಳು. ಆದರೆ ಅವ

ರಿಬ್ಬರಲ್ಲಿ ಒಬ್ಬಳೇ ಎಲ್ಲವನ್ನೂ ಚೆನ್ನಾಗಿ ಕಲಿಯುತ್ತಿದ್ದುದು. ಕಮಲುವಿಗೆ ಅದರಲ್ಲಿ ಇಷ್ಟವೇ ಇರಲಿಲ್ಲ.

ಆದರೂ ಕೋಲಿನ ಪೆಟ್ಟಿಗೆ ಹೆದರಿ ಕಮಲು ಎರಡು ಶಾಸ್ತ್ರಗಳನ್ನೂ ತಕ್ಕ ಮಟ್ಟಿಗೆ ಕಲಿತಿದ್ದಳು.

ಅವರಿಬ್ಬರೂ ಇನ್ನೂ ಹದಿಮೂರು ವರುಷ ಮೀರದಿದ್ದಾಗ ಮಾದಪ್ಪನವರ ಮಗಳ ಮದುವೆಯಲ್ಲಿ ಇವರ ಕುಣಿತ ನಡೆಯಿತು. ಪುಟ್ಟ ಹುಡುಗಿ ರತ್ನಳ ಕಣ್ಣಿನ ನೋಟ, ಕೈಬೆರಳಿನ ಆಟ, ಕೊರಳಿನ ಮಾಟ, ದೇಹದ ಬಳುಕಾಟ ನೋಡಿ ಬಂದಿದ್ದವರೆಲ್ಲ ಬೆರಗಾದರು. ಎಲ್ಲರನ್ನೂ ಹೆಚ್ಚು ಆಕರ್ಷಿಸಿದ್ದು ಅವಳ ಆ ಎರಡು ಕಣ್ಣುಗಳು. ಮಾದಪ್ಪನವರ ಮಗ ಇಪ್ಪತ್ತು ವರುಷದ ಮಹೇಶ್ವರ ಅವಳ ಕುಣಿತ ನೋಡಿ ತುಂಬ ಆನಂದಪಟ್ಟ.

ಆದರೆ, ಮಿಡ್ಲ್‌ಸ್ಕೂಲ್ ಪರೀಕ್ಷೆಯಲ್ಲಿ ತೇರ್ಗಡೆಯಾದಮೇಲೆ ಈ ಇಬ್ಬರು ಹುಡುಗಿಯರಿಗೂ ಕುಣಿತ ಮತ್ತು ಸಂಗೀತದ ಆಸಕ್ತಿ ಕಡಿಮೆಯಾಯಿತು. ಲಕ್ಷಮ್ಮನಿಗೆ ಇಷ್ಟವಿಲ್ಲದಿದ್ದರೂ ಇಬ್ಬರೂ ಮಿಷನ್ ಸ್ಕೂಲು ಸೇರಿ ಮೂರು ವರುಷ ಓದಿದರು. ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ರತ್ನ ಪಾಸಾದಳು, ಕಮಲ ಫೇಲಾದಳು. ಆಗ ರತ್ನಳಿಗೆ ಹದಿನೇಳು ವರುಷ ಕಮಲುವಿಗೆ ಹದಿನೆಂಟು ವರುಷ.

ಒಂದು ಮಂಗಳವಾರ, ಊರಿನ ದಿನಸಿ ಮಂಡಿಯ ನಂಜಪ್ಪಶೆಟ್ಟರ ಮಗ ನಾಗರಾಜ ಜೇಬಿನಲ್ಲಿ ಐನೂರು ರೂಪಾಯಿ ತುಂಬಿಕೊಂಡು, ಕರಿಯಪ್ಪನೊಡನೆ ಲಕ್ಷಮ್ಮನ ಮನೆಗೆ ಬಂದ. ಗುಟ್ಟಾಗಿ ಮಾತುಕತೆ ಆಯಿತು. ಗುರುವಾರ ಗೆಜ್ಜೆಪ್ರಸ್ತ ಎಂಬುದನ್ನು ಮಂಗಳವಾರ ಕೇಳಿದ ಕಮಲುವಿಗೆ ಸಿಡಿಲು ಬಡಿದಂತಾಯಿತು. ತಾಯಿಗೂ ಮಗಳಿಗೂ ಆ ದಿನವೇ ದೊಡ್ಡ ಜಗಳ ಪ್ರಾರಂಭವಾಯಿತು. ರತ್ನ ಮತ್ತು ತನ್ನ ತಾಯಿ ಒಂದಾದರೆ ಕಮಲು ಒಬ್ಬಳೇ ಒಂದಾಗಿ ವಾದಿಸಿದಳು. ' ನನಗೆ ಮದುವೆ ಮಾಡು ' ಎಂದು ಹಟಹಿಡಿದಳು. ' ನಿನ್ನ ಕೈಲಿ ಆಗದಿದ್ದರೆ, ನಿನಗೆ ಇಷ್ಟವಿಲ್ಲದಿದ್ದರೆ ಪೂನಾಕ್ಕೆ ಹೋಗುವಷ್ಟು ಛಾರ್ಜು ಕೊಡು. ಅಲ್ಲಿಗೆ ಹೋಗಿ ನಮ್ಮಪ್ಪನನ್ನು ಕೇಳಿಕೊಳ್ಳುತ್ತೇನೆ. ಪ್ರತಿ ತಿಂಗಳೂ ಇಪ್ಪತ್ತು ರೂಪಾಯಿಯಂತೆ ಇನ್ನೂ ಕಳಿಸುತ್ತಿದ್ದಾನೆ. ಅವನು ನನ್ನನ್ನೇನೂ ಮರೆತಿಲ್ಲ. ಮದುವೆ ಮಾಡಿಕೊಂಡು ಗರತಿಯಾಗಿ ಬಾಳಬೇ

ಕೆಂಬುದೊಂದೇ ನನ್ನ 'ಇಷ್ಟ' ಎಂದು ಕಡ್ಡಿ ಮುರಿದಂತೆ ಹೇಳಿಬಿಟ್ಟಳು.

ಹದಿನೆಂಟು ವರಷುಗಳಿಂದ ಕಟ್ಟಿದ್ದ ಲಕ್ಷ್ಮಮ್ಮನ ಒಂದು ಗೋಪುರ ಕುಸಿದು ಬಿತ್ತು. ಅವಳ ಲೆಕ್ಕದ ಪ್ರಕಾರ ಅವಳಿಗೆ ಸಾವಿರಾರು ರೂಪಾಯಿ ನಷ್ಟವಾದಂತಾಯಿತು. ಮಗಳು ದಾರಿತಪ್ಪಿದಳು. ಅವಳನ್ನು ತನ್ನ ದಾರಿಗೆ ಎಳೆಯಲು ಸಾಧ್ಯವಾಗಲೇ ಇಲ್ಲ. ಹೆತ್ತ ಕರುಳು ಈ ಪ್ರಾಯದ ಹುಡುಗಿಯನ್ನು ಪೂನಾಕ್ಕೆ ಕಳಿಸಲು ಒಪ್ಪಲಿಲ್ಲ. ಅದೂ ಅಲ್ಲದೆ ಹೀರಾಲಾಲ್‌ನನ್ನು ಕಂಡರೆ ಲಕ್ಷ್ಮಮ್ಮನಿಗೆ ಅಷ್ಟಕಷ್ಟೆ. ಆತ ತಿಂಗಳಿಗೊಮ್ಮೆ ಕಳಿಸುತ್ತಿದ್ದ ಇಪ್ಪತ್ತು ರೂಪಾಯಿಯನ್ನು ಮೌನವಾಗಿ ತೆಗೆದುಕೊಳ್ಳುತ್ತಿದ್ದಳೇ ಹೊರತು, ಆತನ ವಿಷಯದಲ್ಲಿ ಅವಳಿಗೆ ಸ್ವಲ್ಪವೂ ಆಸಕ್ತಿ ಇರಲಿಲ್ಲ. ತಾನು ಹೆತ್ತು ಸಾಕಿದ ಹುಡುಗಿಯನ್ನು ಆ ಸೇಟಿನ ಕೈಯಲ್ಲಿಡುವಂಥ ದುಃಸ್ಥಿತಿ ತನಗೇನೂ ಬಂದಿಲ್ಲ. ತಿಂಗಳ ಆದಾಯ ಕಡಮೆ ಆಗಿದ್ದರೂ, ಅಂಥ ಹುಡುಗಿಯರಿಗೆ ಬಿಟ್ಟಿ ಅನ್ನ ಹಾಕುವ ಶಕ್ತಿಯನ್ನು ದೇವರು ಕೊಟ್ಟಿದ್ದಾನೆ. ಇನ್ನೂ ಕೆಲವು ದಿನ ನೋಡೋಣ, ದಾರಿಗೆ ಬಂದಾಳು. ಮುಂದೆ, ರತ್ನ ದೊಡ್ಡವಳಾದ ಮೇಲೆ ಅವಳನ್ನು ನೋಡಿಯಾದರೂ ಕಲಿತುಕೊಂಡಾಳು, ಎಂದು ಸುಮ್ಮನಾದಳು.

ರತ್ನ ಓದಿ ಪಾಸು ಮಾಡಿದ, ಈಗಿನ ಕಾಲದ ಹುಡುಗಿ ಆದರೂ ತಾಯಿಯ ಕಸಬಿನ ಲಕ್ಷಣವನ್ನು ಚೆನ್ನಾಗಿ ತಿಳಿದುಕೊಂಡಿದ್ದಳು. ಅನೇಕ ವೇಳೆ ತಾಯಿಯನ್ನು ಮೀರಿಸುತ್ತಿದ್ದಳು. ಪೂರ್ವಜನ್ಮದ ಫಲವೊ ಏನೊ, ಅವಳ ಬುದ್ಧಿ ಚಿಕ್ಕಂದಿನಿಂದಲೂ ಆ ಹಾದಿಯಲ್ಲಿ ಬಹಳ ಚುರುಕಾಗಿ ಓಡುತ್ತಿತ್ತು. ಆ ಮನಮೋಹಕವಾದ ಕಣ್ಣುಗಳು, ಸುಂದರರೂಪ, ದೇಹ ತನಗೆ ದೇವರು ಕೊಟ್ಟಿರುವ ಅಮೂಲ್ಯವಾದ ಆಸ್ತಿ, ಎಂದು ಅವಳು ನಂಬಿದ್ದಳು.

ಒಂದು ಯುಗಾದಿ ದಿನದ ಸಂಜೆ ಮನೆಯಲ್ಲಿ ಆರು ಜನ ಸೇರಿಬಿಟ್ಟಿದ್ದರು. ಪಡಸಾಲೆಯಲ್ಲಿ ದೊಡ್ಡ ಜಮುಖಾನ ಹಾಸಿ, ಹಳೆಯ ಗಿರಾಕಿ, ಹೊಸ ಗಿರಾಕಿ ಎಲ್ಲ ಕುಳಿತು ಪರೇಲಾಟ ಷುರುಮಾಡಿ ಬಿಟ್ಟಿದ್ದರು. ಲಕ್ಷಮ್ಮ ಷರಬತ್ತಿನ ಪಾತ್ರೆಯೊಡನೆ ಅವರ ಗುಂಪಿನಲ್ಲಿಯೇ ಕುಳಿತು ಆಟ ನೋಡುತ್ತಿದ್ದಳು. ನಂಜುಂಡಿ ಒಳಗೆ ಅಡಿಗೆ ಮಾಡುತ್ತಿದ್ದ. ಕಮಲು ಈರುಳ್ಳಿ ಹೆಚ್ಚುತ್ತ ಅಡಿಗೆ ಮನೆಯಲ್ಲಿಯೇ ಕುಳಿತಿದ್ದಳು. ಹದಿನಾಲ್ಕು ವರುಷದ ರತ್ನ ಕಸೂತಿಯ ಬಟ್ಟೆ ಹಿಡಿದುಕೊಂಡು, ಕಳೆದುಹೋದ ಸೂಜಿಯನ್ನು ಹುಡುಕುತ್ತ ಒಳಗೆ ಅಲ್ಲಿ ಇಲ್ಲಿ

ಓಡಾಡುತ್ತಿದ್ದಳು. ನಡುವಿನ ಬಾಗಿಲು ತೆರೆದು ಪಡಸಾಲೆಗೆ ಹೋಗಿ ತಾಯಿಯನ್ನು ಕೇಳೋಣ ಎಂದುಕೊಂಡು ಬಂದಳು. ಸಿಗರೇಟಿನ ಹೊಗೆಯ ಮಧ್ಯೆ ಆರು ಘಟಾನು ಘಟಿ ಆಸಾಮಿಗಳು ಕುಳಿತು ಆಟವಾಡುತ್ತಿದ್ದರು. ಮಾದಪ್ಪನವರ ಪಕ್ಕದಲ್ಲಿ ಚಿಲ್ಲರೆಯ ಗುಪ್ಪೆ, ಒಂದು ರೂಪಾಯಿ ನೋಟಿನ ಒಂದು ಕಂತೆ ಬಿದ್ದಿದ್ದುವು. ಅವರ ಎಡಪಕ್ಕದಲ್ಲಿ ತಾಯಿ ಲಕ್ಷಮ್ಮ ಷರಬತ್ತಿನ ಪಾತ್ರೆಯ ಮೇಲೆ ತನ್ನ ಬಲಗೈ ಮುಚ್ಚಿಕೊಂಡು, ಎಡಗೈಯನ್ನು ತನ್ನ ಗಲ್ಲಕ್ಕೆ ಆನಿಸಿ ಆಸಕ್ತಿಯಿಂದ ಆಟ ನೋಡುತ್ತಿದ್ದಳು. ಎದುರಿಗೆ ಕುಳಿತಿದ್ದ ಕಂಟ್ರಾಕ್ಟರ್ ಕೃಷ್ಣಪ್ಪ, ಸೈಕಲ್‌ಷಾಪ್ ಸಿಂಗ್, ದಿನಸಿ ಅಂಗಡಿಯ ನಾರಾಯಣಶೆಟ್ಟಿ, ಬಟ್ಟೆಯ ಅಂಗಡಿ ರಾಜಣ್ಣ ಸೋತು ಹಣ್ಣಾಗಿದ್ದರು. ಪೋಲೀಸ್ ಉಡುಪಿನಲ್ಲಿಯೆ, ಲಕ್ಷಮ್ಮನ ಎಡ ಪಕ್ಕದಲ್ಲಿ ಕರಿಯಪ್ಪ ಎರಡೆರಡಾಣೆಯ ಒಂದು ಗುಪ್ಪೆಯ ಮುಂದೆ, ತನಗಾಗಿ ಹಂಚಿಹಾಕಿದ್ದ ಎಲೆಗಳನ್ನು ನೋಡುತ್ತ ಕುಳಿತಿದ್ದ. ಹಣದ ಗುಪ್ಪೆಗೆ ಹತ್ತಿರದಲ್ಲಿ ತೊಡೆಯ ಮೇಲಿದ್ದ ಅವನ ಬಲಗೈ ನಡು ಬೆರಳು 'ಇನ್ನೂ ಬರಲಿ ಬರಲಿ' ಎಂಬಂತೆ ಆಡುತ್ತಿತ್ತು. ನಾಲ್ಕು ಮಂದಿ ಸುಸ್ತಾಗಿದ್ದಾಗ ಇಬ್ಬರು ಲಕ್ಷ್ಮಿ ಮತ್ತು ಲಕ್ಷಮ್ಮನೊಡನೆ ಚೆನ್ನಾಗಿ ನಗುತ್ತಿದ್ದರು. ಮಾದಪ್ಪನ ಬಾಯಿಂದ 'ಫಿಕ್' ಎಂದು ಹೊರಟ ಸಿಗರೇಟಿನ ಹೊಸ ಹೊಗೆ ಪಡಸಾಲೆಯ ತುಂಬ ತುಂಬಿದ್ದ ಹೊಗೆಯನ್ನು ಕೆಣಕಿತು. ಒಂದು ನಿಮಿಷದ ಹಿಂದೆ ಲಕ್ಷಮ್ಮ ಹಚ್ಚಿಟ್ಟ ಗಂಧದಕಡ್ಡಿಯ ಸುಗಂಧ ಎಲ್ಲೋ ಮಾಯವಾಗಿತ್ತು.

"ಅಮ್ಮಾ ನನ್ನ ಸೂಜಿ ಎಲ್ಲಮ್ಮಾ?"

"ಎಲ್ಲೋ ನನಗೇನು ಗೊತ್ತು ಹೋಗೇ....ಇವಳೊಬ್ಬಳು ಬಂದಳು ಶಿವಪೂಜೇಲಿ."

"ಎಲ್ಲಾ ಕಡೇನೂ ಹುಡುಕಿದೆ, ಸಿಕ್ಕಲೇ ಇಲ್ಲ........"

"ಪಕ್ಕದ ಮನೇಲಿಸ್ಕೋ....ಆಮೇಲೆ ನಾ ಹುಡುಕಿ ಕೊಡ್ತೀನಿ."

"ಹ್ಞ" ಎಂದು ರತ್ನ ಬೀದಿಯ ಬಾಗಿಲು ತೆರೆದು ಮುಚ್ಚಿಕೊಳ್ಳುವುದರೊಳಗಾಗಿ ಪಡಸಾಲೆಯಲ್ಲಿ ಗದ್ದಲ ಷುರುವಾಯಿತು.

ಇಸ್ಪೀಟು ಆಟದಲ್ಲಿ—ಅದರಲ್ಲೂ ಯುಗಾದಿ, ಸಂಕ್ರಾಂತಿ, ಹೋಳಿಹಬ್ಬ ಮುಂತಾದ ದಿನ ತಮ್ಮ ಮನೆಯಲ್ಲಿ ಹೀಗೆ ಕುಳಿತು ಆಟ ಆಡಿ, ಸೋತವರು

ಗೆದ್ದವರೊಡನೆ ಗುದ್ದಾಡುವುದನ್ನು ರತ್ನ, ತನಗೆ ತಿಳಿದ ಹಾಗೆ ಏಳೆಂಟು ವರ್ಷಗಳಿಂದ ನೋಡುತ್ತಿದ್ದಳು. ಅದರ ಕಡೆ ಹೆಚ್ಚು ಗಮನ ಕೊಡದೆ ಬಾಗಿಲು ಮುಚ್ಚಿಕೊಂಡು ಪಕ್ಕದ ಮನೆಗೆ ಹೋದಳು.

ಪಕ್ಕದ ಮನೆಯಲ್ಲಿ ಸೂಜಿ ಕೇಳುತ್ತಿದ್ದಾಗ ಅವರ ಮನೆಯ ಮುಂದೆ ಯಾರೋ ನಿಂತು "ಶಂಕರಪ್ಪನೋರಿದಾರ?" ಎಂದ ಹಾಗಾಯಿತು. ಲಕ್ಷ್ಮಮ್ಮನ ಮನೆಯಲ್ಲಿ ಗಲಾಟೆ ಆಗುತ್ತಿದ್ದುದರಿಂದ ಈ ಮಾತು ಶಂಕರಪ್ಪನವರ ಖಾಯಂ ಸೂಳೆ ನಂಜಮ್ಮನಿಗೆ ಕೇಳಿಸಲಿಲ್ಲ. ಅಲ್ಲದೆ, ರತ್ನಳಿಗಾಗಿ ಒಳಗೆ ಹೋಗಿ ಸೂಜಿ ಹುಡುಕುತ್ತಿದ್ದ ಅವಳ ಗಮನ ಬೀದಿಯ ಬಾಗಿಲ ಕಡೆ ಓಡಲಿಲ್ಲ.

"ಶಂಕರಪ್ಪನೋರಿದಾರ?" ಮತ್ತೆ—ಪ್ರಶ್ನೆ.

ಪಡಸಾಲೆಯಲ್ಲಿ ಬೀದಿಯ ಬಾಗಿಲ ಹತ್ತಿರ ನಿಂತಿದ್ದ ರತ್ನ ಉತ್ತರ ಕೊಟ್ಟಳು.

"ಇಲ್ಲ."

"ಯಾವಾಗ ಬರ್ತಾರೆ?"

"?...."

"ಊರಲ್ಲಿಲ್ವ?"

ಉತ್ತರ ತಿಳಿಯದ ರತ್ನ ಒಳಗೆ ಹೋಗಿ ಬಂದಳು.

ನಂಜಮ್ಮ ಭುಜದ ಮೇಲಿದ್ದ ಸೆರಗನ್ನು ತಲೆಯ ಮೇಲೆಳೆದು ಸರಿಪಡಿಸಿಕೊಳ್ಳುತ್ತ ಪಡಸಾಲೆಗೆ ಬಂದು "ತಾವ್ಯಾರೋ?" ಎಂದಳು.

"ನಾನು ಬೆಂಗಳೂರಿಂದ ಬಂದಿದೀನಿ–ಸ್ವಾಸ್ತಿಕ್ ಕಂಪನಿ ಏಜೆಂಟು...."

"ತಮ್ಮೆಸರು?"

"ಶ್ರೀಕಂಠಯ್ಯಾಂತ"

"ಏನಾಗಬೇಕಾಗಿತ್ತು?"

"ಏನೂ ಇಲ್ಲ........ಶಂಕರಪ್ಪನೋರನ್ನ ನೋಡಬೇಕಾಗಿತ್ತು. ವಸೂಲಿಗೆ ಬಂದಿದ್ದೆ. ಎಲ್ಲ ಆಯ್ತು. ನಾನು ರಾತ್ರಿ ಹೊರಟುಬಿಡ್ತೀನಿ.....ಇಲ್ಲೇ ಲಕ್ಷ್ಮಣಶೆಟ್ಟರ ಅಂಗಡಿಗೆ ಬಂದಿದ್ದೆ. ಹಾಗೇ ಶಂಕರಪ್ಪನ್ನ ನೋಡೋಣಾಂತ ಬಂದೆ....ಸರಿ ಊರಲ್ಲಿಲ್ವಾ?"

"ಇದಾರೆ........"

" ಈವಾಗ ಬರ್‍ತಾರ? "

" ಇನ್ನೇನು ಬರೋ ಹೊತ್ತು....ಬನ್ನಿ ಒಳಗೆ ಕುಂತ್ಕೊಳ್ಳಿ, ಈಗ ಬಂದು ಬಿಡ್ತಾರೆ."

ದಾರದ ಚೀಲದಲ್ಲಿ ಹಸಿರು ಶಾಲಿನ ಸುರುಳಿಯನ್ನು ಸಿಕ್ಕಿಸಿಕೊಂಡು ಬಂದಿದ್ದ ಆ ಏಜೆಂಟ್ ಪಡಸಾಲೆಗೆ ಬಂದು, ಪುರಾತನಕಾಲದ ಓಲಾಡುವ ವಿಚಿತ್ರ ಕುರ್ಚಿಯ ಮೇಲೆ ಕುಳಿತುಕೊಂಡ. ರತ್ನ ಪಡಸಾಲೆಯ ಒಳಬಾಗಿಲಲ್ಲಿಯೆ, ದುಂಡು ಫ್ರೇಮಿಗೆ ಹಾಕಿದ ಚೌಕದೊಡನೆ ನಿಂತಿದ್ದಳು.

ಈ ಆಸಾಮಿಯ ದೃಷ್ಟಿ ರತ್ನಳ ಕಣ್ಣಿನ ಕಡೆ ಹೋಯಿತು. ರತ್ನಳ ಕಣ್ಣು ಆಸಾಮಿಯ ಗಮುಟುಕೋಟಿನ ಊದುಕೊಂಡಿದ್ದ ಜೇಬನ್ನು ನೋಡಿತು

ಅವಳ ದೃಷ್ಟಿ ಆತನ ಕೆಂಪು ಪೇಟದ ಕಡೆ ಸುಳಿದಾಗ ಅವಳಿಗೆ ತಿಳಿಯಿತು, ಆತ ತನ್ನ ಮುಖವನ್ನೇ ಇನ್ನೂ ನೋಡುತ್ತಿದ್ದುದು. ಏನೋ ನಾಚಿಕೆಯಾದಂತಾಗಿ ಒಳಗೆ ಹೊರಟುಹೋದಳು. ಸೂಜಿ ಸಿಕ್ಕಿತು.

ರತ್ನ ಅದನ್ನು ತೆಗೆದುಕೊಂಡು ಬೀದಿಯ ಬಾಗಿಲ ಮೂಲಕ ತನ್ನ ಮನೆಯ ಕಡೆ ಹೆಜ್ಜೆ ಹಾಕಿದಳು.

ದೂರದಲ್ಲಿ ಮಾರಮ್ಮನ ಚೌಕದ ಹತ್ತಿರ ಪೋಲೀಸ್ ವ್ಯಾನ್ ಕಾಣಿಸಿತು.

ಅಯ್ಯೋ !—ಅದು ಅವರ ಮನೆಯ ಕಡೆಗೇ ತಿರುಗಿತು !

ರತ್ನ ಮಿಂಚಿನಂತೆ ಒಳಗೆ ಓಡಿ ಬೀದಿಯ ಬಾಗಿಲು ಹಾಕಿದಳು.

ಇಸ್ಪೀಟು ಆಡುತ್ತಿದ್ದವರ ಪೈಕಿ ನಾಲ್ವರು ಎದ್ದು ನಿಂತು ಮಾತಿನ ಜಗಳ ಪ್ರಾರಂಭಿಸಿಬಿಟ್ಟಿದ್ದರು. ಕರಿಯಪ್ಪ ಸುಮ್ಮನೆ ಕುಳಿತಿದ್ದ. ಲಕ್ಷ್ಮಮ್ಮ ಗೋಡೆಗೆ ಹಾಕಿದ್ದ ದಿಂಬಿಗೆ ಒರಗಿ ನಗುತ್ತಿದ್ದಳು. ಮಾದಪ್ಪ ಆಗತಾನೆ ಹೊತ್ತಿಸಿದ್ದ ಸಿಗರೇಟನ್ನು ತುಟಿಗೆ ಹಚ್ಚಿ, ಎಳೆಯುತ್ತ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡಿದ್ದ.

ರತ್ನ ಓಡಿ ಬಂದು ಲಕ್ಷ್ಮಮ್ಮನ ಭುಜ ಮುಟ್ಟಿ ಕಿವಿಯಲ್ಲಿ ಏನೋ ಹೇಳಿದಳು. ಲಕ್ಷ್ಮಮ್ಮನ ನಗು ಹಾರಿಹೋಯಿತು. ದೊಡ್ಡ ಅನಾಹುತವನ್ನು ಕಂಡಷ್ಟು ಗಾಬರಿ ಮುಖದಲ್ಲಿ ಕಾಣಿಸಿತು. ಪಕ್ಕದಲ್ಲಿಯೇ ಇದ್ದ ಕರಿಯಪ್ಪ

ನಿಗೆ ಸೂಚನೆ ಕೊಟ್ಟಳು. ಕರಿಯಪ್ಪ ಎದ್ದು ನಿಂತು, ಅಂಗಿಯ ಅಂಚು ಸರಿ ಮಾಡಿಕೊಂಡು, ಬೆಲ್ಟು ಪೇಟ ಧರಿಸಿ ಹೊರಟ. ತನ್ನ ಹತ್ತಿರ ಬಂದು ಏನೋ ಹೇಳುವುದರಲ್ಲಿದ್ದ ರತ್ನಳ ಬಾಯಿಗೆ ಬಗ್ಗಿ ಕಿವಿಯಿಟ್ಟು, ಅವಳೊಡನೆ ಸರಸರನೆ ಒಳಗೆ ಹೊರಟುಬಿಟ್ಟ. ರತ್ನ ಕರಿಯಪ್ಪನೊಡನೆ ಹಿತ್ತಲ ಕಡೆಯಿಂದ ಪಕ್ಕದ ಮನೆಗೆ ಬೇಗಬೇಗ ಹೊರಟಳು. ನಂಜಮ್ಮನಿಗೆ ಏನೋ ಹೇಳಿ, ತಾನು ಹಿತ್ತಲಿಗೆ ಬಂದುಬಿಟ್ಟಳು.

ಕಣ್ಣು ಮುಚ್ಚಿ ಕಣ್ಣು ತೆರೆಯುವುದರಲ್ಲಿ ವಿಚಿತ್ರ ನಡೆದು ಹೋಯಿತು. ಇಸ್ಪೀಟು ಆಡುತ್ತಿದ್ದವರೆಲ್ಲ ಅವರವರ ದುಡ್ಡಿನೊಡನೆ ಹಿತ್ತಲ ಕಡೆಯಿಂದ ಮಾಯವಾದರು. ನಂಜುಂಡಿ, ಕಮಲ ಬೀದಿಯ ಅಗಳಿ ಹಾಕಿ, ಜಮಖಾನೆ ಸುತ್ತಿ ಮೂಲೆಗೆ ಬಿಸಾಡಿದರು. ಸರ್ಕಸ್ಸಿನ ಆಟ ಬದಲಾವಣೆಗೆ ಅಣಿಮಾಡುವಂತೆ ಚಕಚಕ ನಡೆದುಹೋಯಿತು.

ಪೋಲೀಸ್ ವ್ಯಾನ್ ಮೆಲ್ಲಗೆ ಬಂದು ನಿಂತಿತು. ದಫೇದಾರ್ ನರಸಯ್ಯ ವ್ಯಾನಿನಿಂದ ಇಳಿದ. ಇವನೊಡನೆ ಕಾನ್‌ಸ್ಟೇಬಲ್ ಸಿದ್ದ, ಮರಿಯ, ಹನುಮಂತ ದೊಪದೊಪ ಇಳಿದರು. ಹನುಮಂತ ನೇರವಾಗಿ ಲಕ್ಷ್ಮಮ್ಮನ ಮನೆಯ ಬೀದಿಯ ಬಾಗಿಲ ಹತ್ತಿರ ಹೋಗಿ, 'ಬಾಗಿಲು!' ಎಂದು ಅರಚಿ ದಬದಬ ಬಡಿದ.

"ಯಾರು?" ಎಂದು ಬಾಗಿಲು ತೆರೆದಳು ರತ್ನ.

"ಎಲ್ಲಿ ಅವರು?"—ಹನುಮಂತ ಒಳಗೆ ಹೋಗಲು ಬಾಗಿಲು ನೂಕಿ ಹೆಜ್ಜೆ ಇಟ್ಟ.

"ಯಾರು? ಸ್ವಲ್ಪ ನಿಧಾನಿಸಪ್ಪ, ಅಧ್ಯಾಕ್ ಹಾಗ್ ನುಗ್ತಿ! ಇದೇನ್ ಹೋಟ್ಲ, ಹೆಂಡದಂಗಡೀನ!" ಎಂದು ರತ್ನ ರೇಗಿ ಅಡ್ಡನಿಂತಳು.

ಹನುಮಂತ ಹಿಂದಕ್ಕೆ ಸರಿದ.

ದಫೇದಾರ್ ನರಸಯ್ಯ ಇಬ್ಬರು ಕಾನ್‌ಸ್ಟೇಬಲ್‌ಗಳೊಡನೆ ನಂಜಮ್ಮನ ಮನೆಯ ಕಡೆ ಹೋದ.

ಪಕ್ಕದ ಮನೆಯಲ್ಲಿ ಗಲಾಟೆ ಆಗುತ್ತಿತ್ತು.

ಕಾನ್‌ಸ್ಟೇಬಲ್ ಕರಿಯಪ್ಪ ಏಜೆಂಟ್ ಶ್ರೀಕಂಠಯ್ಯನ ರಟ್ಟೆ ಹಿಡಿದು ಎಳೆಯುತ್ತ "ಒಬ್ಬ ಸಿಕ್ಕ, ಇಬ್ಬರು ಪರಾರಿ!" ಎಂದು ಹೊರಗೆ ಬಂದ.

ಪಾಪ, ಏನೂ ಅರಿಯದ ವ್ಯಕ್ತಿ ಬಿಚ್ಚಿಹೋದ ತನ್ನ ರುಮಾಲನ್ನು ಒಂದು ಕೈಯಲ್ಲಿ ಹಿಡಿದು, ಚೀಲವನ್ನು ಮತ್ತೊಂದು ಕೈಯಲ್ಲಿ ಹಿಡಿದು "ಅಯ್ಯೋ ! ಇದ್ಯಾಕಪ್ಪ....ನಾನಲ್ಲಪ್ಪ....ಶಂಕರಪ್ಪನ ಕರೀರಪ್ಪಾ....ಅಯ್ಯೋ, ನಾನು ಏಜೆಂಟಪ್ಪಾ........" ಎಂದು ಗೋಳಾಡುತ್ತಾ ಹೊರಗೆ ಬಂದ.

ಕರಿಯಪ್ಪನ ಕಣ್ಣು ಸನ್ನೆ ದಫೇದಾರ್‌ಗೆ ಅರ್ಥವಾಯಿತು.

ನರಸಯ್ಯ "ತುಂಬೋ ಅವನ್ನ ವ್ಯಾನ್‌ಗೆ. ಪರೇಲು, ಸೂಳೇಮಕ್ಕಳಿಗೆ ಪರೇಲು !" ಎಂದು ಗರ್ಜಿಸಿದ.

ಕರಿಯಪ್ಪ ಏಜೆಂಟ್ ಶ್ರೀಕಂಠಯ್ಯನನ್ನು ವ್ಯಾನಿಗೆ ತುಂಬಿದ.

ದಫೇದಾರ್ ನರಸಯ್ಯ ಕರಿಯಪ್ಪನೊಡನೆ ಲಕ್ಷಮ್ಮನ ಮನೆಯೊಳಕ್ಕೆ ಹೋದ.

ತಪ್ಪಿತಸ್ಥರನ್ನು ಹಿಡಿದು ತಂದು ತನ್ನನ್ನು ಬಿಟ್ಟಾರೆಂಬ ಆಸೆ ಮೂಡಿ, ಶ್ರೀಕಂಠಯ್ಯ ವ್ಯಾನಿನ ಕಡೆಯಿಂದ ಆ ಕಡೆಯೇ ನೋಡಿದ.

ಕರಿಯಪ್ಪ ಮತ್ತು ಮಾದಪ್ಪನವರು ಗೆದ್ದಿದ್ದ ಒಟ್ಟು ಅರುವತ್ತೈದು ರೂಪಾಯಿಯಲ್ಲಿ ದಫೇದಾರ್ ಮತ್ತು ಕಾನ್‌ಸ್ಟೇಬಲ್‌ಗಳ ಬಾಬ್ತು ಹದಿನೈದು ರೂಪಾಯಿ ನರಸಯ್ಯನ ಜೇಬು ಸೇರಿದುವು. ಶ್ರೀಕಂಠಯ್ಯನ ವಿಷಯವಾಗಿ ಮಾತಾಡದೆ ಮೌನವಾಗಿರಲು ನಂಜಮ್ಮನಿಗೆ ಐದು ರೂಪಾಯಿ ಫೀಜು ತಲಪಿತು.

ಮಾರಮ್ಮನ ಚೌಕದ ಲಕ್ಷಮ್ಮನ ಮನೆ, ಗಾಣಿಗರ ಬೀದಿಯ ಪುಟ್ಟಮ್ಮನ ಮನೆ, ಗೌಡರ ಹಾಲಪ್ಪನ ಗರುಡಿಯ ಜಗುಲಿ, ಅರಳಿಕಟ್ಟೆಯ ರಾಮಮಂದಿರ, ಪೇಟೆ ಬೀದಿಯ ರಂಗಾಸಾನಿಯ ಮನೆ ಮುಂತಾದ ಸ್ಥಳಗಳಲ್ಲಿ ಜೂಜಾಡುವುದು ಸಾಮಾನ್ಯವಾಗಿಬಿಟ್ಟದೆ. ಯುಗಾದಿಯ ದಿನವಂತೂ ರಾತ್ರಿ ಹಗಲು ಎಡೆಬಿಡದೆ ಆಡುತ್ತಿರುತ್ತಾರೆ. ಆಸಾಮಿಗಳನ್ನು ಹಿಡಿದು ಕೇಸು ಹಾಕಲೇಬೇಕು, ಎಂದು ಸಬ್ ಇನ್‌ಸ್ಪೆಕ್ಟರ ಆರ್ಡರಾಗಿತ್ತು.

ಹೆಸರಿಗೆ ಕೇಸೂ ಆಗಬೇಕು, ತಮ್ಮ ಕೈಯೂ ಬೆಚ್ಚಗೆ ಆಗಬೇಕು ಎಂದಿದ್ದ ಕೆಲವು ದಫೇದಾರರು ತಮಗೆ ತಕ್ಕ ಪರಿವಾರ ಕಟ್ಟಿಕೊಂಡು ಜೂಜಿನ ಪತ್ತೆಗೆ ಹೊರಡುತ್ತಿದ್ದರು. ಜೂಜಾಡುವುದರಲ್ಲಿ ನಿಸ್ಸೀಮನಾದ ಕಾನ್‌ಸ್ಟೇಬಲ್ ಕರಿಯಪ್ಪ ಜೂಜಿನ ರುಚಿಯ ಜೊತೆಗೆ ಪೋಲೀಸ್ ಕಸಬಿನ ರುಚಿಯನ್ನೂ

ಚೆನ್ನಾಗಿ ಅನುಭವಿಸಿದ್ದುದರಿಂದ ಯಾವ ದಫೇದಾರನೇ ಬರಲಿ, ಯಾವ ಕಾನ್ಸ್ಟೇಬಲೇ ಬರಲಿ ಸರಿಮಾಡಿಬಿಡುವುದರಲ್ಲಿ ಚೆನ್ನಾಗಿ ತರಬೇತಾಗಿದ್ದ. ಆತ ಆಸ್ತಿಪಾಸ್ತಿ ಏನೂ ಇಲ್ಲದ, ಇಪ್ಪತ್ತು ರೂಪಾಯಿಯ ಕಾನ್ಸ್ಟೇಬಲ್ ಆದರೂ ಲಕ್ಷ್ಮಮ್ಮ ಅವನನ್ನು ಪ್ರೀತಿಸಿ, ಅವನಿಗೆ ಸ್ವಾಗತ ನೀಡುತ್ತಿದ್ದುದು ಆತನ ಈ ಬುದ್ಧಿವಂತಿಕೆಗಾಗಿಯೆ. ಮುಳ್ಳಿಗೆ ಮುಳ್ಳು ಇದೊಂದಿರಲಿ ಎಂದು ಸಾಕಿಕೊಂಡಿದ್ದಳು. ರತ್ನಳನ್ನು ತಂದುಕೊಟ್ಟಮೇಲಂತೂ ಲಕ್ಷ್ಮಮ್ಮನಿಗೂ, ಕರಿಯಪ್ಪನಿಗೂ ಇದ್ದ ಬಾಂಧವ್ಯ ಇನ್ನೂ ಬಲವಾಯಿತು.

ಆದರೆ, ಏಜೆಂಟ್ ಶ್ರೀಕಂಠಯ್ಯನನ್ನು ಹಿಡಿದುಕೊಟ್ಟ ರತ್ನಳ ಸಲಹೆ ಸಹಕಾರ ಇಲ್ಲದಿದ್ದರೆ ಪೋಲೀಸ್ ಕರಿಯಪ್ಪನೂ ಎಷ್ಟೋ ಬಾರಿ ಕಳ್ಳನಾಗಿ ಕತ್ತಲು ಮನೆ ಸೇರಿಬಿಡಬೇಕಾಗಿತ್ತು. ರತ್ನ ಚಿಕ್ಕವಳಾದರೂ ಇಂಥ ಅನೇಕ ಸನ್ನಿವೇಶಗಳಲ್ಲಿ ತನ್ನ ವಯಸ್ಸಿಗೆ ಮೀರಿದ ಬುದ್ಧಿವಂತಿಕೆ ತೋರಿಸಿ ಕರಿಯಪ್ಪನನ್ನೂ, ಲಕ್ಷ್ಮಮ್ಮನನ್ನೂ, ಲಕ್ಷ್ಮಮ್ಮನ ಇತರ ಗಿರಾಕಿಗಳನ್ನೂ ಬೆರಗುಮಾಡಿದ್ದಳು.

ಕಮಲ ನಿರಾಸೆಯನ್ನು ಹುಟ್ಟಿಸಿದರೂ, ಅತ್ಯಂತ ಚುರುಕುಬುದ್ಧಿಯ ರತ್ನಳನ್ನು ನೋಡಿ ಲಕ್ಷ್ಮಮ್ಮ ಸಮಾಧಾನಪಟ್ಟುಕೊಳ್ಳುತ್ತಿದ್ದಳು.

ಒಮ್ಮೆ ಸೋತುಹೋದ ನಾಗರಾಜ, ಒಂದು ಸಾವಿರ ರೂಪಾಯಿಯೊಡನೆ ಕರಿಯಪ್ಪನ ಹಿಂದೆ ಮತ್ತೆ ಈ ಮನೆಗೆ ಬಂದ.

ಸಾವಿರದ ಕಂತೆ ನೋಡಿದ ಲಕ್ಷ್ಮಮ್ಮ ಮತ್ತೊಮ್ಮೆ ಮಗಳಿಗೆ ಬಲೆ ಬೀಸಿದಳು.

ನೋಟಿನ ಕಂತೆಯನ್ನು ಅವಳ ಮುಂದೆ ಬಿಸಾಡಿದ್ದೂ ಆಯಿತು. ಆದರೆ ತಾಯಿಗೆ ಅದೇ ಉತ್ತರ ಬಂತು.

ಹದಿನೇಳು ವರುಷದ ರತ್ನ 'ಬೆಪ್ಪುತಕ್ಕಡಿ, ಸಾವಿರಾರು ರೂಪಾಯಿಯ ಯಜಮಾನಿ ಆಗುವುದರ ಬದಲು ಒಂದು ಗಂಡಿನ ಗುಲಾಮಳಾಗ್ತಾಳಂತೆ!' ಎಂದುಕೊಂಡಳು.

ಲಕ್ಷ್ಮಮ್ಮ 'ನನಗೆ ದುಡ್ಡಿನ ಆಸೆ ಇಲ್ಲ ಸಾಹುಕಾರ್ರೆ, ಮುಖ್ಯ ಹಕ್ಕೀಗೇ ಇಷ್ಟವಿಲ್ಲ....ದಿನಾ ಸಾರು ಅನ್ನ ಊಟಮಾಡ್ಕೊಂಡು, ಒಂದೇ ಮುಖ ನೋಡ್ಕೊಂಡು ಬಿದ್ದಿರ್ತೀನಿ ಅನ್ನುತ್ತೆ, ನಾನೇನ್ಮಾಡಲಿ ಎಂತ ಹೇಳಿಬಿಡು ಕರಿ

ಯಪ್ಪ' ಎಂದು ಸಿಟ್ಟಾಗಿ ನುಡಿದಳು.

ಮಗ ಶುದ್ಧ ಪೋಲಿ ಆಗಿದ್ದರೂ, ಶಾಸ್ತ್ರಕ್ಕಾದರೂ ಅವನ ಲಗಾಮು ಹಿಡಿದಿದ್ದ ನಂಜಪ್ಪಶೆಟ್ಟರು ಪಾರ್ಶ್ವವಾಯು ಬಂದು ಮೂಲೆ ಹಿಡಿದು ಬಹಳ ಕಾಲವಾಗಿತ್ತು. ಮೂರು ಲಕ್ಷದ ಕುಳ ಬಿಟ್ಟರೆ ಆದೀತೆ, ಎಂದು ಲಕ್ಷ್ಮಮ್ಮ ಯೋಚಿಸುತ್ತಿದ್ದಳು.

ಅವಳಂತೆಯೇ ಆಲೋಚಿಸುತ್ತಿದ್ದ ಕರಿಯಪ್ಪ ತಕ್ಕ ಪ್ಲಾನು ಸೂಚಿಸಿದ.

## ೭

ನಾಗರಾಜ ಊರಿನ ಸುಪ್ರಸಿದ್ಧ ದಿನಸಿ ವ್ಯಾಪಾರಿ ನಂಜಪ್ಪಶೆಟ್ಟರ ಎರಡನೆಯ ಹೆಂಡತಿಯ ಏಕಮಾತ್ರ ಪುತ್ರ. ಅವನಿಗೆ ಇನ್ನೂ ಇಪ್ಪತ್ತೆರಡು ತುಂಬಿರಲಿಲ್ಲ. ಆದರೂ ಹುಡುಗ ಹಾಳಾಗುವ ದಾರಿಯಲ್ಲೆಲ್ಲ ಹಲವಾರು ಮೈಲಿ ಹೋಗಿ, ಗಿಡ ಬೆಳೆದು ಡೊಂಕಾದ ಮರವಾಗಿಬಿಟ್ಟಿತ್ತು. ಅವನನ್ನು ದಾರಿಗೆ ತರುವ ಭೂಪ ಈ ಜನ್ಮದಲ್ಲಿಲ್ಲ, ಎಂದು ನಂಜಪ್ಪಶೆಟ್ಟರು ನಂಬಿ ಕೊರಗುತ್ತಿದ್ದರು. ಹುಣ್ಣಿನ ಮೇಲೆ ಬರೆ ಎಳೆದಂತೆ ಇಂಥ ಪೋಲಿ ಮಗನೊಡನೆ ಹೋರಾಡುವುದರ ಜೊತೆಗೆ ಅವರು ಪಾರ್ಶ್ವವಾಯುವಿಗೆ ಬೇರೆ ತುತ್ತಾದರು.

ಅಂಗಡಿಯ ಆಡಳಿತ ಇಂಥ ಮಗನಿಗೆ ಸಿಕ್ಕಬಾರದೆಂದು, ತಮ್ಮ ಆಶ್ರಯದಲ್ಲಿ ಮೂವತ್ತು ವರುಷ ದುಡಿದ ಅತ್ಯಂತ ವಿಧೇಯ ನಾರಾಯಣರಾಯರ ಪಾಲಿಗೆ ಅದನ್ನು ವಹಿಸಿಕೊಟ್ಟಿದ್ದರು. ಯಜಮಾನರ ಪಾರ್ಶ್ವವಾಯು ಮತ್ತು ಪುತ್ರವಾಯು—ಈ ಎರಡರ ಅನುಕೂಲಾವಕಾಶದಲ್ಲಿ ಸಮಯೋಚಿತವಾಗಿ ನಾರಾಯಣರಾಯರು ಜೇಬು ತುಂಬಿಕೊಳ್ಳುತ್ತಿದ್ದರು. ಸಾಹುಕಾರರಿಗೆ ಪಾರ್ಶ್ವವಾಯು ತಗುಲಿದ ಎರಡು ವರುಷಗಳೊಳಗಾಗಿ, ನಾರಾಯಣರಾಯರು ದೊಡ್ಡ ಬ್ರಾಹ್ಮಣರ ಬೀದಿಯಲ್ಲಿ ಒಂದು ದೊಡ್ಡ ಮನೆ ಕೊಂಡರು. ಆತ ತನಗೆ ಕಾಣದಂತೆ ಹೀರಬಲ್ಲ, ಹೀರುತ್ತಾನೆ ಎಂಬುದರ ಅರಿವಿದ್ದರೂ ನಂಜಪ್ಪ ಶೆಟ್ಟರು ತಮ್ಮ ವ್ಯಾಪಾರಕ್ಕೆ ಹೊಸ ಹುಲೀಗಿಂತ ಹಳೇ ಹುಲಿ ಮೇಲು, ತಮಗೆ ಹಿತ ಎಂದುಕೊಂಡು ಸುಮ್ಮನಿದ್ದರು. ನಾರಾಯಣರಾಯರು ಸಮಯ ನೋಡಿ ಲಪಟಾಯಿಸುತ್ತಾರೆ, ಎಂಬುದು ಅವರಿಗೆ ಗೊತ್ತು. ಆದರೆ ಆ ವ್ಯಾಪಾರದಲ್ಲಿ ಚೆನ್ನಾಗಿ ಪಳಗಿದ್ದ ಶೆಟ್ಟರಿಗೆ, ಅವರು ಎಷ್ಟು ಹೊಡೆಯಬಹುದು, ಹೇಗೆ

ಹೊಡೆಯಬಹುದು ಎಲ್ಲ ತಿಳಿದಿದ್ದುದರಿಂದ, 'ಪಾಪ, ಕಷ್ಟಪಟ್ಟು ಕೆಲಸ ಮಾಡು ತ್ತಾನೆ, ಬ್ರಾಹ್ಮಣ ತಿನ್ನಲಿ' ಎಂದು ಸುಮ್ಮನಿದ್ದರು. ದಾರಿ ತಪ್ಪಿದ ಮಗ ಒಂದು ಕೈ, ಪಾರ್ಶ್ವವಾಯುವಿಗೆ ಸಿಕ್ಕಿದ ತಮ್ಮ ದೇಹ ಇನ್ನೊಂದು ಕೈ ಎರಡೂ ಮುರಿದಿರುವಾಗ ಪರಿಚಿತವ್ಯಕ್ತಿ ನಾರಾಯಣರಾಯರ ನೆರವು ಅವರಿಗೆ ಅತ್ಯಗತ್ಯವಾಗಿತ್ತು.

ಮಗ ಸಂಪೂರ್ಣವಾಗಿ ಹಾಳಾಗಿದ್ದರೂ ಅವನನ್ನು ದಾರಿಗೆ ತರಬಹುದು, ತರೋಣ ಎಂದುಕೊಳ್ಳುತ್ತಿದ್ದ ಸಾಹುಕಾರರು, ನಾರಾಯಣರಾಯರು ವ್ಯಾಪಾರದ ಮೇಲೆ ಊರಿಗೆ ಹೋದಾಗ ಮಗನಿಗೆ ಅಂಗಡಿಯ ಆಡಳಿತ ವಹಿಸಿ ತಿದ್ದಲು ಪ್ರಯತ್ನಿಸುತ್ತಿದ್ದರು. ನಾಗರಾಜ ನಾಲಾಯಖ್ ಎನ್ನಿಸಿಕೊಳ್ಳುತ್ತಿರಲಿಲ್ಲ. ದಾರಿಗೆ ಬರುವಂತೆ ತೋರುತ್ತಿದ್ದ. ಫೋರ್ತ್ ಫಾರಂ ವರೆಗೆ ಮಾತ್ರ ಓದಿದ್ದರೂ ಇಂಗ್ಲಿಷ್‌ನಲ್ಲಿ ಚೆನ್ನಾಗಿ ಓದುಬರೆಹ ಕಲಿತಿದ್ದ. ವ್ಯಾಪಾರದ ಗುಟ್ಟು ಲೆಕ್ಕಾಚಾರ ಎಲ್ಲ ಚೆನ್ನಾಗಿ ತಿಳಿದಿದ್ದ. ಆದರೆ ಸ ಹ ವಾ ಸ ದೋ ಷ ಆಗಾಗ ಅವನನ್ನು ಅಡ್ಡದಾರಿಗೆ ಎಳೆಯುತ್ತಿತ್ತು. ಅವನ ಮಿಡ್ಲ್‌ಸ್ಕೂಲ್ ಸ್ನೇಹಿತ ಸೋಮಶೇಖರ ಮಿಡ್ಲ್ ಸ್ಕೂ ಲಿ ಗೇ ತನ್ನ ಓದನ್ನು ಮುಗಿಸಿ ಬೀದಿಗೆ ಇಳಿದಿದ್ದ. ಅವನ ಬಲಭುಜವಾಗಿ ಶಾಸ್ತ್ರಿಗಳ ಮಗ ಆನಂದಿ, ಎಡಭುಜವಾಗಿ ಸೈಕಲ್‌ಷಾಪ್ ಸಿಂಗನ ಮಗ ಕೃಷ್ಣ ಎಲ್ಲ ಒಟ್ಟಿಗೆ ಸೇರಿ ತಮ್ಮ ಜೊತೆಯಲ್ಲಿ ಇತರರನ್ನೂ ಹಾಳುಮಾಡಲು ಹೊರಟಿದ್ದರು. ಊರಿನಲ್ಲಿ ಈ ಪಟಾಲಂನ ಪರಿಚಯವಿಲ್ಲದವರೇ ಅಪರೂಪ.

ಕಾಮನ ಹಬ್ಬ ಇವರಿಗೆ ಬಹಳ ದೊಡ್ಡ ಹಬ್ಬ. ಅದು ಹೊಸೂರಿಗೆಲ್ಲ ದೊಡ್ಡ ಹಬ್ಬವೂ ಹೌದು. ಹುಡುಗರು ಮಕ್ಕಳೆನ್ನದೆ ಎಲ್ಲರೂ, ಅವರವರ ಧರ್ಮಪತ್ನಿಯರ ಕಣ್ಣುಮುಂದೆ, ಹಿರಿಯರ ಮುಂದೆ, ಕಿರಿಯರ ಮುಂದೆ, ಬೀದಿಯ ಜನರ ಮುಂದೆ ಹದಗೆಟ್ಟು ನಡೆಯಲು ಲೈಸೆನ್ಸ್ ಪಡೆದ ವಿಚಿತ್ರ ಸನ್ನಿವೇಶ ಅದು. ಒಟ್ಟು ಊರಿನಲ್ಲಿ ಆರು ಕಡೆ ಕಾಮನನ್ನಿಡುವುದು ಪದ್ಧತಿ. ಪೇಟೆಯ ಬೀದಿಯ ಕಾಮ ತುಂಬ ಹೆಸರುವಾಸಿ. ಎಂದೂ ಹೊರಗೆ ಬಾರದ ಸುಪ್ರಸಿದ್ಧ ಸೂಳೆಯರೆಲ್ಲ ಅಲ್ಲಿಯ ತಾಪೆಗೆ ಬರಬೇಕಾಗಿತ್ತು. ಅವರಿಗೆ ತಕ್ಕ ಮರ್ಯಾದೆ, ವ್ಯಾಪಾರದ ಬಡಾವಣೆಗೆ ಅವಕಾಶ ಎಲ್ಲ ಒದಗುವ ಅನುಕೂಲ ಸನ್ನಿವೇಶ ಅದು. ಅಂಥ ಸದವಕಾಶವನ್ನು ಲಕ್ಷಮ್ಮನೂ ರಿಸರ್ವ್ ಮಾಡಿಸಿಕೊಂಡಿದ್ದಳು. ಮಾದಪ್ಪ

ನವರ ಮನೆಯ ಪಕ್ಕದಲ್ಲೇ ಕಾಮನನ್ನು ಕೂಡಿಸುತ್ತಿದ್ದುದರಿಂದ ಮಾದಪ್ಪ ನವರ ಈ ರತಿಗೆ ಅಲ್ಲಿ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿತ್ತು.

ಕಾಮನ ಹಬ್ಬದ ಹಿಂದಿನ ರಾತ್ರಿ ಅಲ್ಲಿಯ ಸಂಭ್ರಮ ಹೇಳಿತೀರದು. ಅಂದು ಲಕ್ಷಮ್ಮನ ತಾಪೆ ಆಗಲೇಬೇಕಾಗಿತ್ತು. ಕಮಲುವಿಗೆ ಇನ್ನೂ ಎಂಟು ವರುಷ ತುಂಬಿರಲಿಲ್ಲ. ಅಂದಿನಿಂದ ಬಂದ ಈ ಪದ್ಧತಿ ಕಮಲು, ರತ್ನ ಹೈಸ್ಕೂಲು ಸೇರುವವರೆಗೂ ತಪ್ಪದೆ ನಡೆಯಿತು. ಆಮೇಲೆ ಆ ಪದ್ಧತಿಗೆ ಕಮಲು ಒಂದು ರೀತಿ ಕಲ್ಲು ಹಾಕಿದರೆ, ರತ್ನ ಇನ್ನೊಂದು ರೀತಿಯಲ್ಲಿ ಹಾಕಿದಳು. ಹೋಟಲ ತಿಂಡಿಗಾಗಿ ಬಾಳಲು ಅಕ್ಕನಿಗೆ ಇಷ್ಟವಿಲ್ಲ; ಹೋಟಲು ಗಾಡಿಯ ತಿಂಡಿಯಾಗಿ ಬೀದಿಯಲ್ಲಿ ಬಾಳಲು ತಂಗಿಗೆ ಇಷ್ಟವಿಲ್ಲ.

ಆದರೆ ಕಮಲುವಿಗೆ ಹದಿನೈದು ತುಂಬಿದಾಗ, ರತ್ನಳಿಗೆ ಹದಿನಾಲ್ಕು ನಡೆಯುತ್ತಿದ್ದಾಗ ನಡೆದ ಕಾಮನ ಹಬ್ಬದಲ್ಲಿ ಕೊನೆಯ ಬಾರಿ ಮಣ್ಣಿನ ಕಾಮನ ಮುಂದೆ, ನೂರಾರು ಜನರ ಮಧ್ಯೆ ಅಪ್ಸರೆಯರಾಗಿ ನಟಿಸುವ ಅವಕಾಶ ಅವರಿಬ್ಬರಿಗೂ ಬಂದಿತ್ತು. ಆಗ, ಆಗತಾನೆ ಹತ್ತೊಂಬತ್ತು ಮೀರಿದ್ದ ನಾಗ ರಾಜ, ಇಪ್ಪತ್ತರೊಳಗಿದ್ದ ತನ್ನ ಗೆಳೆಯರೊಡನೆ ಈ ಹುಡುಗಿಯರಿಬ್ಬರನ್ನೂ ನೋಡಿದ್ದ; ರತ್ನಳ ಕಣ್ಣಿಗಾಗಿ, ಸುಂದರವಾದ ಮುಖಕ್ಕಾಗಿ, ಕಮಲಳ ಬಣ್ಣ ಕ್ಕಾಗಿ, ನೀಳವಾದ ದೇಹಕ್ಕಾಗಿ ಅವರಿಬ್ಬರನ್ನೂ ಮೆಚ್ಚಿದ್ದ. ನಾಗರಾಜನ ಮನಸ್ಸಂತೂ ಏನೇನೋ ಯೋಚನೆ ಮಾಡಿಬಿಟ್ಟಿತ್ತು. 'ರತ್ನ ಕಮಲು ವಿಗಿಂತ ಚೆನ್ನಾಗಿದ್ದಾಳೆ....ಅವಳನ್ನೇಕೆ ನಾನು ಮದುವೆ ಆಗಿಬಿಡಬಾರದು? ಲಕ್ಷಮ್ಮನ ಮನೆಗೆ ಹೋಗಿ, ನಾನೇಕೆ ಈ ಬಗ್ಗೆ ಮಾತಾಡಬಾರದು?........ ಛೆ, ಅವಳು ಎಷ್ಟಾದರೂ ಸೂಳೆ. ದುಡ್ಡಿಗೆ ಸಿಕ್ಕುವ ಹೆಂಡತಿ, ನೋಡಿ ಕೊಳ್ಳೋಣ' ಎಂದುಕೊಂಡ.

ಮಧ್ಯರಾತ್ರಿ ತಾಪೆ ಮುಗಿದನಂತರ ಮಾದಪ್ಪನವರ ಮಹಡಿಯ ಮೇಲೆ ದೊಡ್ಡವರೆಲ್ಲ ಸೇರಿದರು. ಚೆನ್ನಾಗಿ ಕುಣಿದ ಹುಡುಗಿಯರಿಗೆ, ತರಬೇತು ಮಾಡಿದ್ದ ಲಕ್ಷಮ್ಮನಿಗೆ, ಪಕ್ಕವಾದ್ಯದವರಿಗೆ ಮರ್ಯಾದೆಮಾಡುವ ಕೆಲಸ ನಡೆಯಬೇಕಾಗಿತ್ತು. ಹಳೆಯ ಕಾಲದಿಂದ ಬಂದ ಪದ್ಧತಿ ನಡೆಯಿತು. ಉಳಿ ದವರೆಲ್ಲ ಕುತೂಹಲದಿಂದ ನೋಡುತ್ತಾ ಹೊರಗೆ ನಿಂತಿದ್ದರು. ಸೈಕಲ್‌ಷಾಪ್ ಸಿಂಗ್ ಬಿಟ್ಟಿ ಒದಗಿಸಿದ್ದ ದೊಡ್ಡ ಪೆಟ್ರೋಮ್ಯಾಕ್ಸ್ ಪಡಸಾಲೆಯಲ್ಲಿ ಬೆಳ

ಗುತ್ತಿತ್ತು ; ಎಣ್ಣೆ ಗಾಳಿ ಎರಡೂ ಮುಗಿಯುವುದರಲ್ಲಿದ್ದ ಇನ್ನೆರಡು ದೀಪಗಳು ಹೊರಗೆ ಚಪ್ಪರದಲ್ಲಿ ಕುಳಿತು ಬಗ್‌ಬಗ್ ಎನ್ನುತ್ತ ಉಬ್ಬರವಿಳಿತ ನಡಸಿದ್ದುವು.

ಮಾದಪ್ಪನವರ ಮಗ ಮದುವೆಯಾದ ಮಹೇಶ್ವರನಿಗೆ ಇವೆಲ್ಲ ಹಿಡಿಸದು. ಮೊದಮೊದಲು ಎಲ್ಲ ಹುಡುಗರಂತೆ ಕುಣಿಯುತ್ತಿದ್ದವನು ಆಮೇಲೆ ಅಸಹ್ಯ ಗೊಂಡು, ಮದುವೆಯಾದ ರತಿಯೊಡನೆ ಕಾಮನಾಗಿ ಮನೆಯಲ್ಲಿ ಮಾತ್ರ ರಮಿಸುತ್ತಿದ್ದ. ತಾಪೆ ಆಗುವ ವರೆಗೂ ಪದ್ಧತಿಯಂತೆ ಚಪ್ಪರದ ಆಡಳಿತ ನೋಡಿಕೊಂಡು, ಹೆಂಗಸರು ಮಕ್ಕಳು ಕುಳಿತು ನೋಡಿ ಆನಂದಿಸುವಂತೆ ನೋಡಿ ಆಮೇಲೆ ಒಳಗೆ ಹೋಗಿ ನಿಶ್ಚಿಂತೆಯಿಂದ ಮಲಗಿ ನಿದ್ರಿಸುತ್ತಿದ್ದ.

ತಮಗೆ ಪ್ರವೇಶವಿಲ್ಲ, ಎಂದ ಮೇಲೆ ಬಹಳ ಕೋಪಗೊಂಡಿದ್ದ ನಾಗರಾಜನ ಪಟಾಲಂ ತನ್ನನ್ನು ನೂಕಿ ಹಾಕಿಕೊಂಡಿದ್ದ ಪಡಸಾಲೆಯ ಬಾಗಿಲ ಹತ್ತಿರ ನಿಂತು ಯೋಚನೆ ಮಾಡುತ್ತಿತ್ತು. 'ಹೇಗಾದರೂ ಒಳಗೆ ಹೋಗಬೇಕು, ನೋಡಬೇಕು'—ಇದೇ ಆ ಆಲೋಚನಾ ಮಂಡಳಿಯವರ ಗುರಿ.

ಬಾಗಿಲು ಬಡಿದು, ಬಾಗಿಲು ತೆಗೆದ ಕೂಡಲೆ ಒಟ್ಟಿಗೆ ಒಳಗೆ ನುಗ್ಗಿಬಿಡಬೇಕೆಂದು ಸಲಹೆ ಮಾಡಿದ ಆನಂದಿ. ನಾಗರಾಜ, ಸೋಮಶೇಖರ ಅದಕ್ಕೆ ತಮ್ಮ ಒಪ್ಪಿಗೆ ಸೂಚಿಸಿದರು. ಆದರೆ ಕೃಷ್ಣ, "ಬ್ಯಾಡಪ್ಪ ನಮ್ಮಪ್ಪ ಇರ್‍ತಾನೆ.... ಮನೇಲಿ ಹಿಡ್ಕೊಂಡ್ ತದಕ್ತಾನೆ" ಎಂದು ಹಿಂಜರಿದ.

ಅದಕ್ಕೆ ಆನಂದಿ "ನಿಮ್ಮಪ್ಪ ಏನೋ ಮಹಾ ಇಲ್ಲಿ ಒಳಗೆ ಸೇರ್‍ಕೊಂಡು ಮಾಡೋದು........ತದಕ್ತಾನಂತೆ........ಅಯ್ಯೊ ಬೆಪ್ಪೆ!" ಎಂದ.

"ಏನೋಪ್ಪ, ನೀವ್ ಬೇಕಾದ್ರೆ ಹೋಗಿ........ನಾನಿಲ್ಲೇ ಬಾಗಿಲಲ್ಲಿ ನಿಂತಿರ್‍ತೀನಿ."

"ಬಿಡು ಬಿಕನಾಸಿ, ನಿಂಗೇ ಇಲ್ಲ."

ಪುಟ್ಟಾಚಾರಿ ಸೋಡಾಸೀಸೆ ತೆಗೆದುಕೊಂಡು ಮಹಡಿ ಹತ್ತಿ ಬಂದ. ಅವನು ಇನ್ನೂ ದೂರದಲ್ಲಿ ಇರುವಾಗಲೇ ನಾಗರಾಜನ ಪಟಾಲಂ ಬಾಗಿಲ ಹತ್ತಿರ ಬಂದು "ಸೋಡಾ ಬಂತು ಬಾಗಿಲು!" ಎಂದು ಒಟ್ಟಿಗೆ ಕೂಗಿತು. ಒಳಗೆ ಬಾಗಿಲ ಹತ್ತಿರದಲ್ಲಿದ್ದ ಮುದುಕ ರಂಗಪ್ಪ ಬಾಗಿಲು ತೆಗೆದ. ತಕ್ಷಣವೆ ಪಟಾಲಂ ಒಳಗೆ ಪ್ರವೇಶಿಸಿತು. ಹಿಂದೆ, ಸೋಡಾಸೀಸೆ ಹಿಡಿದ ಪುಟ್ಟಾಚಾರಿ ಬಂದ. ಬಾಗಿಲು ಮೊದಲಿದ್ದಂತೆ ಮುಚ್ಚಿಕೊಂಡಿತು.

ಅಗಳಿ ಹಾಕುತ್ತಿದ್ದ ರಂಗಪ್ಪ “ ನೀವ್ಯಾಕ್ರೋ ಬಂದ್ರಿ ! ಹುಡುಗರಿಗೇನ್ ಕೆಲ್ಸ ಇಲ್ಲಿ ! ” ಎಂದು ಕೇಳಿದ.

“ ಓಹೋ ! ಮು ದು ಕ ರಿ ಗೆ ಮಾತ್ರಾನೇನೋ !........ಇವರೊಬ್ಬರು ಬಂದರು ವಿಚಾರಿಸೋಕೆ ” ಎಂದ ಆನಂದಿ, ಅಲ್ಲಿಯೇ ಗೋಡೆಯ ಮಗ್ಗುಲಲ್ಲಿ ಕುಳಿತುಕೊಳ್ಳುತ್ತ.

“ ಮುಚ್ಕೋ ಬಾಯಿ....ನೀನೆಷ್ಟು ನಿನ್ನ ಬಾಯೆಷ್ಟು ! ತಲೆಯೆಲ್ಲ ಹರಟ್ತಾನೆ....”ಎಂದು ರಂಗಪ್ಪ ಕೆರಳಿ ಕೂಗಿದ.

ನಾಗರಾಜ “ ರಂಗಪ್ಪನೋರೆ....ನೀವು ಮುದುಕರು....ನಿಧಾನಿಸಬೇಕು ....ಪಾಪ, ಹುಡುಗ, ಬುದ್ಧಿಯಿಲ್ಲ....”

“ ಏನೋ ಅಂದ....ಹೋಗಲಿ ಬಿಡಿ ” ಎಂದು ಆನಂದಿ ಮುಂದುವರಿಸಿ, ಸಮಾಧಾನದ ಮಾತನ್ನು ಮುಗಿಸಿದ.

“ ಏನೋ ಬಿಡೋದು....ಅಯೋಗ್ಯ, ಅಯೋಗ್ಯ, ಅಯೋಗ್ಯ ! ಕತ್ತು ಹಿಡಿದು ಆಚೆಗೆ ತಳ್ಳಿಸಿಬಿಡ್ತೀನಿ ನೋಡು ” ಎಂದು ಅರಚಿದ ರಂಗಪ್ಪ.

ಆಗತಾನೆ ಆನಂದಭೈರವಿಯಲ್ಲಿ ಒಂದು ಹಾಡು ಮೊದಲು ಮಾಡಿದ್ದ ಲಕ್ಷ್ಮಮ್ಮನ ದನಿಗೆ ಮೆಚ್ಚಿ ತಲೆಹಾಕುತ್ತಿದ್ದ ನೀಲಕಂಠಪ್ಪ “ ಸದ್ದೋ ! ” ಎಂದು ಗಟ್ಟಿಯಾಗಿ ಕೂಗಿದ. ರಂಗಪ್ಪ, ನಾಗರಾಜನ ಪಟಾಲಂ, ಸುತ್ತಮುತ್ತಲ ಜನ ಎಲ್ಲ ಬೆಚ್ಚಿ ನಿಶ್ಶಬ್ದರಾದರು.

ತಾಯಿ ಒಂದು ಹಾಡು ಹಾಡಿದ ಮೇಲೆ ಕಮಲು, ರತ್ನ ಇಬ್ಬರೂ ಒಟ್ಟಿಗೆ ಒಂದೊಂದು ಹಾಡು ಹಾಡಿದರು.

ಪಡಸಾಲೆಯಲ್ಲಿ ಸೇರಿದ್ದವರೆಲ್ಲ ನಲವತ್ತು ಮೀರಿದವರು. ಎಲ್ಲರಿಗೂ ಲಕ್ಷ್ಮಮ್ಮನ ದೇಹದ ಮೇಲೆ ಕಣ್ಣಾದರೆ, ಗೋಡೆಯ ಅಂಚಿನಲ್ಲಿ, ಹಲವರಿಗೆ ಗೋಚರಿಸದಂತೆ ಕುಳಿತಿದ್ದ ನಾಗರಾಜನ ಪಟಾಲಂ, ಹಾಡುತ್ತಿರುವ ಆ ಎರಡು ಪುಟ್ಟ ಹಕ್ಕಿಗಳನ್ನೇ ದೃಷ್ಟಿಸಿ ನೋಡುತ್ತಿತ್ತು.

ಲಕ್ಷ್ಮಮ್ಮ ಇನ್ನೊಂದು ಹಾಡು ಹಾಡಬೇಕೆಂದೂ, ಅನಂತರ ಕಮಲಮ್ಮ ಒಂದನ್ನು ರತ್ನಮ್ಮ ಒಂದನ್ನು ಹಾಡಬೇಕೆಂತಲೂ ನೀಲಕಂಠಪ್ಪನವರು ಸಲಹೆ ಮಾಡಿದರು.

ಅದರಂತೆ ಲಕ್ಷ್ಮಮ್ಮ ಶ್ರೀರಂಜಿನೀರಾಗದಲ್ಲಿ ಒಂದು ಹಾಡು ಹಾಡಿದಳು.

ಅನಂತರ, ಹುಡುಗರಿಬ್ಬರ ಸಂಗೀತ ಪ್ರತ್ಯೇಕ ಪ್ರತ್ಯೇಕವಾಗಿ ನಡೆಯಿತು.

ರತ್ನ ಹಾಡುತ್ತಿದ್ದಾಗ ನಾಗರಾಜ ಅವಳನ್ನೇ ಎವೆಯಿಕ್ಕದೆ ನೋಡುತ್ತಿದ್ದ. ಅರೆಮುಚ್ಚಿದ ರೆಪ್ಪೆಯ ಕೆಳಗೆ ಸಾಲುಗೂದಲಿನ ನಡುವೆ ದೀಪದ ಬೆಳಕಿನಲ್ಲಿ ಹೊಳೆಯುವ ಅವಳ ಕಣ್ಣುಗಳು, ಮಾಟವಾದ ಹುಬ್ಬಿನ ಬಿಲ್ಲುಗೂದಲು, ವಿಶಾಲವಾದ ಹಣೆಯ ಮೇಲೆ ಹಾರಾಡುತ್ತಿದ್ದ ಗುಂಗುರು ಮುಂಗುರುಳು, ಆ ದುಂಡು ಮುಖಕ್ಕೆ ತಕ್ಕ ನೀಳವಾದ ಮೂಗು, ಪುಟ್ಟ ಬಾಯಿಯ ಕೆಂಪು ತುಟಿ, ಉಬ್ಬಿದ ಗುಲಾಬಿ ಕೆನ್ನೆ, ದುಂಡು ಕೊರಳು, ಚೆನ್ನಾಗಿ ಬೆಳೆದ ತೊಡೆಯ ಮೇಲೆ ತಾಳ ಹಾಕುತ್ತಿದ್ದ ನೀಳವಾದ ಅಂಗೈ, ಅಂಗೈ ಬೆರಳಿನಲ್ಲಿ ನಿಗನಿಗನೆ ಹೊಳೆಯುತ್ತಿದ್ದ ಹರಳಿನ ಉಂಗುರ—ಎಲ್ಲ ನೋಡಿ ನೋಡಿ ಆನಂದಪಡುತ್ತಿದ್ದ. ಆದರೆ ಅವನ ಕಣ್ಣು ಹೆಚ್ಚು ನೋಡುತ್ತಿದ್ದುದು ಹೌದೊ ಅಲ್ಲವೊ, ಎನ್ನುವಷ್ಟು ಉಬ್ಬಿದ ಎದೆಯನ್ನು—ಅಲ್ಲ ಎದೆಯ ಭಾಗವನ್ನು ಮುಸುಕಿದ್ದ ಸೀರೆಯ ಸೆರಗನ್ನು.

ಸಂಗೀತ ಮುಗಿದ ಮೇಲೆ, ಪದ್ಧತಿಯಂತೆ ಲಕ್ಷ್ಮಮ್ಮ ಮಡಿಸಿಕೊಟ್ಟ ಎಲೆ ಅಡಕೆಯನ್ನು ಹಲವರು ತೆಗೆದುಕೊಂಡು ತಟ್ಟೆಗೆ ದಕ್ಷಿಣೆ ಹಾಕಿದರು. ಅನಂತರ ಶಾಸ್ತ್ರದಂತೆ, ಲಕ್ಷ್ಮಮ್ಮ ನಗುತ್ತ ಎದ್ದುಬಂದು ಎಲ್ಲರ ಎದುರಿನಲ್ಲಿ ಮಾದಪ್ಪನವರ ಬಲತೊಡೆಯ ಮೇಲೆ ಕುಳಿತಳು. ಒಂದು ಕ್ಷಣ ಕುಳಿತು ಮೇಲೆದ್ದ ತಮ್ಮ ರತಿಗೆ ಮಾದಪ್ಪನವರು ಆಗ ಪದ್ಧತಿಯಂತೆ ಐದು ರೂಪಾಯಿ ಕೊಟ್ಟರು. ಆಮೇಲೆ ಲಕ್ಷ್ಮಮ್ಮ ಉಳಿದ ಒಬ್ಬಿಬ್ಬರ ತೊಡೆಯ ಮೇಲೆ ಕುಳಿತ ಶಾಸ್ತ್ರಮಾಡಿ ಹದಿನೈದು ಇಪ್ಪತ್ತು ರೂಪಾಯಿ ವಸೂಲು ಮಾಡಿದಳು.

ಇದನ್ನೆಲ್ಲ ನೋಡುತ್ತಿದ್ದ ನಾಗರಾಜ 'ಆ ಹುಡುಗಿಯರನ್ನೂ ಹಾಗೆಯೇ ಕೂಡಿಸುವರೋ, ಏನೊ! ಯಾರ ತೊಡೆಯ ಮೇಲೆ ಕೂಡಿಸುತ್ತಾರೊ! ಹಾ! ತನ್ನ ತೊಡೆಯ ಮೇಲೆ ಆ ರತ್ನ ಕೂತುಕೊಂಡರೆ!'—ದುಡ್ಡಿಲ್ಲದ ಜೇಬಿನ ಆ ಪೋಲಿ ಹೀಗೆ ಕನಸು ಕಾಣುತ್ತಿರುವಾಗ, ಪುಟ್ಟಾಚಾರಿ ದುಡ್ಡಿನ ತಟ್ಟೆ ಹಿಡಿದು ಎಲ್ಲರ ಹತ್ತಿರವೂ ದಕ್ಷಿಣೆ ವಸೂಲು ಮಾಡುತ್ತ ಬಂದ. ಎಲ್ಲ ಎಂಟಾಣೆ, ಒಂದು ರೂಪಾಯಿ, ಎರಡು ರೂಪಾಯಿ ಹಾಕುತ್ತಿದ್ದರು.

ರತ್ನಳ ರೂಪಿಗೆ ಮನಸೋತಿದ್ದ ನಾಗರಾಜ, ತನ್ನ ಕೊರಳಲ್ಲಿದ್ದ ಚೈನನ್ನೇಕೆ ಬಿಚ್ಚಿ 'ಇದು ರತ್ನಮ್ಮನಿಗೇ!' ಎಂದು ಕೂಗಿ ತಟ್ಟೆಯಲ್ಲಿ ಹಾಕ

ಬಾರದು ಎಂದು ಯೋಚಿಸುತ್ತಿದ್ದ. ಆದರೆ ತಟ್ಟೆ ಈ ಹುಡುಗರ ಹತ್ತಿರವೇ ಸುಳಿಯಲಿಲ್ಲ.

ಆ ತಟ್ಟೆ ಹುಡುಗರಿಗಲ್ಲ, ದೊಡ್ಡವರಿಗೆ ಮಾತ್ರ; ದುಡ್ಡಿಲ್ಲದವರಿಗಲ್ಲ, ದುಡ್ಡಿದ್ದವರಿಗೆ ಮಾತ್ರ ಮೀಸಲು, ಎಂದು ಸೂಚಿಸುವ ಬಿಗುಮಾನದಲ್ಲಿ ಪುಟ್ಟಾಚಾರಿ ತಟ್ಟೆ ಹಿಡಿದು ಅಲ್ಲಲ್ಲೇ ಸುತ್ತಾಡಿ, ದುಡ್ಡು ತುಂಬಿದ ತಟ್ಟೆಯನ್ನು ತೆಗೆದುಕೊಂಡು ಹೋಗಿ ಮಾದಪ್ಪನವರ ಮುಂದಿಟ್ಟ.

ಮುಂದೆ ಕುಳಿತಿದ್ದ ಮಾದಪ್ಪನವರು ಎದ್ದು ನಿಂತು, ಗುತ್ತಾಗಿ ಕಟ್ಟಿದ ಮಲ್ಲಿಗೆ ಹಾರವೊಂದನ್ನು ಲಕ್ಷ್ಮಮ್ಮನ ಕೊರಳಿಗೆ ಹಾಕಿ, ದುಡ್ಡಿನ ತಟ್ಟೆಯನ್ನು ಅವಳ ಕೈಯಲ್ಲಿಟ್ಟರು. ಅದೇ ರೀತಿ ಕಟ್ಟಿದ್ದ ಎರಡು ಹೂವಿನ ಹಾರವನ್ನು ಕಮಲ ಮತ್ತು ರತ್ನಳ ಕೊರಳಿಗೆ ಹಾಕಿ, ಅವರ ಹಾಡಿಗೆ ತಮ್ಮ ಮೆಚ್ಚಿಗೆ ಸೂಚಿಸಲು ಇಬ್ಬರ ಕೆನ್ನೆಗಳನ್ನೂ ಹಿಂಡಿ ನಕ್ಕರು.

ಆಗ ನಾಗರಾಜನಿಗೆ ಹೇಗೆ ಹೇಗೋ ಆಯಿತು.

ಪಕ್ಕವಾದ್ಯದವರಿಗೆ ಖರ್ಚಿಹಾರಗಳನ್ನು ಹಾಕಿ ವಂದನೆಗಳನ್ನು ಅರ್ಪಿಸಿದ್ದಾಯಿತು.

ಅನಂತರ ಎಲ್ಲರೂ ಎದ್ದು ನಿಂತರು.

ಬಾಗಿಲಲ್ಲಿದ್ದ ರಂಗಪ್ಪ ಬಾಗಿಲು ತೆರೆದ. ಹೊರಗೆ ಕಿಟಕಿಯ ಮೇಲೆ ಹತ್ತಿ ನಿಂತು ನೋಡುತ್ತಿದ್ದ ಸಣ್ಣ ಪುಟ್ಟ ಹುಡುಗರು ಧುಮುಕಿ ಮೆಟ್ಟಲಿಳಿದು ಓಡಿದರು. ಅಲ್ಲಿ ನಿಂತಿದ್ದ ದೊಡ್ಡವರೂ ಹೊರಡಲನುವಾದರು. ಬಾಗಿಲು ತೆಗೆದ ಕೂಡಲೇ ಹೊರಗೆ ಹೊರಡಬೇಕೆಂದಿದ್ದ ಸೋಮಶೇಖರನ ಅಂಗಿಯನ್ನು ನಾಗರಾಜ ಹಿಡಿದೆಳೆದ.

" ಲೊ ಬೆಪ್ಪೆ....ನಿಲ್ಲೊ....ಏನು ಅವಸರ? "

" ಏ ಬಾರೊ. ಆಮೇಲೆ ನೀಲಕಂಠಪ್ಪ ನೋಡಿದ್ರೆ....ನಮ್ಮಪ್ಪನಿಗೆ ಹೇಳಿಬಿಡ್ತಾನೆ...."

" ಏನೋ ಹೇಳಿದ್ರೆ ?....ಸ್ವಲ್ಪ ನಿಲ್ಲು. ಸ್ವಲ್ಪ ಹತ್ತಿರದಿಂದ ನೋಡೋಣ ಅವರನ್ನಾಂತ....ಅಗೊ ಬಂದ್ರು—ನೀ ಹಿಂದಿರು........" ಎಂದು ಅವನನ್ನು ಎಳೆದು ತಾನು ಮುಂದೆ ನಿಂತುಕೊಂಡ. ಗಂಡಸರೆಲ್ಲ ಒಬ್ಬೊಬ್ಬರಾಗಿ ಹೊರಗೆ ಹೋಗುತ್ತಿದ್ದರು. ಬಾಗಿಲ ಹತ್ತಿರ ತನ್ನ ಪಟಾಲಂನ ಮುಂದೆ ನಿಂತಿದ್ದ

ನಾಗರಾಜ, ತಾಯಿಯೊಡನೆ ಬರುತ್ತಿದ್ದ ರತ್ನಳನ್ನೇ ದೃಷ್ಟಿಸಿ ನೋಡುತ್ತಿದ್ದ. ರತ್ನಳ ಹಿಂದೆ ಕಮಲ ಇದ್ದಳು. ಬಾಗಿಲ ಹತ್ತಿರ ಬಂದಾಗ ರತ್ನ ನಾಗರಾಜನ ಮುಖ ನೋಡಿದಳು. ನಾಗರಾಜ ತನ್ನನ್ನೇ ದೃಷ್ಟಿಸಿ ನೋಡುತ್ತಿದ್ದ. ತಕ್ಷಣವೆ, ಮುಖ ಗಂಟು ಹಾಕಿಕೊಂಡು ತಲೆ ತಗ್ಗಿಸಿ ನಡೆದಳು. ಕಾಮದ ಕಣ್ಣಿನಿಂದ ನೋಡುತ್ತಿದ್ದ ನಾಗರಾಜನ ಮುಖಕ್ಕೆ ರತ್ನಳ ಅಸಹ್ಯದೃಷ್ಟಿ ಬಡಿಯಿತು. ನಿರಾಸೆಗೊಂಡ ಆ ಕಣ್ಣು, ಅದೇ ಸ್ಥಳದಲ್ಲಿ ಬಂದ ಕಮಲನ ಮುಖ ನೋಡಿ ಅರಳಿತು. ಕಮಲ ನಾಗರಾಜನ ಮುಖವನ್ನೇ ಒಂದೆರಡು ಕ್ಷಣ ದುರುಗುಟ್ಟಿಕೊಂಡು ನೋಡಿ ಮುಂದೆ ನಡೆದಳು.

ಲಕ್ಷಮ್ಮನಿಗಾಗಿ ಗಾಡಿ ಬಾಗಿಲಲ್ಲಿ ಕಾಯುತ್ತಿತ್ತು. ಅದುವರೆಗೂ ಮನೆಯ ಕಾವಲಾಗಿದ್ದ ನಂಜುಂಡಿ ಮನೆಗೆ ಬೀಗ ಹಾಕಿಕೊಂಡು, ಆಗತಾನೇ ಬಂದು ಗಾಡಿಯಲ್ಲಿ ಕುಳಿತಿದ್ದ. ತಾಯಿ ಮಕ್ಕಳೊಂದಿಗೆ ಗಾಡಿ ಹತ್ತಿದಳು.

ನಾಗರಾಜ “ಲೋ ಕೃಷ್ಣಾ ! ಕೃಷ್ಣ ಲೋ೯೯ ! ” ಎಂದು ಕೂಗುತ್ತಾ ಗಾಡಿಯ ಹತ್ತಿರ ಬಂದ.

ಆನಂದಿ “ಅದೆಲ್ಲಿರುತ್ತೊ ಇಷ್ಟೊ ಹೊತ್ತಿನ ತನಕ........ಹೋಗಲಿಬಿಡು.... ಅದೃಷ್ಟವಿಲ್ಲ. ಮನೆಗ್ಹೋಯ್ತು ! ” ಎಂದ.

ನಂಜುಂಡಿಯೊಡನೆ ಮೂವರನ್ನೂ ಕೂಡಿಸಿಕೊಂಡು ಗಾಡಿ ಮುಂದೆ ಸರಿಯಿತು. ಅವರ ಹಿಂದೆ ಈ ಪೋಲಿ ಪಟಾಲಂ ಹರಟುತ್ತಾ ಹೊರಟಿತು. ಗಾಡಿ ಪೇಟೆಬೀದಿಯ ಕೊನೆ ಮುಟ್ಟಿ, ಇನ್ನೇನು ಎಡಕ್ಕೆ ತಿರುಗಬೇಕು ಎನ್ನುವಾಗ ಆನಂದಿ ಶೀಟಿ ಹಾಕಿದ. ನಿಶ್ಶಬ್ದವಾದ ಮಧ್ಯ ರಾತ್ರಿಯಲ್ಲಿ ಹಾಕಿದ ಆ ಶಿಳ್ಳು ಕರ್ಕಶವಾಗಿತ್ತು. ಅಷ್ಟಕ್ಕೆ ತೃಪ್ತಿಪಡದೆ ‘ಲೇ ಗಾಡೀ ! ’ ಎಂದು ಕಿರಿಚಿದ.

ಕಾಮನ ಚಪ್ಪರದ ಹತ್ತಿರ ನಿಂತಿದ್ದವರ ಪೈಕಿ ಯಾರೋ ಒಬ್ಬರು “ಪೋಲಿ ಮುಂಡೇವ ! ಸುಮ್ನೆ ಹೋಗೋಕಾಗೋಕಿಲ್ವಾ ? ” ಎಂದು ಆರ್ಭಟಿಸಿದರು.

* * * *

ನಾಗರಾಜ ಮನೆಗೆ ಬಂದಾಗ ಪಡಸಾಲೆಯ ಗಡಿಯಾರ ಮೂರು ಗಂಟೆ ಬಡಿಯಿತು. ಮುಂದಿನ ವೆರಾಂಡದಲ್ಲಿ ಮಲಗುತ್ತಿದ್ದ ಆಳು ಲಚ್ಮ ಬಾಗಿಲು ತೆರೆದು ಚಿಕ್ಕ ರಾಯರನ್ನು ಮೌನವಾಗಿ ಬರಮಾಡಿಕೊಂಡಿದ್ದ. ಪಡಸಾಲೆ

ಯಲ್ಲಿ ಮಂಕುದೀಪ ಉರಿಯುತ್ತಿತ್ತು. ತಂದೆಯವರು ಮಲಗಿದ್ದ ಕೋಣೆಯ ಬಾಗಿಲಿಗೆ ಹಾಕಿದ್ದ ತೆರೆ ಗಾಳಿಗೆ ಆಡುತ್ತಿತ್ತು. ಹಾಸಿಗೆಯ ಮೇಲೆ ಮಲಗಿದ್ದ ನಂಜಪ್ಪಶೆಟ್ಟರು, ಕಾಲಿನ ಸಪ್ಪಳದಲ್ಲಿಯೇ ಮಗ ಬಂದ ಸುಳಿವನ್ನು ತಿಳಿದು "ನಾಗಾ" ಎಂದು ರಾಗವಾಗಿ ಕೂಗಿದರು.

ಪದ್ಧತಿಯಂತೆ ಉತ್ತರ ಬರಲಿಲ್ಲ.

ನಂಜಪ್ಪಶೆಟ್ಟರೂ ಪದ್ಧತಿಯಂತೆ ಇನ್ನೊಮ್ಮೆ "ನಾಗಾ" ಎಂದು ಕೂಗಿದರು.

ನಾಗರಾಜ ಪಡಸಾಲೆಯಲ್ಲಿಯೇ ನಿಂತು "ಏನಪ್ಪಯ್ಯ?" ಎಂದು ಕೇಳಿದ.

"ಇಲ್ಲಿ ಬಾ" ಎಂದು ತಂದೆಯ ಅಪ್ಪಣೆಯಾಯಿತು.

ಮಗ ಕದಲದೆ ನಿಂತಿದ್ದ.

ಕೋಣೆಯಿಂದ "ಬಾ ಅಣ್ಣಯ್ಯಾ" ಎಂದು ಬಂದ ಕರುಳಿನ ಕೂಗು ಮಗನ ಕಾಲುಗಳನ್ನು ಕದಲಿಸಿತು.

ನಾಗರಾಜ ಕೋಣೆಯೊಳಕ್ಕೆ ಹೋಗಿ ನಿಂತ. ಮಂಚದ ಹತ್ತಿರದಲ್ಲಿ ಮೇಜಿನ ಮೇಲೆ ಪುಟ್ಟ ದೀಪ ಉರಿಯುತ್ತಿತ್ತು. ದೀಪಕ್ಕೆ ಹಾಕಿದ್ದ ಹಸುರು ಗಾಜು ಕೋಣೆಯನ್ನೆಲ್ಲ ಹಸುರು ಮಾಡಿತ್ತು. ಮಂಚದ ಮೇಲೆ ಅಂಗಾತ ಮಲಗಿದ್ದ ತಂದೆಯ ದೇಹದ ಮೇಲೆ ಆ ಬೆಳಕು ಚೆನ್ನಾಗಿ ಹರಡಿತ್ತು. ಸುಕ್ಕು ಹಿಡಿದ ಕಪ್ಪು ಚರ್ಮದ ಆ ಮುಖ, ಒಳಗೆ ಬಂದು ನಿಂತ ಮಗನ ಕಡೆ ನಿಧಾನವಾಗಿ ತಿರುಗಿತು. ಮುಖ ಬಾಡಿದ್ದರೂ, ದೀಪದ ಬೆಳಕಿನಲ್ಲಿ ಫಳ ಫಳನೆ ಬೆಳಗುತ್ತಿದ್ದ ಆ ಕಣ್ಣುಗಳು ನೋಡಿದ ತಕ್ಷಣವೆ ಮಗನ ಮುಖ ಕೆಳಗಿಳಿಯಿತು.

"ನಾಗಾ....ಇಷ್ಟೊತ್ತಿನ್ತನ್ಕ ಎಲ್ಹೋಗಿದ್ಯಪ್ಪಾ?....ನಾನೆಷ್ಟು ಸಲ ಹೇಳಲಿ ಹೇಳು."

"............"

"ಮನೇಲಿ ಯಾರಿದಾರೆ ಹೇಳು....ನೀನು ಇಷ್ಟು ಹೊತ್ತಿಗೆ ಮನೇಗೆ ಬಂದರೆ....ನೀನ್ಯಾಕೊ ತುಂಬ ಕೆಟ್ಹೋಗ್ಬಿಟ್ಯಪ್ಪ....ಮಧ್ಯಾಹ್ನ ಮನೇ ಬಿಟ್ಟು ಹೋದೋನು ಇಷ್ಟೊತ್ತಿಗೆ ಬರೋಣಾಂದ್ರೇನು....ಹೇಳೋರು ಕೇಳೋರು

ಯಾರೂ ಇಲ್ವೆ ನಿಂಗೆ? ಊಟ ತಿಂಡಿ ಇಲ್ದೆ ಹೀಗೆ ಪೋಲಿ ಪೋಲಿ ತಿರುಗ್ತೀಯಲ್ಲ! ಎಲ್ಹೋಗಿದ್ಯಪ್ಪಾ?"

"ಎಲ್ಲೂ ಇಲ್ಲ...."

"ಎಲ್ಲೂ ಇಲ್ಲ! ಮಧ್ಯಾಹ್ನ ನೋಡ್ದೋನ್ನ ಈಗ ನೋಡ್ತಾ ಇದ್ದೀನಿ. ಎಲ್ಲೂ ಇಲ್ಲ ಅಂತೀಯಲ್ಲ....ನಿನ್ನ ಆ ಸಹವಾಸ ಬಿಟ್ಟುಬಿಡು, ಒಳ್ಳೇದಲ್ಲ. ಆ ಪೋಲಿಗಳ ಸಹವಾಸ ಬ್ಯಾಡ....ದಿನಾ ಸಿನಿಮಾ, ನಾಟಕ, ಕಾಡ ಹರಟೆ...."

"ನಾನೇನ್ ಸಿನಿಮಾಕ್ಕೆ ಹೋಗಿರಲಿಲ್ಲ."

"ಮತ್ತೆಲ್ಲೀಗ್ ಹೋಗಿದ್ದೆ?"

"ಕಾಮನ ಚಪ್ಪರಕ್ಕೆ....ಸಂಗೀತ, ತಾಪೆ ಇತ್ತು. ನೋಡೋಣಾಂತ ಹೋಗಿದ್ದೆ."

"ಹುಡುಗರಿಗೆಲ್ಲ ತಾಪೆಗೀಪೆ ಯಾಕಪ್ಪಾ." ಮುಖವನ್ನು ಗೋಡೆಯ ಕಡೆ ತಿರುಗಿಸುತ್ತ "ಹ್ಞೂ ಹೋಗು. ಸಿದ್ದಣ್ಣನ್ನ ಕೂಗಿ ಉಂಡು ಮಲಕ್ಕೋಪ್ಪಾ....ನಾಳೆಯಿಂದ ರಾತ್ರಿ ಹೊತ್ತು ಎಲ್ಲೂ ಹೋಗ್ಬ್ಯಾಡ" ಎಂದು ತಂದೆ ಮೃದುವಾಗಿ, ರಾಗವಾಗಿ, ಮಮತೆ ತುಂಬಿ ನುಡಿದರು.

ಸಿದ್ದಣ್ಣ ಅರೆನಿದ್ದೆಯಲ್ಲಿ ಎದ್ದು ಚಿಕ್ಕರಾಯರಿಗೆ ಬಡಿಸಿದ. ನಾಗರಾಜ ಗಬಗಬ ತಿಂದು ಕೈ ತೊಳೆದುಕೊಂಡು ಮಹಡಿಯ ಮೇಲಿದ್ದ ತನ್ನ ಕೋಣೆಗೆ ಹೋದ. ಲಚ್ಮ ಮಂಚದ ಮೇಲೆ ಹಾಸಿಗೆ ಹಾಸಿ ಸಿದ್ಧ ಮಾಡಿದ್ದ ಮೂಲೆಯಲ್ಲಿ ನಿಂತಿದ್ದ ಪುಟ್ಟ ಮೇಜಿನ ಮೇಲೆ ಮಿಣುಕು ಹುಳುವಿನಂತೆ ಉರಿಯುತ್ತಿದ್ದ ದೀಪವನ್ನು ಆರಿಸಿ, ಕಗ್ಗತ್ತಲಲ್ಲಿ ನಾಗರಾಜ ಮಲಗಿಕೊಂಡ.

ಕತ್ತಲಲ್ಲಿ ಮಲಗಬೇಕೆಂದರೆ ಅವನಿಗೆ ಬಹಳ ಆಸೆ. ಬೆಳಗಿನಿಂದ ಅಲ್ಲಿ ಇಲ್ಲಿ ಓಡಾಡಿ ಹಬ್ಬದ ಆಟ ಆಡಿ ಆಯಾಸವಾಗಿದ್ದರೂ ಬೇಗ ನಿದ್ದೆ ಬರಲಿಲ್ಲ. ತಂದೆಯ ಹತ್ತಿರ ಮಾತಾಡುತ್ತಿದ್ದಾಗ, ಕೈ ತೊಳೆಯುತ್ತಿದ್ದಾಗ, ಹಾಸಿಗೆ ನೋಡಿದಾಗ ರತ್ನಳ ನೆನಪಾಗುತ್ತಿತ್ತು. ಅಂದು ಅವಳು ಹಾಡುತ್ತ ಕುಳಿತಿದ್ದ ಆ ನೋಟವನ್ನೇ ಮೆದುಳಿನಲ್ಲಿ ಮೆಲುಕು ಹಾಕುತ್ತ ಮಲಗಿಕೊಂಡ.

೮

'ಹೇಗಾದರೂ ಮಾಡಿ ರತ್ನಳ ಮನೆಗೆ ಹೋಗಬೇಕು, ಅವಳೊಡನೆ ಮಾತಾಡಬೇಕು, ಅವಳ ಸ್ನೇಹ ಮಾಡಬೇಕು' ಎಂಬ ಆಸೆಯನ್ನು ಹುಟ್ಟಿಸಿ, ನೂರು ವರ್ಷ ಬೆಳೆಸಿ, ದೊಡ್ಡದು ಮಾಡಿಕೊಂಡ ನಾಗರಾಜ ದಿನದಿನಕ್ಕೂ ಕೆಡುತ್ತಾ ಹೋದ. ಸಿನಿಮಾದಲ್ಲಿ, ಮಿಷನ್ ಸ್ಕೂಲಿನ ಮುಂದೆ, ಮಾದಪ್ಪ ನವರ ಅಂಗಡಿಯ ಎದುರು ಅವಳನ್ನು ಮೂರು ನಾಲ್ಕು ಬಾರಿ ನೋಡಿದ. ಅವಳ ಮನೆಯನ್ನು ಪತ್ತೆಮಾಡಿದ ಮೇಲಂತೂ ಆ ರಸ್ತೆಯಲ್ಲಿ ಅನೇಕ ದಿನ ಬೆಳಗ್ಗೆ, ಮಧ್ಯಾಹ್ನ, ಸಂಜೆ, ರಾತ್ರಿ ಎರಡು ಮೂರು ಬಾರಿ ತಿರುಗಾಡಿದ. ಆದರೆ ಅವಳೊಡನೆ ಮಾತಾಡುವ ಸುಯೋಗ ಅವನಿಗೆ ದೊರೆಯಲಿಲ್ಲ. ಕಾಮನ ಹಬ್ಬದಲ್ಲಿ ತಾಪೆ ಆದರೆ ಅವಳನ್ನು ನೋಡಬಹುದಲ್ಲಾ ಎಂದರೆ ಆ ಮುಂದಿನ ವರುಷಗಳಲ್ಲಿ ಲಕ್ಷಮ್ಮನ ತಾಪೆಯೇ ನಿಂತುಹೋಯಿತು.

ಪ್ರತಿ ವರುಷವೂ ಅದಕ್ಕೆ ಒಂದಲ್ಲ ಒಂದು ಕಾರಣಗಳಿದ್ದುವು. ಬಲವಾದ ಒಂದು ಕಾರಣ ಮಾತ್ರ ಎಲ್ಲರಿಗೂ ತಿಳಿದಿರಲಿಲ್ಲ.

ಮಾರನೆಯ ವರುಷ ಕಾಮನ ಹಬ್ಬಕ್ಕೆ ಸರಿಯಾಗಿ, ಮಾದಪ್ಪನವರ ತಂದೆ ಶಿವನಂಜಪ್ಪನವರು ಕಾಲವಾದರು. ಆ ವರುಷ ಕಾಮನ ತಾಪೆ ಅವ ರಿಂದ ನಿಂತಿತು. ಅದರ ಮುಂದಿನ ವರುಷ ಮಾದಪ್ಪನವರು ತೆಂಗಿನಮರ ದಿಂದ ಬಿದ್ದು ಗಾಯ ಮಾಡಿಕೊಂಡು ಆಸ್ಪತ್ರೆಯಲ್ಲಿ ಮಲಗಿದ್ದರು. ಮೂರ ನೆಯ ವರುಷ ಮಾದಪ್ಪನವರ ತಾಯಿಃ ಸತ್ತು ಇನ್ನೂ ಮೂರು ದಿನವಾಗಿರಲಿಲ್ಲ. ನಾಲ್ಕನೆಯ ವರುಷವಂತೂ ಲಕ್ಷಮ್ಮನ ಕಾಮ, ಪೇಟೆ ಬೀದಿಯ ಕಾಮಣ್ಣನ ಆಶ್ರಯದಾತ ಮಾದಪ್ಪನವರೇ ಹೃದಯ ರೋಗದಿಂದ ಕಣ್ಣುಮುಚ್ಚಿದ್ದರು. ಆತ ಹೋದ ಮೇಲೆ ಪೇಟೆ ಬೀದಿಯ ಕಾಮನ ಮುಖದ ಕಳೆಯೇ ಕಡಮೆ ಯಾಯಿತು; ಅವರು ಹೋದ ಸುದ್ದಿ ಕೇಳಿ ಲಕ್ಷಮ್ಮನಿಗೆ ದಿಕ್ಕೇ ತೋಚದಂ ತಾಯಿತು. ಅವಳ ಸಂಸಾರದ ಅರ್ಧ ಖರ್ಚು ಮಾದಪ್ಪನವರಿಂದ ಬರುತ್ತಿತ್ತು. ತನ್ನ ಸ್ವಂತ ಮನೆ ಪುರಾತನ ಕಾಲದ್ದಾದುದರಿಂದ ರತ್ನಳ ಸಲಹೆಯಂತೆ, ಆ ಮನೆಗೆ ನಾಲ್ಕನೆಯದಾಗಿ, ಹೊಸ ರೀತಿಯಲ್ಲಿ ಕಟ್ಟಿಸಿದ್ದ ಮಾದಪ್ಪನವರ ಮನೆಗೆ ಬಾಡಿಗೆಗೆಂದು ತಾನು ಹೋಗಿ ಕೇವಲ ಆರು ತಿಂಗಳಾಗಿತ್ತು. ಮಾದಪ್ಪ

ನವರು ಜೀವಿಸಿರುವ ವರೆಗೂ ಆಕೆ ಬಾಡಿಗೆಯನ್ನು ಹಣದ ರೂಪದಲ್ಲಿ ಕೊಟ್ಟರ ಲಿಲ್ಲ. ಅವರು ತಿಂಗಳಿಗೊಮ್ಮೆ ಮೂವತ್ತು ರೂಪಾಯಿಗೆ ರಸೀದಿಯೊಂದನ್ನು ಕೊಟ್ಟು, ಮೇಲೆ ಖರ್ಚಿಗೆ ಐವತ್ತು ರೂಪಾಯಿ ಕೊಡುತ್ತಿದ್ದರು. ಆದರೆ ಆತ ಕಾಲವಾದನಂತರ ಈ ಪದ್ಧತಿ ನಿಂತುಹೋಯಿತು. ಸಾಲದ್ದಕ್ಕೆ ಪ್ರತಿ ತಿಂಗಳು ಎರಡನೆಯ ತಾರೀಕೆ ಮಹೇಶ್ವರಪ್ಪನ ಜವಾನ ಬಸಪ್ಪ ಕೋಲು ಊರಿಕೊಂಡು ಬಾಡಿಗೆ ವಸೂಲಿಗೆ ಬರುತ್ತಿದ್ದ.

'ಮಾದಪ್ಪ ಹೋದ, ಲಕ್ಷ್ಮಮ್ಮನ ತಾಪೆ ಮುಗಿಯಿತು' ಎಂದು ಬೀದಿಯ ಅನೇಕ ಮಹನೀಯರು ಆಡಿಕೊಳ್ಳುತ್ತಿದ್ದರು. ಕಾಮನ ಹಬ್ಬದಲ್ಲಿ ಅವಳು ಕುಣಿತ ನಿಲ್ಲಿಸಲು ಅದೂ ಒಂದು ಕಾರಣ, ನಿಜ. ಆದರೆ ಅದಕ್ಕಿಂತಲೂ ಮುಖ್ಯವಾದುದು ಅವಳ ಮಕ್ಕಳು ಆ ರೀತಿಯ ಕುಣಿತಕ್ಕೆ ಪ್ರತಿಭಟಿಸಿದುದು.

ಕಮಲ 'ಈ ಸೂಳೆಯ ಆಟ ನನಗೆ ಬೇಡ,' ಎಂದು ಹೇಳಿಬಿಟ್ಟಳು. ರತ್ನ 'ಅಮ್ಮಾ, ನಿಂಗೊತ್ತಿಲ್ಲ........ಈ ತರಹ ಬೀದಿಗೆ ಹೋದರೆ ಬೆಲೆ ಇಳಿ ದ್ಹೋಗುತ್ತೆ....ಎಲ್ಲ ನನಗೆ ಬಿಡು....ಈಗ ನೋಡು ಏನ್ಮಾಡ್ತೀನೀಂತ' ಎಂದು ಪ್ರತಿಷ್ಠೆ ತೋರಿಸಿಬಿಟ್ಟಳು.

ಈ ಎರಡು ಕಾರಣಗಳಿಂದ ಲಕ್ಷ್ಮಮ್ಮನಿಗಿಂತ ನಾಗರಾಜನಿಗೆ ತುಂಬ ಅನನುಕೂಲವಾಯಿತು.

ಒಮ್ಮೆ ರತ್ನಳಿಗಾಗಿ ಗಲ್ಲದಿಂದೆ ಅಷ್ಟು ಇಷ್ಟು ಹೊಡೆದು ಕೂಡಿ ಹಾಕಿದ್ದ ಐವತ್ತು ರೂಪಾಯಿಯನ್ನು ಆನಂದಿಯ ಪ್ರೇರಣೆಯಿಂದ, ನಂಜುಂಡಪ್ಪನ ಛತ್ರ ದಲ್ಲಿಳಿದಿದ್ದ ಮಲಬಾರಿ ಹುಡುಗಿಗೆ ತೆತ್ತು, ರಾತ್ರಿ ಅವಳೊಂದಿಗೆ ಸಿನಿಮಾ ನೋಡಿ, ಛತ್ರದಲ್ಲೇ ಬಿದ್ದಿದ್ದು ಬೆಳಿಗ್ಗೆ ಬರಿಗೈಯಲ್ಲಿ ಮನೆಗೆ ವಾಪಸುಬಂದಿದ್ದ.

ಮತ್ತೊಮ್ಮೆ, ನಾರಾಯಣರಾಯರನ್ನು ಗೋಗರೆದು ಇಪ್ಪತ್ತುರೂಪಾಯಿ ಪಡೆದು, ರತ್ನಳ ಮನೆಯ ಕಡೆ ಹೊರಟ. ದಾರಿಯಲ್ಲಿ ಸೋಮಶೇಖರ ಆನಂದಿ ಸಿಕ್ಕಿಬಿಟ್ಟರು. ಬೆಂಗಳೂರಿನಲ್ಲಿ 'ಕಿಂಗ್ ಕಾಗ್' ಸಿನಿಮಾ ನಡೀತಾ ಇದೆಯಂತೆ. ಈಗ ಹೊರಟರೆ ಬೆಳಗಿನ ಜಾವದ ಬಸ್ಸಿನಲ್ಲಿ ವಾಪಸು ಬಂದು ಬಿಡಬಹುದು, ಎಂದು ಪ್ರೇರೇಪಿಸಿ ಅವರು ಅವನನ್ನು ಬೆಂಗಳೂರಿನ ಬಸ್ಸು ಹತ್ತಿಸಿಬಿಟ್ಟಿದ್ದರು. ಸಿನಿಮಾ, ಸಿಗರೇಟು, ಬೀಡ—ಇಪ್ಪತ್ತು ರೂಪಾಯಿಗಳೂ ದಿಕ್ಕಾಪಾಲಾದುವು.

ಇನ್ನೊನ್ಮೆ, ಗೂಡಿನಲ್ಲಿ ಸಿದ್ದಣ್ಣ ಮರೆತು ಇಟ್ಟುಬಿಟ್ಟಿದ್ದ ಬೆಳ್ಳಿಯ ತಟ್ಟೆ ಕದ್ದು ಆನಂದಿಯ ಮೂಲಕ ಮಾರಿಸಿ ಬಂದ ಅರುವತ್ತು ರೂಪಾಯಿಯಲ್ಲಿ ನಲವತ್ತು ರೂಪಾಯಿಯನ್ನು ರತ್ನಳ ಮನೆಗಾಗಿ ಇಟ್ಟುಕೊಂಡಿದ್ದ. ಆದರೆ ಅದಕ್ಕೂ ಬೇರೆ ದಾರಿಯಾಯಿತು. ಸೋಮಶೇಖರ ಹೋಗಿ ಬರುತ್ತಿದ್ದ ನಂಜಾಸಾನಿಯ ಮನೆಯಲ್ಲಿ ಸತ್ಯನಾರಾಯಣ ಪೂಜೆ ಮತ್ತು ಹೊಸದಾಗಿ ಅವಳ ಮನೆಗೆ ಬಂದಿದ್ದ ರಾಮುಕ್ಕನ ಗೆಜ್ಜೆಪ್ರಸ್ತ ಗೊತ್ತಾಗಿತ್ತು....ಸೋಮಶೇಖರನ ಬಲವಂತದಿಂದ ನಾಗರಾಜ ಆ ನಲವತ್ತು ರೂಪಾಯಿ ತೆಗೆದುಕೊಂಡು ಅಲ್ಲಿಗೆ ಹೋಗಿ ರಾತ್ರಿಯೆಲ್ಲ ಕಳೆದುಬಂದ.

ದುಡ್ಡಿನ ಬಲದಿಂದ ನಾಗರಾಜ ಸುಖವನ್ನೇನೋ ಪಡುತ್ತಿದ್ದ. ಆದರೆ ತಾನೊಂದು ಬಯಸಿದರೆ ಬೇರೊಂದು ಸಿಕ್ಕುತ್ತಿತ್ತು. ಒಟ್ಟು ಹದಿನೆಂಟು ಬಾರಿ ದುಡ್ಡು ಕೂಡಿ ಹಾಕಿ ರತ್ನಳಿಗಾಗಿ ಹಾತೊರೆದ. ಹದಿನೆಂಟು ಬಾರಿಯೂ ಒಂದಲ್ಲ ಒಂದು ರೀತಿ ದುಡ್ಡನ್ನೂ ದೇಹವನ್ನೂ ಹಾಳುಮಾಡಿಕೊಂಡು ವಾಪಸು ಬಂದುಬಿಟ್ಟ.

ಅವನದು ವಿಚಿತ್ರ ಮನಸ್ಸು. ಗಟ್ಟಿ ಮನಸ್ಸಾಗಿದ್ದರೆ ಹಾಗೆ ಆಗುತ್ತಿರಲಿಲ್ಲವೊ ಏನೊ! ಆ ಮನಸ್ಸಿನ ಬಲ ತಿಳಿದು ಅವನ ವಯಸ್ಸೂ ಅವನನ್ನು ಆಟ ಆಡಿಸುತ್ತಿತ್ತು. ಒಳಗಿನ ಆಸೆಗಿಂತ ಹೊರಗಿನ ಪ್ರೇರಣೆಗೆ ಬೇಗ ಬಲಿಯಾಗುತ್ತಿದ್ದ ನಾಗರಾಜ ಖಚಿತವಾದ ಸ್ವಂತ ಅಭಿಪ್ರಾಯವನ್ನು ಎಂದೂ ಯಾವುದಕ್ಕೂ ಕೊಟ್ಟಿರಲಿಲ್ಲ. ಹೃದಯಲ್ಲಿ ಒಂದು ಆಸೆ ಅಂಕುರಿಸಿದಾಗ, ಆನಂದಿ ಬೇರೊಂದು ರುಚಿಯ ಕನಸು ಕಟ್ಟಿದರೆ ನಾಗರಾಜನ ನಾಲಗೆ ಅ ಕಡೆ ಚಾಚುತ್ತಿತ್ತು. ಈ ದುರ್ಬಲತೆಯಿಂದ ನಾಗರಾಜ ನಿಶ್ಚಲತೆಯಿಲ್ಲದ ತಿರುಗಲ ತಿಪ್ಪಿಯಂತೆ ಅಲ್ಲಿ ಇಲ್ಲಿ ಹಾರಾಡುತ್ತ ಹದಗೆಡುತ್ತಿದ್ದ.

ಒಂದು ರಾತ್ರಿ, ಸೋಮಶೇಖರ ದೀಪ ಇಲ್ಲದೆ ಸೇಟಿ ಬೀದಿಯಲ್ಲಿ ಸೈಕಲ್ ಬಿಟ್ಟುಕೊಂಡು ಬರುತ್ತಿದ್ದ. 'ಮಾದಪ್ಪ ಅಂಡ್ ಸನ್' ಸ್ಟೇಷನರಿ ಅಂಗಡಿಯಿಂದ ಹೊರಬಿದ್ದ ಕರಿಯಪ್ಪನ ಕೈಗೆ ಸಿಕ್ಕಿಬಿಟ್ಟ! ಸೋಮಶೇಖರ ಮೊದಲು ಜೋರುಮಾಡಿದ. ಸಂಜೆ ಕಳೆದು ಕತ್ತಲು ಕವಿದಿದ್ದರೂ ಗಡಿಯಾರದಲ್ಲಿ ಏಳೇ ಗಂಟೆ ಆಗಿದ್ದುದರಿಂದ "ಇನ್ನೂ ಏಳೇ ಗಂಟೆ, ನಾನು ಮಾರಮ್ಮನ ಚೌಕದವರೆಗೆ ಮಾತ್ರ ಹೋಗುತ್ತಿದ್ದೆ" ಎಂದು ವಾದಿಸಿದ.

ಸೈಕಲ್ಲಿನ ಹ್ಯಾಂಡ್ಲ್ ಹಿಡಿದೆಳೆಯುತ್ತಿದ್ದ ಕರಿಯಪ್ಪನಿಗೆ ತುಂಬ ಕೋಪ ಬಂತು ; "ಅಲ್ಲೇನ್ ನಿನ್ನ ಮಾರಮ್ಮ ಕುಂತಿರ್ತಾಳೆ ಕಾದ್ಕೊಂಡು !" ಎಂದು ಕಿರಿಚಿದ.

ಯಾವ ಕೇಸಿನಲ್ಲೇ ಆಗಲಿ, ಅಪರಾಧಿ ತನ್ನ ಕೈಗೆ ಸಿಕ್ಕಿದ ಮೇಲೆ ನಾಯಿ ಮರಿಯಂತಿರಬೇಕು, ಎಂಬುದು ಅವನ ಅಭಿಪ್ರಾಯ. ಅವನು ಮಾತಾಡಿದರೆ ಸಾಕು, ಇವನ ಕೆಂಪುಗಣ್ಣುಗಳು ಕೆಂಡವಾಗುತ್ತಿದ್ದುವು. ತುಟಿಯ ಮೇಲಿದ್ದ ಆ ಒರಟು ಮೀಸೆ ನಿಮಿರಿ ನಿಲ್ಲುತ್ತಿತ್ತು. ಉದ್ದವಾಗಿದ್ದರೂ ವಕ್ರವಾಗಿದ್ದ ಆ ಕರಿಯ ಮೂಗು ಸೆಟೆದು ಗಂಟಿಕ್ಕಿಕೊಳ್ಳುತ್ತಿತ್ತು. ಬಾಯಿ, 'ಬಾಯಿ ಮುಚ್ಕೊಂಡು ಬಾರೊ ಸೂವರ್ !' ಎಂದು ಗರ್ಜಿಸುತ್ತಿತ್ತು.

ಸೋಮಶೇಖರನೂ ಸಾಮಾನ್ಯನಲ್ಲ. ನಾಗರಾಜನ ಪಟಾಲಂನಲ್ಲಿ ಅವನೇ ಗಟ್ಟಿಗ. ಅವನ ಪಟಾಲಂಗೆ ಹೆದರುತ್ತಿದ್ದವರೆಲ್ಲ ಸೋಮಶೇಖರನಿಗಾಗಿಯೇ ಹೆದರುತ್ತಿದ್ದುದು.

"ಬಿಡಯ್ಯ ಸೈಕಲ್ಲು" ಎಂದು ಬಲಗೈ ಕೊಡವಿದ. ಸಂಜೆ ಬಾಚಿದ್ದರೂ, ಈ ಜಗಳದಲ್ಲಿ ಕೆದರಿದ ನೀಳವಾದ ಕ್ರಾಪುಕೂದಲು ಹಣೆಯ ಮೇಲೆ ಜೋತು ಬಿದ್ದಿತ್ತು. ಕೊರಳಿಗೆ ಗಂಟುಹಾಕಿದ ಮಫ್ಲರ್ ಸಡಿಲವಾಗಿತ್ತು.

'ಬಿಡಯ್ಯ' ಎಂದ ಕೂಡಲೆ ಮೈಯೆಲ್ಲ ಕೆಂಡವಾದ ಕರಿಯಪ್ಪ "ನಿಮ್ಮನೆ ಆಳೇನೊ ಸೂವರ್, ನಡಿಯೊ ಟೇಷನ್‌ಗೆ—ಹಾಕ್ತೀನ್ ನೋಡು ಬಾಯ್ಬಿಟ್ರೆ" ಎಂದು ಕಿರಿಚಿ, ಮಫ್ಲರ್ ಹಿಡಿದು ಎಳೆದ.

ಜನ ಸುತ್ತುಗಟ್ಟಿಕೊಂಡಿತು.

ಅಂಗಡಿಯಲ್ಲಿದ್ದ ಮಹೇಶ್ವರ ಕುರ್ಚಿ ಬಿಟ್ಟು, ಮೆಟ್ಟಿಲ ಮೇಲೆ ನಿಂತು ನೋಡತೊಡಗಿದ.

ರತ್ನಳ ದರ್ಶನಕ್ಕಾಗಿ ಹಾತೊರೆದು ಜೇಬಿನಲ್ಲಿ ಹತ್ತು ರೂಪಾಯಿಯ ನೋಟು ಹಾಕಿಕೊಂಡು, ಮಾರಮ್ಮನ ಚೌಕದ ಹತ್ತಿರ ಟಲಾಯಿಸುತ್ತಿದ್ದ ನಾಗರಾಜ ನಿರಾಸೆಗೊಂಡು ಪೇಟೆಯ ಬೀದಿಯ ಕಡೆ ತಿರುಗಿದ್ದ. ದೂರದಲ್ಲಿ ಬೀದಿಯ ದೀಪದ ಕೆಳಗೆ ಗುಂಪು ಕಾಣಿಸಿತು. ಏನೋ ಮಜ ನೋಡೋಣ, ಎಂದು ಬೇಗಬೇಗ ಬಂದ. ಗುಂಪಿನಲ್ಲಿ ಹಸುರು ಮಫ್ಲರ್, ಕೆಂಪು ಅಂಗಿ ನೋಡಿದ. ಎಲ್ಲರಿಗಿಂತ ಎತ್ತರದಲ್ಲಿ ನಾನಿದ್ದೇನೆ, ಎಂದು ಪೋಲೀಸ್‌ಪೇಟ ಆ

ಗುಂಪಿನ ಮಧ್ಯೆ ಶಿಖರದಂತೆ ಕಾಣುತ್ತಿತ್ತು. ಬೀದಿಯ ದೀಪದ ಬೆಳಕು ಈ ಗುಂಪಿನ ಮೇಲೆ ಚೆನ್ನಾಗಿ ಬೆಳಗಿತ್ತು.

ಪಾಪ, ಸೋಮಶೇಖರ ಪೋಲೀಸ್ ಕೈಗೆ ಸಿಕ್ಕಿ ಬಿದ್ದಿದ್ದಾನೆ, ಬಚಾವು ಮಾಡೋಣ ಎಂದುಕೊಂಡು ನಾಗರಾಜ ಗುಂಪಿನೊಳಗೆ ನುಗ್ಗಿದ. ಅವನಿಗೆ ಕರಿಯಪ್ಪನ ಪರಿಚಯ ಚೆನ್ನಾಗಿ ಇಲ್ಲದಿದ್ದರೂ ಆಗಾಗ ತಮ್ಮ ಮಂಡಿಯ ನಾರಾಯಣರಾಯರ ಹತ್ತಿರ ಬರುತ್ತಿದ್ದ ಅವನ ಹೆಸರು ಗೊತ್ತಿತ್ತು; ಲಕ್ಷಮ್ಮನ ಗಿರಾಕಿ ಎಂಬುದೂ ಊರಿಗೆಲ್ಲ ತಿಳಿದಂತೆ ಇವನಿಗೂ ತಿಳಿದಿತ್ತು.

"ಕರಿಯಪ್ಪನೋರೆ, ಹೋಗ್ಲಿ ಬಿಟ್ಬಿಡಿ ಇದೊಂದ್ಸಲ" ಎಂದು ಕೇಳಿಕೊಂಡ.

"ಏನ್ರಿ ಬಿಡೋದು, ಟೇಷನ್ನಿಗೆ ಎಳಕೊಂಡು ಹೋಗಿ ಅಲ್ಲಿ ಬಿಡ್ತೀನಿ."

"ಬ್ಯಾಡ, ಇದೊಂದ್ಸಲ ಮಾಫ್‌ಮಾಡ್ಬಿಡಿ........ಬೇಕಾದರೆ ನಾನು ಜಾಮೀನು ಕೊಡ್ತೀನಿ" ಎಂದು ನಾಗರಾಜ ಗೋಗರೆದ.

ಗುಂಪು ಹೆಚ್ಚಾಗುತ್ತಿತ್ತು. ಊರಿನ ಹೆಸರುವಾಸಿ ಸಾಹುಕಾರರ ಮಗ ಮತ್ತು ಪ್ರಸಿದ್ಧ ಪೋಲಿ ಪಟಾಲಂನ ಕೋಶಾಧಿಕಾರಿ ಇವನೇ ಎಂಬುದನ್ನು ಚೆನ್ನಾಗಿ ತಿಳಿದಿದ್ದ ಕರಿಯಪ್ಪ ಗುಂಪಿನ ಕಡೆ ತಿರುಗಿ "ಹೋಗ್ರಯ್ಯ, ನಿಮ್ಗೆಲ್ಲ ಏನ್ ಕೆಲ್ಸ!" ಎಂದು ಕೂಗಿದ. ಗುಂಪಿನಲ್ಲಿ ತೂರಿ ಮುಂದೆ ಬಂದಿದ್ದ ಹುಡುಗರು ಹೆದರಿ ಗುಂಪನ್ನೊಡೆದುಕೊಂಡು ಓಡಿದರು.

"ಹಾಗಾದರೆ ನಡೀರಿ ಇಬ್ಬರೂ ಟೇಷನ್ನಿಗೆ" ಎಂದು ಕರಿಯಪ್ಪ ಆರ್ಡರ್ ಮಾಡಿದ.

ಮಾರಮ್ಮನ ಚೌಕಕ್ಕೆ ದಕ್ಷಿಣದ ರಸ್ತೆಯಲ್ಲಿ ಅರ್ಧ ಫರ್ಲಾಂಗ್ ನಡೆದರೆ ಪೋಲಿಸ್ ಸ್ಟೇಷನ್ ಸಿಕ್ಕುತ್ತದೆ. ಕರಿಯಪ್ಪ ಸೈಕಲ್ ಹಿಡಿದುಕೊಂಡು ಆರ್ಡರ್ ಮಾಡಿದಾಗ ಅವನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದ ಸೋಮಶೇಖರ ನಾಗರಾಜನ ಮುಖ ನೋಡಿದ. ನಾಗರಾಜ ಏಕೊ ಕಣ್ಣು ಹೊಡೆದ. ಸೋಮಶೇಖರನಿಗೆ ಅರ್ಥವಾಗಲಿಲ್ಲ. ಏನೋ ಸಮಾಚಾರ ಇದೆ, ಎಂದುಕೊಂಡು ಕಾಲುಕಿತ್ತ.

ಮಧ್ಯೆ, ಕತ್ತಲಲ್ಲಿ ಸೈಕಲ್ ಬಿಟ್ಟ ತಪ್ಪಿತಸ್ಥ, ಅವನ ಬಲಪಕ್ಕದಲ್ಲಿ ಸೈಕಲ್ ಸೀಟು ಹಿಡಿದು ಎದೆ ಮುಂದುಮಾಡಿಕೊಂಡು ಹೊರಟ ಕರಿಯಪ್ಪ,

ಇನ್ನೊಂದು ಪಕ್ಕದಲ್ಲಿ ಇವರಿಬ್ಬರಿಗೂ ಸಮಾಧಾನ ಮಾಡಲು ಹೊರಟ ದುಡ್ಡಿನ ಗೆಳೆಯ ನಾಗರಾಜ ಮಾರಮ್ಮನ ಚೌಕದ ಕಡೆಗೆ ನಡೆದರು. ಗುಂಪಿನಲ್ಲಿದ್ದ, ಬೇರೆ ಕಸಬಿಲ್ಲದ ಐದಾರು ಜನ ಅವರನ್ನು ಹಿಂಬಾಲಿಸಿದರು. ಕರಿಯಪ್ಪ ಹಿಂದಿರುಗಿ ನೋಡಿ, " ಹೋಗ್ರೋ, ನಿಮಗೇನ್ರೋ ಕೆಲ್ಸ! " ಎಂದು ಗದರಿಸಿದ. ಹಿಂದೆ ಒಂದುಗೂಡಿ ಬಂದ ಆ ಪುಟ್ಟ ಗುಂಪು ಚೆದರಿಹೋಯಿತು.

ಮಾರಮ್ಮನ ಚೌಕದವರೆಗೂ ಮೂವರೂ ಮೌನವಾಗಿ ನಡೆದರು. ಕರಿಯಪ್ಪ ಕಸಬಿನ ಮಾಮೂಲಿನಂತೆ ಏನಾದರೂ ಸಿಕ್ಕೀತೆಂದೂ, ಚೌಕದ ಹತ್ತಿರ ಕೇಸು ಖುಲಾಸೆ ಮಾಡಿ ಲಕ್ಷ್ಮಮ್ಮನ ಮನೆಗೆ ಹೋಗಬೇಕೆಂದೂ ಯೋಚಿಸುತ್ತಿದ್ದ. ಹತ್ತು ರೂಪಾಯಿಯ ಒಂದು ನೋಟನ್ನು ಜೇಬಿನಲ್ಲಿಟ್ಟುಕೊಂಡಿದ್ದ ನಾಗರಾಜ ' ಇವನಿಗೆ ಎಷ್ಟು ಕೊಡುವುದು ? ಹೇಗೆ ಕೊಡುವುದು ? " ಎಂದು ಎಣಿಕೆ ಹಾಕುತ್ತಿದ್ದ. ತಡೆಯದಷ್ಟು ಕೋಪ ಬಂದಿದ್ದರೂ ಇಬ್ಬರ ನಡುವೆ ಸಿಕ್ಕಿಹಾಕಿಕೊಂಡು ಸೋಮಶೇಖರ ಹೆಜ್ಜೆ ಹಾಕುತ್ತಿದ್ದ.

ಕೊನೆಗೆ ನಾಗರಾಜನೇ ಮೌನವನ್ನೊಡೆದು " ಕರಿಯಪ್ಪನೋರೆ, ತಾವು ಒಂದು ನಿಮಿಷ ಈ ಚೌಕದಲ್ಲಿ ನಿಂತಿದ್ರೆ, ಬಸ್ ಸ್ಟ್ಯಾಂಡಿನಲ್ಲಿ ಚಿಲ್ಲರೆ ತೊಗೊಂಡು ಬಂದ್ಬಿಡ್ತೀನಿ " ಎಂದ.

" ಎಷ್ಟಕ್ಕೆ ಚಿಲ್ಲರೆ ? " ಎಂದ ಕರಿಯಪ್ಪ—ತಾನೇ ಕೊಡಬಹುದೊ ಏನೊ ಎಂದು.

" ಹತ್ತು ರೂಪಾಯಿಗೆ."

" ಓ, ಹ್ಞ.... ಹೋಗು, ಆ ಬೀಡೀ ಅಂಗಡೀಲಿ ಕೇಳು....ಇಲ್ದೇ ಇದ್ರೆ ಸೀನಪ್ಪನ ಹೋಟಲಲ್ಲಿ. ನಾವಿಲ್ಲೇ ಇರ್ತೀವಿ—ಈ ಬೇವಿನಮರದ ಕೆಳಗೆ" ಎನ್ನುತ್ತ ಕರಿಯಪ್ಪ ಸೋಮಶೇಖರನೊಡನೆ ಮಾರಮ್ಮನ ಗುಡಿಯ ಹತ್ತಿರದಲ್ಲಿದ್ದ ಬೇವಿನಮರದ ಕಡೆಗೆ ಹೊರಟ. ಗಿಡದಡಿಯಲ್ಲಿ ಆಗಲೆ ತುಂಬ ಕತ್ತಲು ಕವಿದಿದ್ದರೂ ಚೌಕದ ದೀಪದ ನಸುಬೆಳಕು ಅದನ್ನು ಕಡಿಮೆ ಮಾಡಿತ್ತು. ಅಲ್ಲಿಯೆ ಇದ್ದ ಕಲ್ಲು ಬೆಂಚಿನ ಮೇಲೆ ಕರಿಯಪ್ಪ ಹೋಗಿ ಕುಳಿತ.

ಸೋಮಶೇಖರ ಗುಡಿಯ ಹತ್ತಿರದಲ್ಲಿಯೆ, ಸೈಕಲ್ ಕ್ಯಾರಿಯರ್‌ಗೆ ಆತುಕೊಂಡು ನಿಂತುಕೊಂಡ. ಕರಿಯಪ್ಪ " ಬಾ ಅಯ್ಯ ಇಲ್ಲೇ " ಎಂದ. ಸೋಮಶೇಖರ ಮಾತಾಡಲಿಲ್ಲ. ಸುಮ್ಮನೆ ಅಲ್ಲಿಯೇ ನಿಂತಿದ್ದ. ಅವನ ಕೋಪ

ಇನ್ನೂ ಇಳಿದಿರಲಿಲ್ಲ. ಹತ್ತು ರೂಪಾಯಿಯ ಹೆಸರು ಕೇಳಿದ ಕೂಡಲೆ ಕರಿಯಪ್ಪನ ಕೋಪ ಮಾಯವಾಗಿತ್ತು. ಜೇಬಿನಿಂದ ಬೀಡಿ ತೆಗೆದು ಬಾಯಿಗೆ ಕಚ್ಚಿಕೊಂಡಾಗ, ಕಡ್ಡಿಪೆಟ್ಟಿಗೆಗಾಗಿ ಎಡಜೇಬನ್ನೆಲ್ಲ ತಡಕಾಡಿದ ಎಡಗೈ ನಿರಾಸೆಗೊಂಡು ಹೊರಗೆ ಬಂತು.

"ಕಡ್ಡಿ ಐತಾ?"—ಸೋಮಶೇಖರನನ್ನೇ ಕೇಳಿದ.

ಸೋಮಶೇಖರ ಸುಮ್ಮನಿದ್ದ.

"ಇಲ್ವಾ?"

"ಇಲ್ಲ....ಹ್ಞೂ ಇದೆ" ಎಂದು ಅರೆಮನಸ್ಸಿನಿಂದ ಸೋಮಶೇಖರ ಜೇಬಿನಲ್ಲಿದ್ದ ಕಡ್ಡಿಪೆಟ್ಟಿಗೆಯನ್ನು ಹೊರಗೆ ತೆಗೆದ.

ಬಾಯಿಯಲ್ಲಿದ್ದ ಬೀಡಿಯನ್ನು ತೆಗೆದು ಎರಡು ಬೆರಳಿನ ಮಧ್ಯೆ ಅದನ್ನು ಹೊರಳಾಡಿಸುತ್ತ "ಬಾ ಅಯ್ಯ ಇಲ್ಲೇ....ದಫೇದಾರ್ ಕಣ್ಣಿಗೆ ಬಿದ್ದುಬಿಟ್ರೆ ಟೇಷನ್ನಿಗೆ ಹೋಗಲೇಬೇಕಾಗುತ್ತೆ" ಎಂದ.

'ಈ ಸುಡುಗಾಡು ನಾಗರಾಜ ಸಿಕ್ಕದಿದ್ದರೆ ಇವನಿಗೆ ಸರಿಯಾಗಿ ಮಾಡುತ್ತಿದ್ದೆ' ಎಂದುಕೊಳ್ಳುತ್ತಿದ್ದ ಸೋಮಶೇಖರನ ಮನಸ್ಸು ಬೋನಿನಲ್ಲಿ ಸಿಕ್ಕಿದ ಹುಲಿಯಂತೆ ಅಲೆದಾಡುತ್ತಿತ್ತು. ನಾಗರಾಜ ಇವನಷ್ಟು ಬುದ್ಧಿವಂತ ಅಲ್ಲ. ತಾನು ಆಗಿದ್ದರೆ, ಚಿಲ್ಲರೆ ತರುತ್ತೇನೆ ಎಂದು ಹೇಳಿ ಪರಾರಿ ಆಗುತ್ತಿದ್ದೆ. ಒಂದೆರಡು ಕಡ್ಡಿ ಇರುವ ಕಡ್ಡಿಪೆಟ್ಟಿಗೆ ದಾನಮಾಡಿ ಕಾನ್‌ಸ್ಟೇಬಲ್‌ಗೆ ಬೀಡಿಯ ಸೇವಾರ್ಥ ನಡಸಿ, ಮಿಂಚಿನಂತೆ ಸೈಕಲ್ ಹತ್ತಿ ಗಲ್ಲಿಬಿದ್ದುಹೋಗಿಬಿಡುತ್ತಿದ್ದೆ. ಆದರೆ ಆ ಹಾಳು ನಾಗರಾಜನಿಗೆ ಇಷ್ಟು ಬುದ್ಧಿ ಇಲ್ಲ. ಅದು ಚಿಲ್ಲರೆ ಸಮೇತ ಬಂದೇಬಿಡುತ್ತದೆ. ತಾನು ಪರಾರಿ ಆದರೆ, ತನಗೆ ಉಪಕಾರ ಮಾಡಲು ಬಂದ ಆ ಬಡಪಾಯಿ ಈ ಕೆಂಡದ ಕದೀಮನ ಕೈಗೆ ಸಿಕ್ಕಿ ನರಳಬೇಕಾಗುತ್ತದೆ. ಆದ್ದರಿಂದ ಯೋಚಿಸಿ ಯೋಚಿಸಿ ಸೋಮಶೇಖರ ತೆಪ್ಪಗೆ ನಿಂತಿದ್ದ. ತನ್ನ ಪ್ಲಾನುಗಳೊಂದನ್ನೂ ಕಾರ್ಯರೂಪಕ್ಕೆ ತರುವಂತಿರಲಿಲ್ಲ. ಎಲ್ಲ ನಾಗರಾಜನಿಗೇ ಬಿಟ್ಟು ಅವನ ಬರುವನ್ನೇ ಕಾಯುತ್ತಿದ್ದ.

ಎರಡು ಮೂರು ಬಾರಿ ಹೊಗೆ ಎಳೆದ ಕರಿಯಪ್ಪ "ಎಲ್ಲಿ ಆಸಾಮಿ ಬರಲೇ ಇಲ್ಲ!....ಇವರಪ್ಪನ್ಗೆ ಹೇಗೈತೋ?" ಎಂದ.

ಆ ಪ್ರಶ್ನೆ ಸೋಮಶೇಖರನಿಗಾಗಿ ಬಂತು.

ಆದರೆ ಸೋಮಶೇಖರ ಉತ್ತರ ಕೊಡಲಿಲ್ಲ. ಅರ್ಧಗಂಟೆಗೆ ಮುಂಚೆ, ತಾನು ಸೈಕಲ್ ಹತ್ತಿ ಬರುತ್ತಿದ್ದುದು, ಮಾದಪ್ಪನವರ ಅಂಗಡಿಯ ಮುಂದೆ ಕರಿಯಪ್ಪ ಅವನನ್ನು ಹಿಡಿದು ನಿಲ್ಲಿಸಿದುದು, ಅವನಿಗೂ ಇವನಿಗೂ ಬಿಸಿಬಿಸಿ ಮಾತಾದುದು, ಜನ ಗಿರಾಯಿಸಿಕೊಂಡುದು, ನಾಗರಾಜ ಬಂದು ಸಮಾಧಾನ ಮಾಡಿದುದು, ಒಂದೂ ಇನ್ನೂ ಅವನ ಮನಸ್ಸಿನಿಂದ ಅಳಿಸಿಹೋಗಿರಲಿಲ್ಲ. ಅವನು ಇನ್ನೂ ಅದೇ ಸನ್ನಿವೇಶದಲ್ಲಿದ್ದ. ಆದರೆ ಕರಿಯಪ್ಪನಿಗೆ ಇದೆಲ್ಲ ಸಾಮಾನ್ಯ. ದುಡ್ಡಿನ ಮುಖ ನೋಡಿದ ಮೇಲಂತೂ ಮೋಡಿ ಹಾಕಿದಂತೆ ಅವನು ಬದಲಾಯಿಸಿಬಿಡುತ್ತಿದ್ದ. ಇದು ಅವನ ಸ್ವಭಾವವಾದರೂ ಕಸಬಿಗೂ ತಕ್ಕ ಗುಣವಾಗಿಬಿಟ್ಟಿತ್ತು.

"ಇವರಪ್ಪನಿಗೆ ಈಗ ವಾಸೀನಾ ?" ಎಂದು ಮತ್ತೆ ಪ್ರಶ್ನೆ ಬಂತು.

"ಏನು ವಾಸಿ—ಹಾಗೇ ಇದೆ" ಎಂದು ಸೋಮಶೇಖರ ನಾಗರಾಜ ಬರುವ ದಾರಿಯನ್ನೇ ನೋಡುತ್ತ ಹೇಳಿದ.

ದೂರದಲ್ಲಿ ನಾಗರಾಜ ಬರುತ್ತಿದ್ದ.

ಕರಿಯಪ್ಪ ಎದ್ದು ನಿಂತ, ಅವನು ಚಿಲ್ಲರೆ ತಂದಿರಬಹುದೆಂದು. ಆದರೆ ನಾಗರಾಜ ಜೇಬಿನಲ್ಲಿದ್ದ ಆ ನೋಟನ್ನೇ ಹೊರಗೆ ತೆಗೆಯುತ್ತ ಹತ್ತಿರಕ್ಕೆ ಬಂದ.

"ಅಯ್ಯೊ ! ಯಾಕೆ ಸಿಕ್ಕಲಿಲ್ವ ?—ಸೀನಪ್ಪನ ಹೋಟ್ಲಲ್ಲೂ ! ಮೊದಲೇ ಮೂರು ಮಂದೀನೂ ಹೋಗಿ ಕಾಫಿ ಕುಡಿದಿದ್ದರೆ ಆ ಮಾಣಿ ಬಾಯ್ಮುಚ್ಕೊಂಡು ಕೊಡ್ತಿದ್ದ. ಹೋಗ್ಲಿ ಬಿಡು....ಇಲ್ಲಿ ತಾ, ನಾ ತರ್ತೀನಿ" ಎಂದು ಕರಿಯಪ್ಪ ನೋಟಿಗಾಗಿ ಕೈಯೊಡ್ಡಿದ.

ಅದನ್ನು ಅವನ ಕೈಗೆ ಕೊಡಲು ಸ್ವಲ್ಪ ಹಿಂಜರಿದ ನಾಗರಾಜ ಆಮೇಲೆ ಸುಮ್ಮನೆ ಕೊಟ್ಟುಬಿಟ್ಟ.

"ಬನ್ನಿ ಹೋಗೋಣ" ಎಂದು ಕರಿಯಪ್ಪ ಮಾರಿಯ ಗುಡಿಯ ಪಕ್ಕದ ರಸ್ತೆಯಲ್ಲಿ ಹೊರಟ.

ಹೊಸದಾಗಿ ಮಾದಪ್ಪನವರು ಕಟ್ಟಿಸಿದ, ಅವರ ರತಿ ಲಕ್ಷ್ಮಮ್ಮ ವಾಸವಾಗಿರುವ ಮನೆ ಸಿಕ್ಕಿತು.

ದೂರದಿಂದ ಆ ಮನೆ ನೋಡುತ್ತಲೇ, ನಾಗರಾಜನ ಕಣ್ಣುಮುಂದೆ ರತ್ನ ಬಂದು ನಿಂತುಕೊಂಡಳು.

ರಸ್ತೆಯ ಎದುರು ಅಂಚಿನಲ್ಲಿ ಇವರಿಬ್ಬರನ್ನೂ ನಿಲ್ಲಿಸಿ ಕರಿಯಪ್ಪ ಒಳಗೆ ಹೋದ.

ಬೀದಿಯ ಬಾಗಿಲು ನೂಕಿ ಪಡಸಾಲೆಯನ್ನು ಪ್ರವೇಶಿಸಿದಾಗ, ಲಕ್ಷಮ್ಮ ಹಳೆಯ ಕುಪ್ಪಸವೊಂದಕ್ಕೆ ಹೊಸ ಗುಂಡಿ ಹಾಕುತ್ತಿದ್ದಳು.

"ಇದೇನು ರಾತ್ರಿ ಹೊತ್ತು ಹೊಲೀತಾ ಇದೀಯ?" ಎನ್ನುತ್ತ ಹತ್ತಿರ ಬಂದರೂ ಕುಳಿತುಕೊಳ್ಳದೆ ನಿಂತುಕೊಂಡೇ ಕರಿಯಪ್ಪ ಕೇಳಿದ.

ತಾನು ಬಾಡಿಗೆ ಬಾಕಿ ಕೊಡಬೇಕಾದುದಕ್ಕೆ ಸಬೂಬು ಹೇಳಿ ಮನೆಯ ಮಾಲೀಕನನ್ನು ಶಾಂತಿ ಮಾಡಲು ಕಳಿಸಿದ್ದ ಕರಿಯಪ್ಪ ಹತ್ತು ರೂಪಾಯಿಯ ಹೊಸ ನೋಟನ್ನು ಹಿಡಿದು ವಾಪಸು ಬಂದುದನ್ನು ನೋಡಿ ಅವಳಿಗೆ ಆಶ್ಚರ್ಯ ವಾಯಿತು.

"ಏನಂದ?" ಎಂದು ಎದ್ದು ನಿಂತಳು.

"ಏನಂತಾನೆ....ಅದಾಮೇಲೆ....ಹತ್ತು ರೂಪಾಯಿಗೆ ಚಿಲ್ಲರೆ ಇದ್ದರೆ ಕೊಡು. ಯಾರಿಗೋ ಕೊಡಬೇಕು. ಬಾಗಿಲಲ್ಲಿ ನಿಲ್ಲಿಸಿದೀನಿ ಅವರನ್ನ" ಎಂದು ಕರಿಯಪ್ಪ ಅವಸರಿಸಿದ.

"ಎಲ್ಲಿದೆ ಚಿಲ್ಲರೆ?....ನೋಡ್ತೀನಿ...." ಎಂದು ಲಕ್ಷಮ್ಮ ಹೊಸ ನೋಟನ್ನು ತೆಗೆದುಕೊಂಡು, ಮಹಡಿಯ ಮೇಲಿದ್ದ, ತನ್ನ ಮಲಗುವ ಕೋಣೆಗೆ ಹೋದಳು.

ಒಂದೊಂದು ರೂಪಾಯಿಯ ಹತ್ತು ಹಳೆಯ ನೋಟುಗಳನ್ನು ಹಿಡಿದು ಕೆಳಗಿಳಿಯುತ್ತ "ಮಹೇಶ್ವರಪ್ಪ ಏನಂದ?" ಎಂದು ಮತ್ತೆ ಕೇಳಿದಳು.

"ಏನೂ ಇಲ್ಲ. ಸರಿಯಾಗಿ ಹೇಳಿಬಿಟ್ಟೆ. ನಿಮ್ಮ ಬಸಪ್ಪನ್ನ ಕಳಿಸ ಬೇಡಿ. ದೇವರಿಗಿಂತ ಪೂಜಾರಿಯ ಹಾರಾಟ ಬಹಳ....ಮೂರು ತಿಂಗಳದ್ದೂ ಒಟ್ಟಿಗೆ ತಂದು ಕೊಟ್ಟಿಡ್ತೀನಿ. ಹಳೇಮನೆ ಬಾಡ್ಗೇನೂ ಇನ್ನೂ ಬಂದಿಲ್ಲ.... ಹಾಗೇನಾದರೂ ನಾ ಬರೋದು ತಡಾ ಆದರೆ ತಾವೇ ಆ ಕಡೆ ಒಂದು ನಿಮಿಷ ಬನ್ನಿ—ಮನೇನ್ನ ನೋಡಿದ ಹಾಗೂ ಆಗುತ್ತೆ....ಇಲ್ದಿದ್ರೆ ನಮ್ಮ ನಂಜುಂಡೀನೆ ತಂದು ಕೊಟ್ಟುಬಿಡ್ತಾನೆ, ಎಂದು ಹೇಳಿದೆ."

"ಅದಕ್ಕೇನಂದ?"

"ಏನಂತಾನೆ, ಸುಮನಿದ್ದ. ಮುಂದಿನ ತಿಂಗಳು ಆಖೈರ್ ವರೆಗೂ

ಭಯವಿಲ್ಲವೊ ? ಹೋಗಲಿ ಬಿಡು........ನನಗೆ ಪುರಸತ್ತಿಲ್ಲ. ಆಮೇಲೆ ಬರ್ತೀನಿ ....ಹೊರಗೆ ಯಾರನ್ನೋ ಬಿಟ್ಬಟ್ಬಂದಿದೀನಿ" ಎಂದು ಕರಿಯಪ್ಪ ದಡಬಡ ವ್ಹೆರಾಂಡದ ಕಡೆಗೆ ಹೆಜ್ಜೆ ಹಾಕಿದ.



ದೀಪವಿಲ್ಲದೆ ಸೈಕಲ್ ಬಿಟ್ಟುಕೊಂಡು ಹೊರಟಿದ್ದ ಸೋಮಶೇಖರ 'ಒಳ್ಳೆ ವಿಚಿತ್ರವಾಯಿತಲ್ಲ' ಎಂದುಕೊಂಡು ಲಕ್ಷ್ಮಮ್ಮನ ಮನೆಯ ಕಾಂಪೌಂಡು ಗೋಡೆಯನ್ನೇ ನೋಡುತ್ತ ಸುಮ್ಮನೆ ನಿಂತಿದ್ದ. ಊರಿಗೆಲ್ಲ ಪ್ರಸಿದ್ಧಳಾದ ಲಕ್ಷಮ್ಮನ ಮನೆ ಹತ್ತಿರ ಬಂದಕೂಡಲೆ, ಅವನು ಹೊರಟಿದ್ದ ಕಾರ್ಯ ಆತುರಪಡಿಸತೊಡಗಿದ. ಕರಿಯಪ್ಪನನ್ನೂ ನಾಗರಾಜನನ್ನೂ ಕೈಬಿಟ್ಟು ಆದಷ್ಟು ಬೇಗ ಹೊರಡಬೇಕೆಂದುಕೊಳ್ಳುತ್ತಿದ್ದ. ಬೆಂಗಳೂರಿಗೆ ಹೋಗಿದ್ದ ಇವನ ರಾಮುಕ್ಕ ಅಂದು ಊರಿಗೆ ಬರಬೇಕಾಗಿತ್ತು. ಮನೆಯಕಡೆ ಹೋಗಿ ನೋಡಿಕೊಂಡು ಬರೋಣ ಎಂದು, ತನ್ನ ಸ್ನೇಹಿತ ದರ್ಜಿ ಶೇಷಪ್ಪನ ಸೈಕಲ್ ತೆಗೆದುಕೊಂಡು ಅವನು ಮಾರಮ್ಮನ ಚೌಕದ ಕಡೆ ಹೊರಟಿದ್ದ. ಚೌಕ ದಾಟಿದ ಮೇಲೆ ಪೋಲೀಸ್ ಸ್ಟೇಷ್ಷ ಕಡೆ ಅರ್ಧ ಮೈಲಿ ಹೋದರೆ ರಾಮುಕ್ಕನ ದಣಿ ನಂಜಾಸಾನಿಯ ಮಂದಿರ ಸಿಕ್ಕುತ್ತದೆ. ರಾಮುಕ್ಕನ ಮುಖ ನೋಡಿ ಒಂದು ವಾರದ ಮೇಲಾಗಿದ್ದುದರಿಂದ ಅಂದು ಎಷ್ಟು ಹೊತ್ತಾದರೂ ಚಿಂತೆಯಿಲ್ಲ, ಆ ಮನೆಗೆ ಹೋಗೇ ಬರಬೇಕು ಎಂದು ಮನಸ್ಸು ಹಟಮಾಡುತ್ತಿತ್ತು.

ಸ್ವಲ್ಪ ಹೊತ್ತಿಗೆ ಮುಂಚೆ ಅಲ್ಲಿಯೇ ಟಲಾಯಿಸಿ ನಿರಾಸೆಗೊಂಡು ಹೋಗಿದ್ದ ನಾಗರಾಜ ಪುನಃ ಅದೇ ಮನೆಗೆ, ಆ ಮನೆಗೆ ಪರಿಚಿತನಾದ ಒಬ್ಬ ವ್ಯಕ್ತಿಯ ಜೊತೆಯಲ್ಲಿ ಬಂದುದನ್ನು ನೆನಸಿಕೊಂಡು ದೇವರು ಮನಸ್ಸು ಮಾಡಿದ್ದಾನೆ, ಎಂದುಕೊಳ್ಳುತ್ತಿದ್ದ. ಕರಿಯಪ್ಪ ಇಪ್ಪತ್ತು ರೂಪಾಯಿಯ ಒಬ್ಬ ಬಡ ಕಾನ್‌ಸ್ಟೇಬಲ್. 'ಹೀರಾಲಾಲ್, ಮಾದಪ್ಪ, ನಾರಾಯಣಶೆಟ್ಟಿ ಮುಂತಾದ ದುಡ್ಡಿನ ಡಬ್ಬಿಗಳ ಬೀಗದ ಕೈ ತನ್ನ ಕೈಯಲ್ಲಿದ್ದರೂ ಈ ಕರಿಯ ಕುರೂಪಿ ಯಃಕಶ್ಚಿತ್ ಕಾನ್‌ಸ್ಟೇಬಲ್‌ನನ್ನು ಆ ಲಕ್ಷಮ್ಮ ಯಾಕೆ ನೋಡ್ಕೊಂಡಿದಾಳೆ ಗೊತ್ತೇನೊ ! ಅದಕ್ಕೆ ಬಹಳ ಕಾರಣ ಇದೆ. ಆ ರತ್ನ ಇದಾಳೆ ನೋಡು ಅವಳು ಆ ಲಕ್ಷಮ್ಮನ ಮಗಳಲ್ಲ, ಅವಳ ತಂಗಿಯ ಮಗಳೂ ಅಲ್ಲ. ಈ ಕಾನ್‌ಸ್ಟೇಬಲ್ ಮಗಳೋ ಅಥವಾ ಅವನಿಗೇನೋ ಸಂಬಂಧದ್ದೋ ಆಗಬೇಕಂತೆ.... ಆಮೇಲೆ, ಇನ್ನೊಂದೇನ್ ಕಾರಣ ಗೊತ್ತಾ—ಈ ಕಾನ್‌ಸ್ಟೇಬಲ್ಲೇ ಅವಳಿಗೆ

ಗಿರಾಕಿ ಒದಗಿಸೋದು....ಜೂಜಾಟಗೀಜಾಟ ಇದಕ್ಕೆಲ್ಲ ಅನುಕೂಲ ಮಾಡಿ ಕೊಡೋದು ' ಎಂದು ಒಂದು ದಿನ ಆನಂದಿ ವಿವರಿಸಿದ್ದ. ನಾಗರಾಜನಿಗೆ ಆ ಮಾತಿನಲ್ಲಿ ಅಷ್ಟು ನಂಬಿಕೆ ಬಂದಿರಲಿಲ್ಲ. ಆದರೆ ಕರಿಯಪ್ಪ ಲಕ್ಷಮ್ಮನ ಮನೆಯ ಕಡೆ ಹೊರಟಾಗ, ಆ ಮಾತು ನೆನಪಿಗೆ ಬಂತು. ಇಷ್ಟು ದಿನವೂ ನಿರಾಸೆಗೊಂಡಿದ್ದ ಮನಸ್ಸಿಗೆ ತಕ್ಷಣವೇ ಒಂದು ಉಪಾಯ ಹೊಳೆಯಿತು. ' ಕರಿಯಪ್ಪ ಹೇಗಿದ್ದರೂ ಈ ಕಸಬಿನಲ್ಲಿ ಚೆನ್ನಾಗಿ ನುರಿತಿದ್ದಾನೆ, ದುಡ್ಡಿನ ಆಸೆಯಂತೂ ಹೇಳತೀರದು. ಅವನ ಮೂಲಕ ನಾನೇಕೆ ಪ್ರಯತ್ನ ಮಾಡ ಬಾರದು ? ' ಎಂದುಕೊಂಡ. ' ಆಗಬಹುದು. ಆದರೆ ಈ ಪ್ರಸ್ತಾಪ ಹೇಗೆ ಎತ್ತುವುದು ? ಆನಂದಿ ಇದ್ದಿದ್ದರೆ ಸಲಹೆ ಕೊಡುತ್ತಿದ್ದ. ಈ ಸೋಮಶೇಖರ ತನಗಿಂತ ಮೂರು ವರುಷ ದೊಡ್ಡವನಾಗಿದ್ದರೂ, ಆ ದಾರಿಯಲ್ಲಿ ಪಳಗಿದ್ದರೂ ಪ್ರಯೋಜನವಿಲ್ಲ. ಅವನಿಗೆ ಹೇಳಿದರೂ ಒಂದೇ, ಹೇಳದಿದ್ದರೂ ಒಂದೇ. ಅದೂ ಅಲ್ಲದೆ ಅವನ ಬಾಯಿ ಒಡಕು ; ಬೇಗ ಊರೆಲ್ಲ ಹರಡಿಬಿಡುತ್ತಾನೆ ' ಎಂದುಕೊಂಡು ಕರಿಯಪ್ಪನ ಬರುವನ್ನೇ ಕಾಯುತ್ತ ನಿಂತಿದ್ದ.

ಮನೆಯ ಕಡೆಯೇ ನೋಡುತ್ತ ನಿಂತಿದ್ದ ನಾಗರಾಜ ಮಾರಮ್ಮನ ಚೌಕದ ಕಡೆ ದೃಷ್ಟಿ ಬೀರಲಿಲ್ಲ. ವಾಕಿಂಗ್ ಹೋಗಿ ಆ ಕಡೆಯಿಂದ ವಾಪಸು ಬಂದ ಕಮಲ, ರತ್ನ ಇಬ್ಬರನ್ನೂ ಮನೆಗೆ ಸ್ವಲ್ಪ ದೂರದಲ್ಲಿ ಅವನು ನೋಡಿದ. ಆದರೆ ಆಗಲೆ ಕತ್ತಲು ಕವಿದಿದ್ದುದರಿಂದ, ರತ್ನ ಮನೆಯಲ್ಲಿಯೇ ಇರುವಳೆಂಬ ನಂಬಿಕೆಯಿಂದ ಅವನ ದೃಷ್ಟಿ ಆ ಇಬ್ಬರು ಹುಡುಗಿಯರ ಕಡೆ ಇಬ್ಬರು ಹುಡು ಗಿಯರೆಂದು ನೋಡಿತೇ ವಿನಾ ರತ್ನ, ಕಮಲ ಎಂದು ಊಹಿಸಲಿಲ್ಲ. ಅಲ್ಲದೆ ರತ್ನ ಒಬ್ಬಳಿಗಾಗಿಯೇ ಹಾತೊರೆಯುತ್ತ ಯೋಚನೆಯಲ್ಲಿ ಮುಳುಗಿದ್ದ ಆ ಮನಸ್ಸು ಈ ಇಬ್ಬರು ಹುಡುಗಿಯರನ್ನು, ತನಗೆ ಬೇಕಾದ ವಸ್ತು ಎಂಬ ಆಸಕ್ತಿ ಯಿಂದ ನೋಡಲಿಲ್ಲ. ಯಾರೋ ಪೋಲಿಗಳು ಬೀದಿಯಲ್ಲಿ ತಮಗಾಗಿ ಕಾಯು ತ್ತಿವೆ, ಎಂದು ತಿಳಿದ ಅವರಿಬ್ಬರೂ ಬೇಗಬೇಗ ಬಂದು ತಮ್ಮ ಮನೆಯ ಗೇಟು ತೆಗೆದಾಗ, ' ಅಯ್ಯೋ ಎಂಥ ಕೆಲಸ ಆಯ್ತು ! ಮುಖ ನೋಡಲಿಲ್ಲವಲ್ಲ ' ಎಂದು ಅವನ ಮನಸ್ಸು ಪೇಚಾಡಿತು.

ಅಕ್ಕ ತಂಗಿ ಸರಸರ ಮೆಟ್ಟಲು ಹತ್ತಿದರು ; ಎದುರಿಗೆ ಕರಿಯಪ್ಪ ಬಂದ. ಜಗಲಿಯ ದೀಪದ ಕೆಳಗೆ ಇಬ್ಬರೂ ಒಂದು ನಿಮಿಷ ನಿಲ್ಲಲೇ ಬೇಕಾಯಿತು.

" ಯಾವ ಕಡೆ ಹೊರಟಿತ್ತು ಸವಾರಿ ? " ಕರಿಯಪ್ಪ ಕೇಳಿದ. ಕಮಲ ಉತ್ತರ ಕೊಡದೆ ಒಳಗೆ ಹೊರಟುಹೋದಳು.

" ಎಲ್ಲೂ ಇಲ್ಲ. ಸುಮ್ನೆ ಒಂದಿಷ್ಟ್ ದೂರ ವಾಕಿಂಗ್ "—ರತ್ನ ಉತ್ತರ ಕೊಟ್ಟಳು.

ದೀಪದ ಬೆಳಕಿನಲ್ಲಿ ಅವಳ ಮುಖ ಬೆಳಗಿತು. ಅವಳು ನಸುನಗುತ್ತ ತಲೆಯೆತ್ತಿ ಕರಿಯಪ್ಪನನ್ನು ನೋಡಿದಾಗ ದೀಪದ ಬೆಳಕು ಕಂಡ ಅವಳ ಕಣ್ಣು ಮಿನುಗಿತು. ಆ ಕೆಂಪು ತುಟಿ, ನಿಗಿನಿಗಿ ಹೊಳೆದ ಆ ಲೋಲಕ್, ಎಣ್ಣೆ ಹಾಕಿ ಚೆನ್ನಾಗಿ ಬಾಚಿದ್ದ ತಲೆಯ ಅಲೆಗೂದಲ ಹೊಳಪು, ಗಾಳಿಗೆ ಕೆದರಿದ ಗುಂಗುರು ಮುಂಗುರುಳು—ಎಲ್ಲ ನಾಗರಾಜನಿಗೆ ಹಾವಾಡಿಗನ ಮೋಡಿಹಾಕಿತು.

ಹದಿನೇಳು ವರುಷದ ಆ ದೇಹ ಬಹಳ ಚೆನ್ನಾಗಿ ಬೆಳೆದಿತ್ತು. ತಿಳಿ ಆಕಾಶಬಣ್ಣದ ಒಡಲಿನ ಹಳದಿ ರೇಶಿಮೆಯ ದಪ್ಪ ಅಂಚಿನ ಸೀರೆ ಅವಳಿಗೆ ಬಹಳ ಸೊಗಸಾಗಿ ಒಪ್ಪಿತ್ತು. ಹೆಣ್ಣು ಕಂಡರೆ ಸಾಕು, ಅವಳ ಎದೆ ನೋಡು ತ್ತಿದ್ದ ನಾಗರಾಜನ ಕಣ್ಣುಗಳಿಗೆ ಇವಳ ಎದೆ ದೀಪದ ಬೆಳಕಿನಲ್ಲಿ ಗುಂಡು ಚಂಡಿ ನಂತೆ ಕಂಡಿತು. ಸೀರೆ ಉಡುವಾಗ ಅವಳು ಸೆರಗನ್ನು ನೆರಿಗೆನೆರಿಗೆಯಾಗಿ ಮಾಡಿ ಓರಣವಾಗಿ ಹೊದ್ದುಕೊಂಡಿದ್ದಳು. ಆದರೆ ಬಾಗಿಲಲ್ಲಿ ಪೋಲಿ ನಾಯಿ ಗಳನ್ನು ಕಂಡು, ಆತುರದಲ್ಲಿ ಮನೆಯ ಮೆಟ್ಟಲು ಹತ್ತಿ, ಅನಿರೀಕ್ಷಿತವಾಗಿ ಕರಿ ಯಪ್ಪನನ್ನು ನೋಡಿದಾಗ ಸೆರಗಿನ ಕಡೆ ಗಮನವಿರಲಿಲ್ಲ. ಮಲ್ಲಿಗೆ ಮೊಗ್ಗಿನಂ ಚಿನ ಹಳದಿ ಕುಪ್ಪಸದ ತೋಳಿನ ಮೇಲಿದ್ದ ಸೀರೆಯ ಅಂಚು ಸ್ವಲ್ಪ ಜಾರಿದರೂ ಉಬ್ಬಿದ ಆ ಎದೆ ತಡೆದು ನಿಲ್ಲಿಸಿತ್ತು. ಆದರೂ ಎಡಭುಜದ ಮೇಲಿದ್ದ ಸೆರಗು ನೆರಿಗೆನೆರಿಗೆಯಾಗಿ ಎಡ ಮೊಳಕೈಮೇಲೆ ಇಳಿದಿತ್ತು. ಅವಳು ಕರಿಯಪ್ಪನ ಪ್ರಶ್ನೆಗೆ ' ಎಲ್ಲೂ ಇಲ್ಲ ' ಎಂದು ತಲೆಯಲ್ಲಾಡಿಸಿದಾಗ ಆ ನೀಳವಾದ ಜಡೆಯೂ ಎಲ್ಲೂ ಇಲ್ಲ ' ಎಂದು ಅಲ್ಲಾಡಿತು.

ದೂರದಲ್ಲಿ ನಿಂತು ಒಂದು ನಿಮಿಷ ಈ ಚಿತ್ರ ನೋಡಿದ ನಾಗರಾಜನ ಮನಸ್ಸು ಹೇಗೆಹೇಗೋ ಆಗಿತ್ತು. ಆನಂದ, ಆಸೆ, ನಂಬಿಕೆ ಎಲ್ಲ ಒಟ್ಟಿಗೆ ಉಂಟಾಗಿ ಮನಸ್ಸು ತಳಮಳಿಸುತ್ತಿತ್ತು. ಒಂದು ನಿಮಿಷ ಎಂಬುದು ಒಂದು ಕ್ಷಣವಾಗಿ ಹಾರಿಹೋಗಿತ್ತು, ಇಬ್ಬರು ಹುಡುಗಿಯರೂ ಒಳಗೆ ಹೊರಟು ಹೋದರು. ಕರಿಯಪ್ಪ ಗೇಟು ತೆಗೆದುಕೊಂಡು ಬೀದಿಗೆ ಬಂದ.

"ಸಿಕ್ತಾ" ಎಂದು ನಾಗರಾಜ ಕೂಡಲೆ ಕೇಳಬಹುದೆಂದು ಕರಿಯಪ್ಪ ಊಹಿಸಿದ್ದ. ಆದರೆ ಅವನ ಮನಸ್ಸು ಎಲ್ಲೋ ಇತ್ತು. ಕರಿಯಪ್ಪನ ಬೂಟ್ಸಿನ ಶಬ್ದ ಕೇಳಿ "ಸಿಕ್ತಾ ?" ಎಂದು ಸೋಮಶೇಖರ ಕೇಳಿದ.

"ಹ್ಞು" ಎಂದು ಕರಿಯಪ್ಪ ಚಿಲ್ಲರೆಯನ್ನು ನಾಗರಾಜನ ಕೈಗೆ ಕೊಟ್ಟ. ನಾಗರಾಜ ಒಂದು ರೂಪಾಯಿ ನೋಟನ್ನು ತೆಗೆದು ಕರಿಯಪ್ಪನ ಕೈಯಲ್ಲಿಟ್ಟ. ಅವನ ಕೈ ಯಂತ್ರದಂತೆ ಆ ನೋಟನ್ನು ತೆಗೆದುಕೊಂಡು ಒಳಜೇಬಿನಲ್ಲಿ ಹಾಕಿ ಕೊಂಡಿತು.

ಏಕೊ ಏನೊ ಮತ್ತೆ ಲಕ್ಷಮ್ಮನ ಮನೆಯ ಕಡೆ ಹೊರಟ ಕರಿಯಪ್ಪನ ಕಾಲು ಹಿಂದಕ್ಕೆ ಸರಿದು ಮಾರಮ್ಮನ ಚೌಕದ ಕಡೆ ಹೊರಟಿತು. ದುಡ್ಡು ತೆಗೆದು ಕೊಂಡ ಆ ವ್ಯಕ್ತಿ ನಾಗರಾಜನ ಮುಖ ನೋಡಿತೇ ವಿನಾ 'ನಮಸ್ಕಾರ ಬರ್ತೀನಿ' ಎಂಬ ಒಂದು ಮಾತನ್ನೂ ಆಡಲಿಲ್ಲ.

ಉಳಿದ ಒಂಭತ್ತು ರೂಪಾಯಿಯನ್ನೂ ಜೇಬಿನಲ್ಲಿಟ್ಟುಕೊಳ್ಳುತ್ತ ನಾಗ ರಾಜ "ಯಾವ ಕಡೆ ಸೋಮಣ್ಣ ?" ಎಂದ.

ತಕ್ಷಣವೆ ಉತ್ತರ ಕೊಡದೆ ಒಂದು ನಿಮಿಷ ತಡೆದು ಸೋಮಶೇಖರ "ನಮ್ಮ ಸೋದರಮಾವ ಬಂದಿದಾರೆ ಕಣೊ. ಅವರಿಗೆ ಹೊಟ್ಟೆನೋವಂತೆ. ಪಂಡಿತರ ಮನೆಗೆ ಹೋಗ್ಬಿಟ್ಟು ಬರೋಣಾಂತ" ಎಂದ.

"ಸರಿ, ಹಾಗಾದರೆ ಮನೇಕಡೆ ಬರೊಲ್ಲ ?"

"ಇಲ್ಲಪ್ಪ....ಅದಕ್ಕೇ ನಾನು ಬೇಗ ಹೋಗಿ ಬಂದ್ಬಿಡೋಣಾಂತ ಶೇಷ ಪ್ಪನ ಬೈಸ್ಕಲ್ ತೊಗೊಂಡು ಹೊರಟೆ. ದಾರೀಲಿ ಈ ಅವಾಂತರ ಆಗಿಬಿಡ್ತು. ನಡಕೊಂಡೇ ಬೇಗ ಹೋಗಿ ಬರಬೇಕು," ಎಂದು ಸೈಕಲ್ಲನ್ನು ಮಾರಮ್ಮನ ಚೌಕದ ಕಡೆ ತಿರುಗಿಸುತ್ತ ಸೋಮಶೇಖರ ಹೇಳಿದ.

"ಹಾಗಾದರೆ ನಡಿಯಪ್ಪ, ನಾನು ಹೀಗೆ ಹೊರಡ್ತೀನಿ" ಎಂದು ನಾಗ ರಾಜ ಲಕ್ಷಮ್ಮನ ಮನೆಯ ಮುಂದಿನ ರಸ್ತೆಯಲ್ಲಿ ಅಗ್ರಹಾರದ ಕಡೆ ಹೆಜ್ಜೆ ಹಾಕ ತೊಡಗಿದ. ಆನಂದಿಯ ನೆನಪು ಮಾಡಿಕೊಂಡ ಮನಸ್ಸು ಅಗ್ರಹಾರದ ಕಡೆ ಹೋಗಬೇಕು, ಎಂದುಕೊಂಡಿತ್ತು. ಹೋಗಿ ಏನು ಮಾಡಬೇಕು, ಆನಂದಿ ಇಷ್ಟು ಹೊತ್ತಿನಲ್ಲಿ ಮನೆಯಲ್ಲಿರುತ್ತಾನೆಯೆ, ಅವರಪ್ಪ ಇದ್ದರೆ ಇವ ನನ್ನು ಸುಮ್ಮನೆ ಬಿಡುತ್ತಾರೆಯೆ, ಆನಂದಿ ತನಗೆ ಯಾವ ರೀತಿ ಸಹಾಯ

ಮಾಡಬಹುದು, ಇವೊಂದೂ ಮನಸ್ಸಿನ ಮುಂದೆ ಬರಲಿಲ್ಲ. ಕಾಲು ಸುಮ್ಮನೆ ಹೊರಟಿತು.

ಲಕ್ಷ್ಮಮ್ಮನ ಮನೆಯಿಂದ ನಾಲ್ಕು ಮನೆ ದಾಟಿದ ಮೇಲೆ ಮತ್ತೊಂದು ಬೇವಿನ ಮರ ಸಿಕ್ಕುತ್ತದೆ. ನಾಗರಾಜ ಇನ್ನೂ ಆ ಮರವನ್ನು ದಾಟಿರಲಿಲ್ಲ.

ಚಪ್ಪಾಳೆಯ ದನಿ ಕೇಳಿತು.

ಸೋಮಶೇಖರ ಇರಬಹುದೆಂದು ತಿರುಗಿ ನೋಡಿದ. ಚೌಕದ ಬೆಳಕಿನ ಹಿನ್ನೆಲೆಯಲ್ಲಿ ಕಪ್ಪಗೆ ಕಾಣಿಸಿತು, ತನ್ನ ಕಡೆಗೇ ನಡೆದು ಬರುತ್ತಿದ್ದ ಕರಿಯಪ್ಪನ ದೇಹ.

'ಅಶ್ಚರ್ಯ! ಇದೇಕಪ್ಪ ಇವನು ಮತ್ತೆ ಬರುತ್ತಿದ್ದಾನೆ........ನಾನು ಕೊಟ್ಟದ್ದು ಸಾಲದೊ, ಏನೊ. ಒಂದು ರೂಪಾಯಿಗಿಂತ ಇನ್ನೇನು ಕೊಟ್ಟಾರು. ಕೋರ್ಟಿಗೆ ಹೋದರೆ, ಅಬ್ಬಬ್ಬ ಎಂದರೆ, ಎರಡು ರೂಪಾಯಿ ಜುಲ್ಮಾನೆ; ಶೇಕಡ ಐವತ್ತರಷ್ಟು ಸುರಿದಿದ್ದೀನಿ, ಎಂದುಕೊಂಡ. ಆದರೆ, ತಕ್ಷಣವೆ ಇನ್ನೊಂದು ವಿಷಯ ಮನಸ್ಸಿನಲ್ಲಿ ಹೊಳೆಯಿತು. ಅವನು ತನ್ನೊಡನೆ ಏನಾದರೂ ಮಾತಾಡಲು ಬಂದಿದಾನೊ, ಏನೊ! ಏಕೆಂದರೆ ತಾನು ಆ ಮನೆಯ ಮುಂದೆ ಬಹು ದಿನಗಳಿಂದಲೂ ಆಗಾಗ ಟಲಾಯಿಸುತ್ತಿದ್ದೇನೆ. ಮೂರು ನಾಲ್ಕು ಬಾರಿ ಕರಿಯಪ್ಪನ ಕಣ್ಣು ಕಂಡುಬಿಟ್ಟಿತ್ತು. ಕರಿಯಪ್ಪ ದುರುಗುಟ್ಟಿಕೊಂಡು ನೋಡಿದ್ದ. ಕಂಡು ಬುದ್ಧಿ ಹೇಳಲು ಬರುತ್ತಿದ್ದಾನೊ, ಏನೊ! ಅಥವಾ—ಅದೇ ಆಲೋಚನೆಯಲ್ಲಿದ್ದ ಅವನಿಗೆ—ಊರೆಲ್ಲ ಪ್ರಸಿದ್ಧವಾಗಿರುವ ಹಾಗೆ ತನ್ನನ್ನೂ ಆ ಮನೆಗೆ ಗಿರಾಕಿ ಮಾಡಲು ಏಜೆಂಟಾಗಿ ಬರುತ್ತಿದ್ದಾನೆಯೆ! ಲಕ್ಷ್ಮಮ್ಮ ಆ ಇಬ್ಬರು ಹುಡುಗಿಯರನ್ನು ಸರ್ವಿಸಿಗೆ ಹಾಕಲು ನಿಶ್ಚಯಿಸಿರಬಹುದು. ಹೊಸೂರಿನ ಲಕ್ಷದ ಕುಳಗಳಲ್ಲಿ ತಾನೂ ಒಬ್ಬನಾಗಿರುವಾಗ, ಕರಿಯಪ್ಪ ತನಗಾಗಿಯೇ ಏಕೆ ಬರುತ್ತಿರಬಾರದು' ಎನ್ನಿಸಿತು.

ಒಂದೇ ಬಾರಿ ಚಪ್ಪಾಳೆ ತಟ್ಟಿದ ಕರಿಯಪ್ಪ ನಿಧಾನವಾಗಿ ಬೇವಿನ ಮರದ ಹತ್ತಿರ ಬಂದ.

ನಾಗರಾಜ ಅರ್ಧ ಅಂಜಿ "ಏನ್ರಿ?" ಅಂದ.

ಕರಿಯಪ್ಪ ನಿಧಾನವಾಗಿಯೇ "ಏನೂ ಇಲ್ಲಾ, ನಿನ್ನ ಹತ್ತಿರ ಮಾತಾಡೋಣಾಂತ—ಒಂದು ವಿಷಯ ಕೇಳಬೇಕಾಗಿತ್ತು."

" ಏನು ? "

" ಅದೇನು ದಿನಾ ಇಲ್ಲಿ ಟಲಾಯಿಸ್ತಾ ಇರ್ತೀಯಲ್ಲ?....ನಾನು ನಾಲ್ಕೈದು ಸಲ ನೋಡಿದೆ....ಏನೋ ಹೋಗಲೀಂತ ಬಿಟ್ಟೆ" ಎಂದು ಗತ್ತಿನ ಮೇಲೆ ಮಾತಾಡಿದ.

ಆ ಮಾತಿಗೆ ಹೆದರಿದ ನಾಗರಾಜ " ಇಲ್ರಿ, ಅಗ್ರಹಾರದಲ್ಲಿ ನನ್ನ ಸ್ನೇಹಿತ ಆನಂದಿ ಮನೆ, ಅಲ್ಲಿಗೆ ಹೋಗಿ ಬರಬೇಕಾದರೆ ಹೀಗೇ ಹೋಗ್ತಿರ್ತೀನಿ...."

" ಹೋಗ್ತಾ ಇರು....ಅದರಿಂದ ಏನು ಪ್ರಯೋಜನ ಹೇಳು."

ಅನಿರೀಕ್ಷಿತವಾಗಿ ಬಂದ ಈ ಮಾತು ಕೇಳಿ ನಾಗರಾಜನಿಗೆ ತುಂಬ ಆಶ್ಚರ್ಯವಾಯಿತು.

" ಹಾಗಂದ್ರೆ ? "

" ಏನ್ ಹಾಗಂದ್ರೆ ! ನಿಮ್ಮಂಥ ದುಡ್ಡಿರೋರು ಹೊರಗೆ ತಿರುಗೋದರ ಬದಲು ಒಳಗಿದ್ಕೊಂಡು ಮಜಮಾಡ್ತಿರಬಹುದೂಂತ."

ಅರ್ಥ ಆಯಿತು. ನಾಗರಾಜ ತನ್ನ ಆಸೆ ಈಡೇರಿತು, ಎಂದುಕೊಂಡ.

ಬುಕ್ ಮಾಡುವುದರಲ್ಲಿ ನಿಸ್ಸೀಮನಾದ ಕರಿಯಪ್ಪ, ಮಾತಾಡುತ್ತಲೇ ನಿಧಾನವಾಗಿ ನಡೆಯತೊಡಗಿದ.

" ಈಗಿನ ಕಾಲ ಅದುಲುಬದಲು ; ಗುಲಾಮನಗಿರೋ ಸುಖ ದಣೀಗಿಲ್ಲ."

" ಹಾಗಂದ್ರೆ ? "

" ಹಾಗಂದ್ರೆ ಅಂದ್ರೆ ! ಗುಮಾಸ್ತನಿಗಿರೋ ಸುಖ ಸಾಹುಕಾರನಿಗಿಲ್ಲಾಂತ."

" ಏನೋ ನಂಗರ್ಥವಾಗೊಲ್ಲ ನಿಮ್ಮ ಮಾತು."

" ನಿಮ್ಮ ನಾರಾಯಣರಾಯರಿಗೆ ಇರೋ ಸುಖ ನಿಮ್ಮಪ್ಪನಿಗಿಲ್ಲಾಂತ."

ನಾಗರಾಜನ ಕುತೂಹಲ ಕೆರಳಿತು. ನಾರಾಯಣರಾಯರಲ್ಲಿ ಹುಳುಕು ಕಂಡರೆ ಸಾಕು, ತಂದೆಗೆ ದೂರು ಹೇಳಿ ಆ ಆಸಾಮಿಯನ್ನೇ ಓಡಿಸೋಣ ಎಂದು ಕಾಯುತ್ತಿದ್ದ ಅವನಿಗೆ ಕರಿಯಪ್ಪನ ಮಾತಿನಲ್ಲಿ ತುಂಬ ಆಸಕ್ತಿ ಮೂಡಿತು.

" ಏನು ನಾರಾಯಣರಾಯರು ಸುಖ ಪಡೋದು ! "

" ಏನೇ, ಮಾದಪ್ಪನೋರು ಹೋದಮೇಲೆ ಪ್ರತಿ ಭಾನುವಾರವೂ ಲಕ್ಷ್ಮಮ್ಮನ ಮನೆ ನಾರಾಯಣರಾಯರದ್ದೇ ! "

ಆ ಮಾತು ಕೇಳಿದಾಗ ನಾಗರಾಜನಿಗೆ ನಾಲ್ಕು ಕೈ ಬಂದಂತಾಯಿತು. ಹಿಂದೆ ಮದರಾಸಿನ ಏಜೆಂಟ್ ಬಂದು ಅಂಬಾಳ್ ನಸ್ಯವನ್ನು ಒಟ್ಟುಗಟ್ಟಲೆ ಅನಾವಶ್ಯಕವಾದಷ್ಟು ಹಾಕಿ ಹೋದಾಗ ನಾರಾಯಣರಾಯರು ಜೇಬು ತುಂಬಿ ಕೊಂಡುದನ್ನು ತಾನು ಕಣ್ಣಾರ ಕಂಡಿದ್ದ. ಬ್ರೂಕ್ ಬಾಂಡ್ ಟೀ ಏಜೆಂಟ್ ಬಂದಿದ್ದಾಗ, ಆತ ನಾರಾಯಣರಾಯರ ಮನೆಯಲ್ಲಿಯೇ ಇಳಿದಿದ್ದ. ರೋಗ ದಿಂದ ಇದ್ದರೂ ಸತ್ತಂತಿರುವ ನಂಜಪ್ಪಶೆಟ್ಟರಿಗೆ ಗೋಚರಿಸದಂತೆ ನಾರಾಯಣ ರಾಯರು ಬೇಕಾದಷ್ಟು ಆಟ ಆಡಿ ಬಿಟ್ಟಿದ್ದರು. ನಾಗರಾಜ ಗಲ್ಲದ ಮೇಲಿದ್ದ ದಿನಗಳಲ್ಲಿ ಇದನ್ನೆಲ್ಲ ಅಂಗಡಿಯ ಆಳುಗಳಿಂದ ತಿಳಿದು ತಂದೆಗೆ ಮುಟ್ಟಿಸುತ್ತಿದ್ದ. ಪೋಲು ಮಾಡುವ ಪೋಲಿ ಮಗನಿಗಿಂತ ಸ್ವಸುಖದ ಜೊತೆಗೆ ಸ್ವಾಮಿ ಸುಖ ವನ್ನೂ ನೋಡುತ್ತಿದ್ದ ಬ್ರಾಹ್ಮಣ ಲೇಸು, ಎಂದು ನಂಜಪ್ಪಶೆಟ್ಟರು ಸುಮ್ಮನಿರು ತ್ತಿದ್ದರು. ಆದರೆ ನಾಗರಾಜ ಬಿಡುತ್ತಿರಲಿಲ್ಲ. ಸಮಯ ನೋಡಿ, ನಾರಾ ಯಣರಾಯರಿಂದ ಅಲ್ಪಸ್ವಲ್ಪ ಗಿಟ್ಟಿಸುತ್ತಿದ್ದ. ಮಗನಿಗೆ ತಿಳಿದ ತಮ್ಮ ಅನೇಕ ವಿಷಯಗಳು ತಂದೆಗೆ ತಿಳಿಯಬಾರದೆಂದು ನಾರಾಯಣರಾಯರು ಆಗ ಈಗ ಮಗನ ಕೈ ಬೆಚ್ಚಗೆಮಾಡುತ್ತಿದ್ದರು.

ಈ ಸುದ್ದಿ ತಿಳಿದಮೇಲಂತೂ ಅವರನ್ನು ಹಿಂಡಿಬಿಡಬಹುದೆಂದು ನಾಗ ರಾಜ ಅಂದು ಕೊಂಡ. ‘ ಓ ಅದಕ್ಕೇ ಕರಿಯಪ್ಪ ಆಗಾಗ ನಾರಾಯಣರಾಯರ ಹತ್ತಿರ ಬರ್‍ತಾ ಇರೋದು ! ’ ಎಂದಿತು ಅವನ ಮನಸ್ಸು.

“ ಕರಿಯಪ್ಪನೋರೆ, ನಮ್ತಂದೆಗೆ ಹೇಳಿಬಿಡಲೆ ? ”

“ ಛೆ ಛೆ ! ಎಲ್ಲ ಕೆಟ್ಟುಹೋಗುತ್ತೆ. ಈ ವಿಷಯ ನಿಂಗೊಬ್ಬನಿಗೆ ತಿಳಿದಿ ದ್ದರೆ ಸಾಕು, ಬೇಕಾದಷ್ಟು ಆಟ ಆಡಬಹುದು ; ನೀನೂ ಸುಖವಾಗಿರಬಹುದು. ಅದೂ ಅಲ್ಲದೆ ದೂರಾಲೋಚನೆಯಿಂದ ನೋಡಬೇಕು. ನಿಮ್ಮಪ್ಪಂಗ್ಯಾನೇ ಯಾರಿದಾರೆ, ನೀನೊಬ್ಬನೇ ಮಗ........ಅಂಗಡಿ ನೋಡೋಕೆ ಒಳ್ಳೆ ಗುಮಾಸ್ತ ಸಿಕ್ಕಿರೋವಾಗ ಅವನನ್ನು ಬಿಡಿಸಿ ಓಡಿಸಿಬಿಟ್ಟರೆ ನೀನೇ ಅಂಗಡೀನೂ ನೋಡ ಬೇಕಾಗುತ್ತೆ, ಮನೇನೂ ನೋಡಬೇಕಾಗುತ್ತೆ—ಮಾದಪ್ಪನೋರ ಮಗ ಮಹೇ ಶ್ವರನ ಹಾಗೆ ಒದ್ದಾಡಬೇಕಾಗುತ್ತೆ. ನನಗೆ ತೋರೋ ಹಾಗೆ ಮಾಡಿದರೆ ಇಬ್ಬರಿಗೂ ಅನುಕೂಲ.”

“ ಹೇಗೆ ? ” ನಾಗರಾಜ ಕುತೂಹಲದಿಂದ ಕೇಳಿದ.

ನಾಗರಾಜ, ಕರಿಯಪ್ಪ ಹಿಂದೆಂದೂ ಇಷ್ಟು ಸಲಿಗೆಯಿಂದ ಮಾತಾಡಿರ ಲಿಲ್ಲ. ಆದರೆ ತನ್ನ ಹೃದಯಕ್ಕೆ ಸಂಬಂಧಪಟ್ಟ ಒಂದು ಮನೆ, ಕರುಳಿಗೆ ಸಂಬಂಧಪಟ್ಟ ಇನ್ನೊಂದು ಮನೆ ಎರಡರ ಹಿತವನ್ನೂ ಸಾಧಿಸಲು ಮುಂದೆ ಬಂದಿದ್ದ ಆ ಕರಿಯಪ್ಪನೊಡನೆ ನಾಗರಾಜ ಬಹಳ ಬೇಗ ಹೊಂದಿಕೊಂಡ. ಅದರಲ್ಲಿಯೂ ನಾರಾಯಣರಾಯರ ಸಮಾಚಾರ ತಿಳಿದ ಮೇಲಂತೂ ಕರಿಯಪ್ಪ ನಾಗರಾಜನ ಆಪ್ತ ಹಿತಚಿಂತಕನಾಗಿ ಬಿಟ್ಟಿದ್ದ.

ಕರಿಯಪ್ಪ ಏನೋ ಯೋಚಿಸುತ್ತ ಸುಮ್ಮನೆ ಬರುತ್ತಿದ್ದ.

ನಾಗರಾಜ ಪುನಃ " ಹೇಗೆ ಕರಿಯಪ್ಪನೋರೆ ? " ಎಂದು ಕೇಳಿದ.

" ಇಲ್ಲಿ ಬೇಡ........ಈ ಕಡೆ ಹೋಗೋಣ....ಅಲ್ಲಿ ಕಲ್ಲುಬೆಂಚಿನ ಮೇಲೆ ಕೂತ್ಕೊಂಡು ಮಾತಾಡೋಣ....ಇಲ್ಲೆಲ್ಲ ಜನ ತಿರುಗಾಡ್ತಿರ್ತಾರೆ....ನಾನು ಬೀಡಿ ತೊಗೊಂಡ್ಬರ್ತೀನಿ ತಡಿ " ಎಂದು ಕರಿಯಪ್ಪ ನೆಲವನ್ನೇ ನೋಡುತ್ತ, ಚನ್ನ ಪ್ಪನ ಬೀಡಿ ಅಂಗಡಿಯ ಕಡೆ ಹೊರಟ.

ಅಗ್ರಹಾರ ಹತ್ತಿರಕ್ಕೆ ಬಂದಿತ್ತು. ಆದರೆ ಬಲಗಡೆ ತಿರುಗುವ ಬೆನ್ನೂರು ರಸ್ತೆಯಲ್ಲಿ ಸ್ವಲ್ಪ ದೂರ ಹೋಗಿ, ರಸ್ತೆಯ ಪಕ್ಕದಲ್ಲಿ ಹಾಕಿರುವ ಕಲ್ಲುಬೆಂಚಿನ ಮೇಲೆ ಕುಳಿತು ಮಾತಾಡೋಣ, ಎಂದು ಸಲಹೆ ಮಾಡಿದ್ದ. ನಾಗರಾಜ ಆ ಕಡೆ ತಿರುಗಿದ. ಅಷ್ಟರಲ್ಲಿ ಕರಿಯಪ್ಪ ಒಂದು ಕಟ್ಟು ಹೊಸ ಬೀಡಿ ಮತ್ತು ಒಂದು ಹೊಸ ಬೆಂಕಿಪೆಟ್ಟಿಗೆಯೊಡನೆ ಬೇಗಬೇಗ ಬಂದು ನಾಗರಾಜನನ್ನು ಸೇರಿ ಕೊಂಡ.

ಕಲ್ಲುಬೆಂಚು ಸಿಕ್ಕಿತು.

ಕುಳಿತುಕೊಳ್ಳುತ್ತ ನಾಗರಾಜ " ಈಗ ಏನ್ಮಾಡ್ಬೇಕೊಂತೀರ ಕರಿಯ ಪ್ನೋರೆ ? " ಎಂದು ಕೇಳಿದ.

" ಇನ್ನೂ ಏನೂ ಮಾಡೋಕೆ ಹೋಗ್ಬೇಡ. ನಾ ಹೇಳೋದನ್ನ ಸ್ವಲ್ಪ ನಿಧಾನವಾಗಿ ಕೇಳು. ನಿನಗೆ ದುಡ್ಡಿದೆ, ಬೇಕಾದಷ್ಟು ದುಡ್ಡಿದೆ. ಆದರೆ ಏನು ಪ್ರಯೋಜನ. ನಿಮ್ಮಪ್ಪ ನಿಂಗೆ ಇನ್ನೂ ಮದುವೆ ಮಾಡಿಲ್ಲ. ನಾರಾಯಣ ರಾಯರು ಎಲ್ಲ ಹೇಳಿದರು. ನಿಮ್ಮಕ್ಕನ ಮಗಳನ್ನು ಮದುವೆ ಮಾಡ್ಕೊಬೇ ಕಂತೆ. ಅದು ನಿಂಗೆ ಇಷ್ಟವಿಲ್ಲವಂತೆ. ನಾರಾಯಣರಾಯರು ಇನ್ನೊಂದು ವಿಷಯಾನೂ ಹೇಳಿದರು. ಅದನ್ನು ಹೇಳಿದರೆ ನೀನೇನು ತಿಳಿದುಕೊಳ್ತೀಯೊ!....

" ಇಲ್ಲ, ಹೇಳಿ ಕರಿಯಪ್ಪನೋರೆ....ಹೇಳಿ ಪರವಾಯಿಲ್ಲ."

" ನಿಮ್ಮಪ್ಪ ನಿಂಗೇನೂ ಉಳಿಸೋ ಹಾಗೆ ಕಾಣೊಲ್ವಂತೆ. ಅದೇನೋ ಛತ್ರ ಕಟ್ಟಸ್ತಾನಂತೆ. ನಿಮ್ಮಕ್ಕನಿಗೆ ಅರ್ಧ ಆಸ್ತಿ ಬರೀತಾನಂತೆ. ನಾರಾಯಣ ರಾಯರು ಇನ್ನೂ ಅದೇನೇನೋ ಹೇಳಿದರಪ್ಪ."

ಕತ್ತಲು ಕವಿದಿದ್ದರೂ ಆಸಕ್ತಿಯಿಂದ ಕರಿಯಪ್ಪನ ಮುಖವನ್ನೇ ನೋಡುತ್ತ ಕುಳಿತಿದ್ದ ನಾಗರಾಜ " ನಿಜ, ಕರಿಯಪ್ಪನೋರೆ, ನಂಗೂ ಎಲ್ಲ ತಿಳಿದಿದೆ " ಎಂದ.

" ಆಮೇಲೆ ನೀನು, ಈ ಸೋಮಶೇಖರ, ಆ ಶಾಸ್ತ್ರಿಗಳ ಮಗ, ಅವನ್ಹೆಸರೇನಪ್ಪ—ಆ ಲಾಯರ ಮಗಳಿಗೆ ಕಾಗದ ಬರೆದು ಸಿಕ್ಕಿಹಾಕ್ಕೊಂಡಿದ್ದನಲ್ಲ ಆನಂದಿ ! ಅವನು ಇವರ ಜೊತೆ ಎಲ್ಲ ಸೇರಿ, ನೀನು ದುಡ್ಡಿನ ಜೊತೆ ದೇಹಾನೂ ಹಾಳುಮಾಡ್ಕೊತಿದೀಯೆ ಅಂತ ಹೇಳಿದರು. ನಾನು ಹೇಳಿದಂತೆ ಕೇಳಿದರೆ ಈ ಚಿಲ್ಲರೇನೆಲ್ಲ ಬಿಟ್ಟು ಸುಖವಾಗಿರಬಹುದು."

" ಹಾಗಾದರೆ ಏನ್ಮಾಡ್ಬೇಕು ? "

" ನಾಳೆ ಭಾನುವಾರ ಸಂಜೆ ಚೌಕದ ಹತ್ತಿರ ಬಾ, ನಾ ಇರ್ತೀನಿ. ಮೊದಲೇ ಆ ಮನೆಗೆ ಎಲ್ಲ ನೋಡಿಕೊಂಡು ಬಂದಿರ್ತೀನಿ. ಲಕ್ಷಮ್ಮನ ಹತ್ತಿರಾನೂ ಎಲ್ಲ ಮಾತಾಡಿರ್ತೀನಿ. ನನ್ನ ಜೊತೆ ನಂಜುಂಡಿ ಇರ್ತಾನೆ—ನಂಜುಂಡಿ ಗೊತ್ತ, ಲಕ್ಷಮ್ಮನ ಮನೆಯೋನು ? "

" ಗೊತ್ತು. ಕರಿಯಪ್ನೋರು ಇಲ್ಲಿಗೆ ಬಂದಿದ್ರಾ ಅನ್ಕೊಂಡು ನಮ್ಮ ಮುಂಡಿಗೆ ಬಂದು ನಾರಾಯಣರಾಯರ ಹತ್ತಿರ ಏನೇನೋ ಗುಟ್ಟುಗುಟ್ಟಾಗಿ ಮಾತಾಡ್ಕೊಂಡ್ ಹೋಗ್ತಿದ್ದ. ಈವಾಗರ್ಥವಾಯ್ತು, ಅವನು ಯಾರ ಹತ್ತಿರ ಬರ್ತಿದ್ದ, ಯಾತಕ್ಕೆ ಬರ್ತಿದ್ದ ಅನ್ನೋದು."

" ಸರಿ, ಗೊತ್ತಲ್ಲ ಅವನು. ಅವನೂ ಇಲ್ಲೇ ಇರ್ತಾನೆ. ಅವನ ಜೊತೆ ಅವರ ಮನೆಗೆ ನೀ ಹೋಗು....ಏನೂ ಮಾಡ್ಬೇಡ. ನಂಜುಂಡಿ ಬಾಗಿಲು ತೆಗೆದು ಸೀದಾ ಅಡಿಗೆಮನೆಗೆ ಹೊರಟುಬಿಡ್ತಾನೆ. ನೀನು ಪಡಸಾಲೇಲಿ ನಿಂತ್ಕೊಂಡು, ' ನಾರಾಯಣರಾಯರೇ ! ' ಅಂತ ಕೂಗು. ನಾರಾಯಣ ರಾಯರು ಬರ್ತಾರೆ. ನಿನ್ನನ್ನು ನೋಡಿದ ಕೂಡಲೆ ಅವರು ತಬ್ಬಿಬ್ಬಾಗ್ತಾರೆ!.... ' ಇಲ್ಲಿದಾರೇಂತ ಯಾರೋ ಅಂದರು. ಅದಕ್ಕೇ ಬಂದೆ, ಸರಿ ' ಅಂತ ದುರು

ಗುಟ್ಟಕೊಂಡು ನೋಡಿ, ಬಂದುಬಿಡು. ನೀನು ವಾಪಸು ಬರುವವರೆಗೂ ನಾನು ಇಲ್ಲೇ ಕಾಯ್ತಾ ಇರ್ತೀನಿ. ಮುಂದಿನ ಕೆಲಸ ನನಗಿರಲಿ."

" ಸರಿ, ಆಮೇಲೇ....ನ-ನ್ನ-ವಿ-ಷ-ಯ...."

" ನಂಗೊತ್ತಪ್ಪ. ಒಳ್ಳೆ ರತ್ನದಂಥಾ ವಸ್ತು !....ನಾ ಹೇಳಿದಷ್ಟು ಕೆಲಸ ಮೊದಲುಮಾಡು, ಆಮೇಲೆ ಮುಂದಿನ ಕೆಲಸ. ಅದೇ ಬಿಸಿನೆಸ್ ಮಾಡೋ ನಂಗೆ ನೀಗೋಗರ್‍ಕ್ಕೊಳ್ಬೇಕಾದ್ದೇನಿಲ್ಲ. ನಾ ಆಗಲೇ ಹೇಳಿದ್ನಲ್ಲ—ಈ ಚಿಲ್ಲರೆ ನೆಲ್ಲ ಬಿಟ್ಬಿಟ್ಟು ಸುಖವಾಗಿರಬಹುದು. ಭಾನುವಾರ ಸಾಯಂಕಾಲ ಚೌಕದಲ್ಲಿ ನಾ ನಿನ್ನನ್ನ ನೋಡ್ತೀನಿ. ಆವಾಗ ಮುಂದಿನ ಮಾತು. ಈವಾಗ್ಹೊತ್ತಾಯ್ತು. ನಾನು ಡ್ಯೂಟಿ ಮೇಲಿದೀನಿ. ಪೇಟೆ ಬೀದೀಲಿ ಸ್ವಲ್ಪ ಕೆಲಸ ಇತ್ತು ಅಂತ ಕೇಳ್ಕೊಂಡು ಬಂದಿದ್ದೆ....ಆಗಲೆ ಒಂಭತ್ತು ಗಂಟೆ ಸಮಯ...." ಎಂದು ಕರಿಯಪ್ಪ ತನ್ನ ರುಮಾಲನ್ನೂ ಅಂಗಿಯನ್ನೂ ಸರಿಪಡಿಸಿಕೊಳ್ಳುತ್ತ ಮೇಲೆದ್ದ. ಯೋಚನೆಯಲ್ಲಿಯೆ ಮಗ್ನನಾಗಿದ್ದ ನಾಗರಾಜ ಅವನ ಹೆಜ್ಜೆಯೊಡನೆ ತನ್ನ ಹೆಜ್ಜೆಯನ್ನೂ ಹಾಕಿದ.

* * * *

ಮನೆ ತಲಪಿ ಪಡಸಾಲೆಯಲ್ಲಿ ಹೆಜ್ಜೆಯಿಟ್ಟಾಗ ತಂದೆಯ ಕೋಣೆಯ ದೀಪ ಕಾಣಿಸಿತು. ನಂಜಪ್ಪಶೆಟ್ಟರು ಮಂಚದ ಮೇಲೆ ಒರಗುದಿಂಬಿಗೆ ಒರಗಿ ಮಲಗಿದ್ದರು. ಕಾಲಿನ ಸಪ್ಪಳ ಕೇಳಿ,

" ಯಾರು ? "

" ಯಾರು ಇಲ್ಲ—ನಾನು."

" ನಾಗೂಸಾ—ನಾಗಣ್ಣಾ, ಬಾ ಇಲ್ಲಿ "—ಅಕ್ಕರೆಯ ಕೂಗು, ಯೋಚನೆಯಲ್ಲಿ ಮಗ್ನನಾಗಿದ್ದರೂ ನಾಗರಾಜನನ್ನು ಕೋಣೆಗೆ ಕರೆದೊಯ್ಯಿತು.

" ಏನಪ್ಪಯ್ಯಾ ? " ಎಂದ.

" ಏನೂ ಇಲ್ಲ, ಅಣ್ಣಯ್ಯ. ಎಲ್ಲಿ ಹೋಗಿದ್ಯಪ್ಪ. ಆ ಮಾದಪ್ಪನೋರ ಮನೆ ಮಹೇಶ್ವರನ್ನ ನೋಡಬಾರ್‍ದ, ಅಪ್ಪ ಅಯೋಗ್ಯ ಆದರೂ ಮನೆ ಅಂಗಡಿ ಎಲ್ಲ ನೋಡ್ಕೊಂಡು ಚಿನ್ನದ ಹಾಗೆ ಬಾಳ್ತಾ ಇರೋದ....ನಂದೂನ್ನೋ ವಸ್ತು ಇದ್ರೂನೂವೆ ನಾನು ಇನ್ನೊಬ್ಬರ ಕೈಲಿ ಬೀಗದಕೈ ಕೊಟ್ಟು ಸತ್ತ ಹೆಣದಂತೆ ಬಿದ್ದಿರಬೇಕಲ್ಲಪ್ಪಾ, ದೇವರು ಯಾಕಾದರೂ ನನ್ನನ್ನು ಇನ್ನೂ ಇಟ್ಟಿದಾನೋ....

ನಾನೆಷ್ಟು ಸಲ ಹೇಳಲಿ ಇದನ್ನ. ನಿನ್ನ ಮುಂದಿನ ಯೋಚನೆ ಮಾಡು ನಾಗಣ್ಣಾ, ಹೀಗೇ ಎಷ್ಟು ದಿನಾಂತ ಕಳೀತೀಯಾ ?.... ನಿನಗೇನ್ ವಯಸ್ಸಿಲ್ಲವೆ ವಿದ್ಯೆ ಇಲ್ಲವೇ. ಯಾಕಪ್ಪಾ ಹಿಂಗ್ಮಾಡ್ತೀಯೇ....ನಾನೆಷ್ಟು ದಿನ ಇರ್ತೀನಿ ಹೇಳು."

ಗ್ರಾಮಫೋನ್ ರಿಕಾರ್ಡಿನಂತೆ ನಂಜಪ್ಪಶೆಟ್ಟರ ಬಾಯಿ ಈ ಮಾತು ಗಳನ್ನೇ ಅನೇಕ ಬಾರಿ ಆಡಿತ್ತು. ನಾಗರಾಜ ತಲೆ ತಗ್ಗಿಸಿ ನಿಂತಲ್ಲಿಯೇ ನಿಂತು ಪೂರ್ತ ಕೇಳಿ, ಪದ್ಧತಿಯಂತೆ ಮೌನವಾಗಿ ಮಹಡಿಯ ಮೆಟ್ಟಲು ಹತ್ತಿದ.

ದೀಪ ಹಚ್ಚಿ ಮೇಜಿನ ಮೇಲಿಟ್ಟು ಕೋಣೆಯ ಬಾಗಿಲನ್ನು ಮುಂದಕ್ಕೆ ಹಾಕಿ, ಮೇಜಿನ ಮುಂದಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ.

ಕೊಳೆಯಾದ ಮೇಜಿನ ಬಟ್ಟೆಯ ಮೇಲೆ, ದೀಪದ ಬೆಳಕಿನಲ್ಲಿ ನಿಂತಿದ್ದ ಸಿನಿಮಾ ತಾರೆಯೊಬ್ಬಳ ಚಿತ್ರವನ್ನು, ರತ್ನಳ ಯೋಚನೆಯಲ್ಲಿದ್ದ ನಾಗರಾಜನ ಕೈ ತೆಗೆದುಕೊಂಡು ಮೇಜಿನ ಮೇಲೆ ಏಕೊ ಬೋರಲಾಗಿ ಮಲಗಿಸಿತು.

ಸಂಜೆ ನಡೆದ ಸಂಗತಿಯನ್ನೇ ನೆನಸಿಕೊಳ್ಳುತ್ತಿದ್ದ ನಾಗರಾಜನ ಮನಸ್ಸಿನಲ್ಲಿ ನಾನಾ ಯೋಚನೆಗಳುಂಟಾಗಿದ್ದುವು. ಅವನ ಮನಸ್ಸು ಕಲಕಿಹೋಗಿತ್ತು.

ಎರಡು ಮೂರು ವರುಷಗಳಿಂದ ಒಬ್ಬ ಹುಡುಗಿಯ ಸ್ನೇಹಕ್ಕಾಗಿ ಆ ಮನಸ್ಸು ಹಾತೊರೆಯುತ್ತಿತ್ತು. ದುಡ್ಡು ಕೊಟ್ಟು ದೇಹ ಕೊಂಡು ಸುಖಪಡುವುದರಲ್ಲಿ ಆಗಲೆ ಸಾಕಷ್ಟು ತರಬೇತಾದ ಅವನು, ದುಡ್ಡು ಇಟ್ಟುಕೊಂಡೂ ಏನು ಮಾಡಬೇಕೆಂದು ತೋಚದೆ ಕಾಲ ಕಳೆಯುತ್ತಿದ್ದ. ಆ ವ್ಯಕ್ತಿಗೆ ಅಂದು ವಿಚಿತ್ರಾನುಭವವುಂಟಾಗಿತ್ತು.

ಹತ್ತು ರೂಪಾಯಿ ನೋಟು ಜೇಬಿನಲ್ಲಿಟ್ಟುಕೊಂಡು ಸಂಜೆಯೆಲ್ಲ ರತ್ನಳ ಮನೆಯ ಮುಂದೆ ಅಲೆದು ನಿರಾಸೆಗೊಂಡಿದ್ದು, ಸ್ನೇಹಿತನೊಬ್ಬ ದೀಪ ಇಲ್ಲದ ಸೈಕಲ್ ಸವಾರಿ ಮಾಡಿ ಕಾನ್‌ಸ್ಟೇಬಲ್ ಕರಿಯಪ್ಪನ ಕೈಗೆ ಸಿಕ್ಕಿದಾಗ, ನಿರಾಸೆಗೊಂಡ ತಾನು ಆ ದುಡ್ಡಿನಲ್ಲಿ ಒಂದು ರೂಪಾಯಿ ಕೊಟ್ಟು ಆ ಸ್ನೇಹಿತನನ್ನು ಬಿಡಿಸಿದ್ದು, ಆ ಕರಿಯಪ್ಪ ರತ್ನಳ ಮನೆಗೆ ತಮ್ಮನ್ನು ಕರೆದುಕೊಂಡು ಹೋದದ್ದು, ಆ ಮನೆಯ ಮುಂದೆ ನಿಂತಿದ್ದಾಗ ಹರೆಯ ತುಂಬಿದ ರತ್ನ ಮತ್ತು

ಅವಳ ಅಕ್ಕನ ದರ್ಶನವಾದದ್ದು, ಎಲ್ಲಕ್ಕಿಂತ ಮುಖ್ಯವಾಗಿ ಕರಿಯಪ್ಪ ಅನಿರೀಕ್ಷಿತವಾಗಿ ಚಪ್ಪಾಳೆ ಹೊಡೆದು ತನ್ನನ್ನು ಕರೆದುಕೊಂಡು ಹೋಗಿ ಬೆನ್ನೂರು ರಸ್ತೆಯ ಕಲ್ಲು ಬೆಂಚಿನ ಮೇಲೆ ಕುಳಿತು ಬಹಳ ಹೊತ್ತು ವಿಚಿತ್ರ ಸಲಿಗೆಯಿಂದ ಹಿತಚಿಂತಕನಂತೆ ಮಾತಾಡಿದ್ದು—ಎಲ್ಲ ನೆನಸಿಕೊಂಡ.

ತುಂಬ ನಾಚಿಕೆಯಾಯಿತು, ಅಸಹ್ಯವಾಯಿತು.

'ಒಂದು ಹೆಣ್ಣಿನ ಸುಖಕ್ಕಾಗಿ ಒಂದು ಗಂಡುವ್ಯಕ್ತಿಯನ್ನು ಆ ರೀತಿ ಗೋಗರೆದು ಪ್ರಾರ್ಥಿಸಿಕೊಂಡಿದ್ದು ಥೂ, ಸರಿಯಲ್ಲ!' ಎಂದಿತು ಅವನ ಒಂದು ಮನಸ್ಸು.

'ಥೆ, ಇದರಲ್ಲಿ ನಾನೂ ಹಳಬ, ಅವನೂ ಹಳಬ; ಇದೂ ಒಂದು ವ್ಯಾಪಾರ, ಬಿಸಿನೆಸ್ಸು. ನಮಗೆ ಬೇಕಾದ ಸಾಮಾನಿರುವ ಅಂಗಡಿಗೆ ಹೋಗಿ ಕೇಳುವುದಿಲ್ಲವೆ? ಹಾಗೆ—ಕರಿಯಪ್ಪ ಕಮೀಷನ್ ಏಜೆಂಟು; ಅವನಿಗೆ ಕಮೀಷನ್ ಚಿಂತೆ, ನಮಗೆ ಸಾಮಾನಿನ ಚಿಂತೆ. ಇದರಲ್ಲೇನಿದೆ ಅಸಹ್ಯ! ಕೇಳಿದ್ದು ಸರಿ' ಎಂದು ಹೇಳಿತು ಇನ್ನೊಂದು ಮನಸ್ಸು.

'ಏನೇ ಆಗಲಿ, ಇದು ತುಂಬ ವಿಚಿತ್ರ. ಮನುಷ್ಯನಿಗೆ ತಕ್ಕ ನಡತೆ ಅಲ್ಲ. ಒಂದು ಶಿಸ್ತು, ಕಟ್ಟು, ಮೀರಿ ಮನುಷ್ಯ ವರ್ತಿಸಬಾರದು, ಈ ರೀತಿ ಹೊಲಸುಹೊಲಸಾಗಿ ನಡೆಯಬಾರದು' ಎಂದು ಮತ್ತೊಂದು ಮನಸ್ಸು ನುಡಿಯಿತು.

—ಸಭ್ಯಗೃಹಸ್ತ ನಂಜಪ್ಪಶೆಟ್ಟ ತಂದೆ ಆದುದರಿಂದ ಆ ಕರುಳಿನ ಕೊನೆ ಹಾಗೆ ಕೂಗಿತೊ ಏನೊ!

'ಥೆ, ಈ ಜೀವನವೂ ಹೊಲಸು, ಆ ಜೀವನವೂ ಹೊಲಸು! ಎರಡು ಹೆಂಡದ ಪಾತ್ರೆಗಳಲ್ಲಿ ಅಮೃತದ ವಾಸನೆ ಬಾ ಅಂದರೆ ಬಂದೀತೆ! ಅದರ ರುಚಿ ಅನುಭವಿಸಿದ ಜನಕ್ಕೆ ಅದು ಹೆಂಡ, ಹೊಲಸು. ಅದರ ರುಚಿ ಅನುಭವಿಸಿ ಅದರಲ್ಲೇ ಸುಖ ಕಾಣುವವನಿಗೆ ಅದು ಸಾಮಾನ್ಯ, ಸ್ವರ್ಗ. ಇದಕ್ಕೇಕೆ ಇಷ್ಟು ಚಿಂತೆ. ಮುಂದಿನ ಕೆಲಸ ನೋಡು. ಕರಿಯಪ್ಪನ ಕೈ ಬಿಡಬೇಡ. ಕೆಲಸ ಕೆಟ್ಟೀತು,' ಎಂದು ಎಚ್ಚರಿಸಿತು ಇನ್ನೊಂದು ಮನಸ್ಸು.

ಮಲಗಿದ್ದ ಚಿತ್ರಪಟವನ್ನು ಎಡಗೈ ಬೆರಳಿನಲ್ಲಿ ಕುಟ್ಟುತ್ತ, ಮೇಜಿನ ಮೂಲೆಯೊಂದನ್ನು ಕಣ್ಣು ನೋಡುತ್ತಿದ್ದರೂ ಮನಸ್ಸಿನ ಅನೇಕ ರೂಪಗಳ ಕಡೆ

ದೃಷ್ಟಿಯಿಟ್ಟಿದ್ದ ನಾಗರಾಜ, ಸಿದ್ದಣ್ಣನ ಕೂಗು ಕೇಳಿ ಬೆಚ್ಚುಬಿದ್ದ.

"ಉಣ್ಣೋಕ್‌ಬತ್ತೀರಾ?"—ಆ ಪ್ರಶ್ನೆಯನ್ನು ಸಿದ್ದಣ್ಣ ಮಹಡಿಯ ಮೆಟ್ಟಲು ಹತ್ತಿದ ಮೇಲೆ ಎರಡು ಬಾರಿ ಹಾಕಿದ್ದ. ಬಾಗಿಲು ಓರೆಮಾಡಿ ಪುನಃ ಅದೇ ಪ್ರಶ್ನೆ ಹಾಕಿದ.

೯

ಕರಿಯಪ್ಪ ಬಹಳ ಗಟ್ಟಿಗ. ಎಲ್ಲ ಅವನ ಪ್ಲ್ಯಾನಿನಂತೆಯೇ ನಡೆಯಿತು. ಬೆನ್ನೂರು ರಸ್ತೆಯ ಕಲ್ಲುಬೆಂಚಿನ ಮೇಲೆ ಕುಳಿತು ನಾಗರಾಜನೊಂದಿಗೆ ಮಾತಾಡಿದ ಮಾರನೆಯ ದಿನವೇ ಲಕ್ಷಮ್ಮನನ್ನು ಭೇಟಿಮಾಡಿ ಎಲ್ಲ ವಿವರವಾಗಿ ತಿಳಿಸಿದ. ಅದೇಕೊ ಲಕ್ಷಮ್ಮ "ರತ್ನ ಬೇಡ, ಕಮಲು" ಎಂದಳು.

ರತ್ನಳ ಗುಣವನ್ನು ಪರೀಕ್ಷಿಸಿದ, ಮಾತನ್ನು ಕೇಳಿದ ಲಕ್ಷಮ್ಮನ ಮನಸ್ಸು ಇನ್ನೂ ಮುಂದಾಲೋಚನೆಮಾಡಿತ್ತು.

'ರತ್ನ ಇನ್ನೂ ದೊಡ್ಡವಳಾಗಿಲ್ಲ. ಅವಳ ಯೋಚನೆ ಆಮೇಲೆ. ಈಗಲೇ ಹೆಸರಿಟ್ಟರೆ ಕೆಲಸ ಕೆಟ್ಟುಹೋಗುತ್ತದೆ. ಕಮಲು ಏಕೊ ತುಂಬ ಹಟಮಾಡುತ್ತಾಳೆ. ಮೊದಲು ಅವಳನ್ನು ಈ ರೈಲ್ವೆ ಕಂಬಿಯ ಮೇಲೆ ಕೂಡಿಸಬೇಕು. ಅದೇ ಬಹಳ ಕಷ್ಟದ ಕೆಲಸ. ರತ್ನ ಎಷ್ಟಾದರೂ ಕಮಲುವಿಗಿಂತ ಬುದ್ಧಿವಂತೆ, ರೂಪವಂತೆ; ಈ ಹಾದಿಯಲ್ಲಿ ಚೆನ್ನಾಗಿ ಪಳಗಿ ಯಶಸ್ಸು ಗಳಿಸುವ ಲಕ್ಷಣವಂತೆ. ಈಗೇಕೆ ಅವಳ ಚಿಂತೆ' ಎಂದುಕೊಂಡಿತ್ತು.

ಅದೂ ಅಲ್ಲದೆ, ಮಾದಪ್ಪನವರು ಇದ್ದಾಗಲೇ ಒಮ್ಮೆ ಹೊಳೆದ ಒಂದು ಯೋಚನೆ, ಮಾದಪ್ಪ ಇದ್ದಾನಲ್ಲ ಎಂದು ಅಲ್ಲೇ ಉಡುಗಿ ಹೋದುದು ಆತ ಹೋದ ಕೆಲವು ದಿನಗಳಲ್ಲಿಯೇ ಚಿಗಿತು ಮರವಾಗಿ ಬಿಟ್ಟಿತ್ತು. ಅದನ್ನು ಬಲೆಗೆ ಹಾಕಿ, ಅದರಲ್ಲಿಟ್ಟುಕೊಳ್ಳುವ ಶಕ್ತಿ ಈ ಬಲೆಗೇ ಇದೆ ಎಂದು ಆಕೆ ಚೆನ್ನಾಗಿ ನಂಬಿದ್ದಳು.

ಆದುದರಿಂದ ಕರಿಯಪ್ಪ ನಾಗರಾಜನ ಸುದ್ದಿ ಎತ್ತಿದಾಗ, ಅವಳು ಕಮಲು ಹೆಸರು ಹೇಳಿದ್ದಳು.

ಭಾನುವಾರ ಸಂಜೆ, ಹಂಚಿಕೆಯಂತೆ ನಾಗರಾಜ, ಲಕ್ಷಮ್ಮನ ಮನೆ ಪ್ರವೇಶಿಸಿದಾಗ, ದಟ್ಟಿ ಪಂಚೆ ಉಟ್ಟು, ಬಿಳಿಯ ಬನೀನು ಹಾಕಿಕೊಂಡು ಪಡಸಾಲೆಗೆ

ಬಂದ ನಾರಾಯಣರಾಯರು ಸಿಕ್ಕಿಬಿದ್ದರು. ಮುಖ ಪೆಚ್ಚಾಯಿತು. ಕರಿಯಪ್ಪ ಪಾಠ ಹೇಳಿಕೊಟ್ಟಿದ್ದಂತೆ ನಾಗರಾಜ ನಾರಾಯಣರಾಯರನ್ನು ದುರುಗುಟ್ಟಿ ನೋಡಿ, ಆಡಬೇಕಾದುದನ್ನು ಆಡಿ, ಹೊರಗೆ ಬಂದಿದ್ದ. ಚೌಕದಲ್ಲಿದ್ದ ಕರಿಯಪ್ಪನನ್ನು ಕಂಡು ತನ್ನ ಪಾತ್ರ ಮುಗಿಯಿತೆಂದು ಹೇಳಿ, ಮುಂದಿನ ಕೆಲಸ ಮಾಡಬೇಕೆಂದು ಬೇಡಿಕೊಂಡಿದ್ದ. ಕರಿಯಪ್ಪ ತಕ್ಷಣವೆ, ಲಕ್ಷಮ್ಮನ ಮನೆಗೆ ಹೋಗಿ ನಾರಾಯಣರಾಯರನ್ನು ಕಂಡು, 'ಎಂಥ ಕೆಲಸ ಆಗ್ಹೋಯ್ತು ನಾರಾಯಣರಾಯ್ರೆ!' ಎಂದು ಗಾಬರಿ ಹುಟ್ಟಿಸಿಬಿಟ್ಟಿದ್ದ.

ಸಾಹುಕಾರರ ದುಡ್ಡನ್ನು ಸೂಳೆಗಾರಿಕೆಗೆ ಸುರಿಯುತ್ತಿದ್ದ ನಾರಾಯಣರಾಯರು, ಕೆಲಸದ ಬಾಯಿಗೆ ಎಲ್ಲಿ ಮಣ್ಣು ಬೀಳುವುದೋ ಎಂದು ತಬ್ಬಿಬ್ಬಾಗಿದ್ದರು. ಕರಿಯಪ್ಪ, ತಾನು ಹೇಳಿದಂತೆ ಕೇಳಿದರೆ, ಮಾಡಿದರೆ ಎಲ್ಲ ಸರಿಹೋಗುತ್ತದೆಂದು ಹೇಳಿ ನಾರಾಯಣರಾಯರಿಗೆ ಜೀವ ಬರಿಸಿದ್ದ. ತನ್ನ ಸುಖ ಹೊಟ್ಟೆಯಪಾಡು, ಮಾನ ಮೂರನ್ನೂ ಕಾಪಾಡುವ ಅವನ ಏರ್ಪಾಟು ಅವರಿಗೆ ಸರಿಯಾಗಿತ್ತು. 'ಒಂದೇ ಆಸ್ತಿ ಒಂದೇ ಸಾಗರಕ್ಕೆ ಎರಡು ನದಿಗಳ ಮೂಲಕ ಹರಿಯುತ್ತೆ. ಒಬ್ಬರಿಗೊಬ್ಬರು ಬೀಗದ ಕೈ ಆಗೋದರಿಂದ ಬಹಳ ದಿನ ಬ್ರೇಕಿಲ್ಲದೆ ಬೇಕಾದ ಹಾಗೆ ನಡೆಯುತ್ತೆ ಬಿಸಿನೆಸ್ಸು' ಎಂದುಕೊಂಡ ಕರಿಯಪ್ಪ. ಎಲ್ಲ ಕೂಲಂಕಷವಾಗಿ ಯೋಚಿಸಿ ಸೂಚನೆ ಮಾಡಿದ್ದ.

ಮಾದಪ್ಪನವರನ್ನು, ನಾರಾಯಣಶೆಟ್ಟರನ್ನು, ಬಟ್ಟೆಯ ಅಂಗಡಿ ರಾಜಣ್ಣನವರನ್ನು, ಈ ನಾರಾಯಣರಾಯರನ್ನು—ಇನ್ನೂ ಅನೇಕ ಮಹನೀಯರನ್ನು ಸರಿಯಾದ ಪ್ಲ್ಯಾನು ಮಾಡಿ ಬುಟ್ಟಿಗೆ ಹಾಕಿದ್ದ ಕರಿಯಪ್ಪ ಕಮೀಷನ್ ಹೊಡೆಯುವುದರಲ್ಲಿ, ಸುಖಪಡುವುದರಲ್ಲಿ ನಿಸ್ಸೀಮನಾಗಿದ್ದ. ಅವನಿಗೋ ಹೆಂಡರಿಲ್ಲ ಮಕ್ಕಳಿಲ್ಲ, ಯಾರೂ ಇಲ್ಲ. ಹೊತ್ತಿಗೆ ಸರಿಯಾಗಿ ಶಿವಪ್ಪನ ಹೋಟಲಿಗೆ ಹೋಗಿ ಊಟ ಮುಗಿಸಿಬಿಟ್ಟರೆ ಆಮೇಲೆ ಎಲ್ಲಿದ್ದರೆ ಅದೇ ಅವನ ಮನೆ, ಎಲ್ಲಿ ಮಲಗಿದರೆ ಅದೇ ಅವನ ಹಾಸಿಗೆ. ಆದರೂ ಹೆಸರಿಗೆ, ಮಾದಪ್ಪನವರ ಮನೆಯ ಪಕ್ಕದ ಗಲ್ಲಿಯಲ್ಲಿ ಒಂದು ರೂಮು ಮಾಡಿದ್ದ. ಆಗಾಗ ಲಕ್ಷಮ್ಮನ ಮನೆಗೆ ಭೇಟಿ ಕೊಡುತ್ತಿದ್ದ ರತ್ನಳನ್ನು ತಂದು ಬಿಟ್ಟಮೇಲಂತೂ ದಿನಕ್ಕೆ ಒಂದು ಒಂದು ಬಾರಿಯಾದರೂ ಹೋಗೇ ಬರುತ್ತಿದ್ದ.

ಲಕ್ಷಮ್ಮನಿಗೆ ಇವನನ್ನು ಕಂಡರೆ ತುಂಬ ಪ್ರೀತಿ. ಇವನಿಂದ ಅವಳ

ವ್ಯಾಪಾರ ಚೆನ್ನಾಗಿ ನಡೆಯುತ್ತಿತ್ತು. ವಯಸ್ಸಾಗಿದ್ದರೂ, ಹುಮ್ಮಸ್ಸಿನ ಹೊಸ ಗಿರಾಕಿಗಳಿಂದ ತನ್ನ ಬ್ಯಾಂಕಿನ ಹಣವನ್ನು ಬೆಳೆಸುತ್ತಿದ್ದ ಇವನಿಗೆ ಲಕ್ಷಮ್ಮ ಹಣದ ರೂಪದಲ್ಲಿ ಯಾವ ಕಮಿಷನ್ನನ್ನೂ ಕೊಡುತ್ತಿರಲಿಲ್ಲ; ಅವಳ ಪ್ರೇಮ ಅವನಿಗೆ ಮೀಸಲಾಗಿತ್ತು.

ಮಾದಪ್ಪನವರು ಕಣ್ಣು ಮುಚ್ಚಿದ ಮೇಲಂತೂ ಇವನ ನೆರವು ಅವಳ ಹೆಜ್ಜೆಹೆಜ್ಜೆಗೂ ಅಗತ್ಯವಾಗುತ್ತಿತ್ತು. ಹಳೆಯ ಗಿರಾಕಿಗಳಾದ ನಾರಾಯಣ ಶೆಟ್ಟಿ, ಬಟ್ಟೆ ಅಂಗಡಿ ರಾಜಣ್ಣ, ಸೈಕಲ್ ಷಾಪ್ ಸಿಂಗ್ ಇವರುಗಳಿಗೆಲ್ಲ ಏಕೊ ನಿರಾಸಕ್ತಿ ಮೂಡಿಬಿಟ್ಟತ್ತು. ಒಬ್ಬರಲ್ಲ ಒಬ್ಬರಂತೂ ಮೂರು ನಾಲ್ಕು ತಿಂಗಳು ಗಟ್ಟಲೆ ಲಕ್ಷಮ್ಮನಿಗೆ ಮುಖ ತೋರಿಸುತ್ತಿರಲಿಲ್ಲ. ಅವರನ್ನು ಮತ್ತೆ ದಾರಿಗೆ ತಂದು, ಖರ್ಚಿಗೆ ತಕ್ಕ ಜಮಾ ಮಾಡಲು ಕರಿಯಪ್ಪ ಇವಳಿಗಾಗಿ ತನ್ನ ಬುದ್ಧಿ ಯನ್ನೆಲ್ಲ ಖರ್ಚುಮಾಡಬೇಕಾಗಿತ್ತು.

ಇನ್ನು ತನ್ನ ಕತೆ ಮುಗಿಯಿತು, ಬೆಳೆದು ನಿಂತ ಹಕ್ಕಿಗಳಿಗೆ ಗೆಜ್ಜೆ ಕಟ್ಟ ಬೇಕು ಎಂದು ಲಕ್ಷಮ್ಮ ಕರಿಯಪ್ಪನೊಡನೆ ಪ್ರಸ್ತಾಪಿಸಿದಾಗ ಕಮಲುವಿನ ಸ್ವಭಾವದ ಮಾತು ಬಂದಿತ್ತು. 'ಅವಳಿಗೆ ಇದೊಂದೂ ಬೇಡ. ಇದೆಲ್ಲ ದುಡ್ಡಿಗೆ ದೇಹ ಮಾರೋದಂತೆ. ನನಗೆ ಇಷ್ಟವಿಲ್ಲ, ಮದುವೆ ಮಾಡು ಅಂತ ಹಟ ಹಿಡಿದಿದಾಳೆ' ಎಂದು ಲಕ್ಷಮ್ಮ ಹೇಳಿದಾಗ ಕರಿಯಪ್ಪ ನಾಗರಾಜನ ಹೆಸರು ಹೇಳಿ 'ನೋಡೋಣ, ಇದೊಂದು ಸಲ ಪ್ರಯತ್ನಮಾಡಿ' ಎಂದಿದ್ದ. ಮಗಳ ಗುಣವನ್ನು ಚೆನ್ನಾಗಿ ತಿಳಿದಿದ್ದ ಲಕ್ಷಮ್ಮನಿಗೆ ಅನುಮಾನ ಇದ್ದೇ ಇದ್ದರೂ ಕರಿ ಯಪ್ಪನ ಪ್ರೇರಣೆಯಿಂದ, ಪ್ರಯತ್ನ ಮಾಡಲು ಒಪ್ಪಿದಳು.

ಏಜೆಂಟ್ ಹೇಳಿದಂತೆ ನಾಗರಾಜ ನಾರಾಯಣರಾಯರಿಂದ ಐನೂರೈ ವತ್ತು ರೂಪಾಯಿ ತೆಗೆದುಕೊಂಡು ಬಂದ. ಕಮಿಷನ್ ಐವತ್ತು ರೂಪಾಯಿ ಯನ್ನು ಜೇಬಿಗಿಳಿಸಿ, ಕರಿಯಪ್ಪ ಕಮಲುವಿನ ಗೆಜ್ಜೆಪ್ರಸ್ತಕ್ಕೆ ಏರ್ಪಡಿಸಿದ; ಅದರೆ ಅಪರೂಪವಾಗಿ ಸೋತುಬಿಟ್ಟ!

ತಾಯಿಗೂ ಮಗಳಿಗೂ ದೊಡ್ಡ ಜಗಳ ಆಯಿತು. ಕರಿಯಪ್ಪ ಕಮಲು ವಿಗೆ ಸಮಾಧಾನ ಹೇಳಲು ಹೋದಾಗ ಅವನು ಅವಳ ಬಾಯಿಂದ ಸಿಕ್ಕಾಬಟ್ಟೆ ಬೈಗಳನ್ನು ತಿನ್ನಬೇಕಾಯಿತು. ಕೊನೆಗೆ ರತ್ನ "ನೀವು ಹೋಗಿ ಕರಿಯಪ್ಪಣ್ಣ ನಾನು ಹೇಳ್ತೀನಿ ಅವಳಿಗೆ" ಎಂದು ಕರಿಯಪ್ಪನನ್ನು ಹೊರಗೆ ಹೊರಡಿಸಿಬಿಟ್ಟಳು.

ಆದರೆ ಕಮಲುವಿನ ಕಲ್ಲುಮನಸ್ಸಿಗೆ ಅವಳೂ ಸೋಲಬೇಕಾಯಿತು. ಹೋಗಲಿ, ಎರಡು ದಿನ ಸುಮ್ಮನಿರೋಣ ಎಂದು ಎಲ್ಲರೂ ತೆಪ್ಪಗಾದರು.

ಆದರೆ ಐವತ್ತು ರೂಪಾಯಿ ಕಮಿಷನ್ನನ್ನು ಅಡ್ವಾನ್ಸ್ ಆಗಿ ಕರಿಯಪ್ಪನಿಗೆ ಕೊಟ್ಟುಬಿಟ್ಟಿದ್ದ, ಪಶುಕಾಮದ ನಾಗರಾಜ ಸುಮ್ಮನಿರುತ್ತಾನೆಯೆ. ರತ್ನಳಿಗಾಗಿ ಸದಾ ಹಾತೊರೆಯುತ್ತಿದ್ದ ಅವನು ಕಮಲುವಿಗೆ ಒಪ್ಪಿದ್ದೇ ಒಂದು ದೊಡ್ಡ ವಿಷಯ. ಅವನನ್ನು ಒಪ್ಪಿಸಲು ಕರಿಯಪ್ಪ ತನ್ನ ಬುದ್ಧಿಯನ್ನೆಲ್ಲ ಖರ್ಚು ಮಾಡಬೇಕಾಯಿತು.

ಸೋಮವಾರ ಸಂಜೆ, ಚೌಕದಲ್ಲಿ ನಾಗರಾಜನನ್ನು ನೋಡಿದ ಮೇಲೆ, ಇಬ್ಬರೂ ಸೀನಪ್ಪನ ಹೋಟಲಲ್ಲಿ ಸಿಹಿ, ಖಾರ, ಕಾಫಿ ತುಂಬಿಕೊಂಡು ಬೆನ್ನೂರು ರಸ್ತೆ ಹಿಡಿದರು.

" ನಾಗರಾಜ, ಎಲ್ಲ ಆಯ್ತು. ಆದರೆ ಒಂದು ವಿಚಿತ್ರ ಆಗಿಬಿಟ್ಟಿದೆ. ಮುಖ್ಯವಾದ್ದೇ ಬೇಗ ಕೈಗೆ ಸಿಕ್ಕೋ ಹಾಗಿಲ್ಲ—ಬೇಗ ಸಿಕ್ಕೊಲ್ಲ ಅಷ್ಟೆ. ನಾನು ಲಕ್ಷಮ್ಮ, ಕಮಲಮ್ಮ ಎಲ್ಲ ಮೂರು ಗಂಟೆ ಉಪದೇಶ ಮಾಡಿದರೂ ಆ ರತ್ನ ನಮ್ಮ ಮಾತು ಕೇಳಲಿಲ್ಲ. ಆ ಹುಡುಗಿ ಏನೇನೋ ಆಸೆ ಇಟ್ಕೊಂಡಿದೆ.... ಇನ್ನೂ ಹುಡುಗಿ ನೋಡು...."

" ಏನೇನ್ಬೇಕಂತೆ—ಏನಾದರೂ ಒಡವೇನ ? " ಎಂದು ನಾಗರಾಜ ಕಾತರದಿಂದ ಮಧ್ಯೆ ಪ್ರಶ್ನೆ ಮಾಡಿದ.

ಮಾತಾಡಲು ಮೊದಲೇ ಪ್ಲ್ಯಾನು ಮಾಡಿಕೊಂಡಿದ್ದ ಕರಿಯಪ್ಪ ಮುಂದುವರಿಸುತ್ತ " ಇಲ್ಲ, ಒಡವೆ ಆಸೆ ಇದ್ದಿದ್ದರೆ ಇಷ್ಟೇಕೆ ತೊಂದರೆ....ನಿನಗೆ ಹೇಳಿದರೆ ನೀನು ಮಾಡಿಸೋಲ್ಲವೆ ?—ಅದಲ್ಲ. ಆ ಹುಡುಗಿ ಹೇಳೋದು—ಇದೆಲ್ಲ ಬ್ಯಾಡವಂತೆ—ಅವಳು ಬಿಸಿನೆಸ್ ಮಾಡಬೇಕಂತೆ...."

" ಹಾಗಂದ್ರೆ ?...."

" ಬಿಸಿನೆಸ್ಸು—ವ್ಯಾಪಾರ."

" ಯಾವ ವ್ಯಾಪಾರಾನೋ ! "

" ಈಗ ಯುದ್ಧ ನಡೀತಾ ಇದೆ ನೋಡು. ಕಾಶ್ಮೀರದ ಶಾಲು ಹೆಚ್ಚಾಗಿ ಬರ್‍ತಾ ಇಲ್ಲ. ರೇಷ್ಮೆ ಬೆಲೆ ಏರ್‍ತಾ ಇದೆ. ಯಾರೂ ಅದನ್ನು ಮಾರೋಹಾಗಿಲ್ಲ ....ಆಮೇಲೇ, ಈ ಪಚ್ಚಕರ್ಪೂರ ಇದೆ ನೋಡು ಅದು....ಅದೆಂಥದೋ ಆಸಿ

ಡ್ಡಂತೆ, ಉಪ್ಪಂತೆ....ಇವುಗಳನ್ನೆಲ್ಲ ತರಿಸಿ, ಸಮಯ ನೋಡಿ ಹೆಚ್ಚು ಬೆಲೆಗೆ ಮಾರೋದು; ಊರಿಂದೂರಿಗೆ ಸಾಗಿಸಿ ಒಂದಕ್ಕೆ ನಾಲ್ಕು ದುಡ್ಡು ಮಾಡೋದು...."

"ಇದೇನು ವಿಚಿತ್ರ ಕರಿಯಪ್ನೋರೆ! ಸುಖವಾಗಿ ಮನೆಯಲ್ಲಿದ್ದುಕೊಂಡು ತಿಂದ್ಕೊಂಡು, ಉಂಡ್ಕೊಂಡು ಮಜವಾಗಿರೋದ್ಬಿಟ್ಟು ಗಂಡಸರ ಹಾಗೆ ಮೈ ಕೈ ನೋಯಿಸ್ಕೊಂಡು ಬಿಸಿನೆಸ್ ಮಾಡಬೇಕೂನ್ನೋದು. ನೀವು ಅದರ ಕಷ್ಟ ಸುಖ ಎಲ್ಲ ಹೇಳಲಿಲ್ಲವೆ?"

"ಎಲ್ಲ ಹೇಳಿದ್ದಾಯ್ತು. ಆ ಹುಡುಗೀಗೆ ಅದರಲ್ಲಿ ಬಹಳ ಬುದ್ಧಿ. ಈಗಾಗಲೆ ಅವಳು ಕಾಶ್ಮೀರಕ್ಕೆ, ಬೊಂಬಾಯಿಗೆ, ಮದರಾಸಿಗೆ, ಬೆಂಗಳೂರಿಗೆ ಕಾಗದ ಬರೆದು ಇಷ್ಟು ದೊಡ್ಡ ಫೈಲು ಬೆಳೆಸಿಬಿಟ್ಟಿದ್ದಾಳೆ....ಅವಳು ನಮ್ಮ ಮಾತು ಕೇಳಲೇ ಇಲ್ಲ. ಹೆಚ್ಚು ಹೇಳಿದರೆ ನಮ್ಮ ತಾಯಿಯ ಹತ್ತಿರ ಕಳಿಸಿ ಬಿಡು ಅಂತಾಳೆ, ತಾಯಿಗೆ ಕಾಗದ ಬರೆದು ಬಿಡ್ತೀನಿ ಅಂತಾಳೆ, ನಾವು ಅಲ್ಲಿಯ ವರೆಗೂ ಬಿಟ್ಟರೆ ನಮ್ಮ ಕೆಲಸವೆಲ್ಲ ಹಾಳಾಗುತ್ತೆ.

"ಹಾಗಾದರೆ ಈಗೇನು ಮಾಡೋಣ?"

"ಅದನ್ನು ನಾನು ಯೋಚನೆ ಮಾಡಿದೀನಿ........ನೀನು ನಾನು ಹೇಳೋ ಹಾಗೆ ಮಾಡಿದರೆ ಉಪಾಯವಾಗಿ ಒಲಿಸ್ಕೋಬಹುದು ಅವಳನ್ನ....ನಾನೆಲ್ಲ ಪ್ಲ್ಯಾನ್ ಮಾಡಿಬಿಟ್ಟಿದೀನಿ."

"ಓಹೋ....ನೀವ್ ಹೇಳೋ ಹಾಗೇ ಆಗಲಿ, ಅದಕ್ಕೇನು."

"ನೋಡು, ರತ್ನ ಪ್ರಾಯದ ಹುಡುಗಿ. ನಾವು ಈಗ ಅವಳ ಮನಸ್ಸನ್ನು ನೋಯಿಸಿದರೆ ಅದು ನಮ್ಮ ಕೈಬಿಟ್ಟು ಹೋಗುತ್ತೆ. ಅವಳನ್ನು ಬಿಡದ ಹಾಗೆ ಅವಳ ಮನಸ್ಸನ್ನು ನೋಯಿಸದ ಹಾಗೆ ನಾವು ಕೆಲಸ ಮಾಡಬೇಕು. ಅದಕ್ಕೇ ನಾನೊಂದು ಪ್ಲ್ಯಾನ್ ಮಾಡಿದೀನಿ. ಅವಳಕ್ಕ ಕಮಲು ಅಂತ ಇದಾಳೆ.... ನೀನು ಅವಳನ್ನ ನೋಡಿದೀಯಾ?"

"ನೋಡಿದೀನಿ."

"ಅವಳೂ ಬಹಳ ಚೆನ್ನಾಗಿದಾಳೆ—ರತ್ನನಿಗಿಂತ ಬಿಳುಪು, ಎತ್ತರ, ಚೆನ್ನಾಗಿದಾಳೆ. ನಾನು ಏನೇನೋ ಹೇಳಿ ಅವಳನ್ನ ಒಪ್ಪಿಸಿದೀನಿ....ನೀನು ಐನೂರೈವತ್ತು ರೂಪಾಯಿ ತೊಗೊಂಡ್ಬಾ. ಐವತ್ತು ರೂಪಾಯಿ ನನ್ನ ಕೈಲಿ

ಕೊಟ್ಟು ಉಳಿದ ಐನೂರು ರೂಪಾಯೀನ ನಿನ್ನ ಜೇಬಿನಲ್ಲಿಟ್ಟುಕೊಂಡಿರು. ಐನೂರು ಮಾತ್ರ ನಿನ್ನ ಲೆಕ್ಕ."

"ಸರಿಸರಿ ಗೊತ್ತಾಯ್ತು, ಅದಕ್ಕೇನು...."

"ಇನ್ನು ಮುಂದಿನ ಕೆಲಸ ಗೊತ್ತೇ ಇದೆ. ಆ ಹುಡುಗೀನ ಒಪ್ಪಿಸಿ ದೀನಿ...."

"ಆಮೇಲೆ?"

"ಆಮೇಲೇನು, ಹೇಳ್ತೀನಿ ಕೇಳು. ಆ ಹುಡುಗಿಗೆ ಎಷ್ಟು ದಿನಾಂತಿ ರುತ್ತೆ ವ್ಯಾಪಾರದ ಹುಚ್ಚು. ಅದರಲ್ಲೂ ಪ್ರಾಯದ ಹೆಂಗಸು. ಒಂದಲ್ಲ ಒಂದು ದಿನ ದಾರಿಗೆ ಬರಲೇ ಬೇಕು. ಆದ್ದರಿಂದ, ಅವಳ ವ್ಯಾಪಾರಕ್ಕೂ ನೀನೇ ಅಷ್ಟೂ ಇಷ್ಟೂ ಸಹಾಯ ಮಾಡ್ತಾ ಇದ್ದರೆ—ರಿಸರ್ವ್ ಮಾಡ್ಕೊಂಡ್ ಹಾಗೆ—ಹೆಚ್ಚೇನೂ ಬೇಡ, ಇಪ್ಪತ್ತು ಮೂವತ್ತು ಇಷ್ಟಾನುಸಾರ ಹಾಕ್ತಾ ಇದ್ದರೆ, ಆ ನೆಪದಲ್ಲಿ ಅವಾಗಾವಾಗ ಮಾತಾಡ್ಕೊಂಡು, ಸಮಯ ನೋಡಿ ದಾರಿಗೆ ತಂದ್ಕೋಬಹುದು. ಅಲ್ಲಿಯ ವರೆಗೆ ನೆಪಕ್ಕೆ ಈ ಹುಡುಗಿ ಇದ್ದೇ ಇರುತ್ತೆ ಇದು ನನ್ನ ಪ್ಲ್ಯಾನು—ಹೇಗಿದೆ?"

ಆಸಕ್ತಿಯಿಂದ ಆಲಿಸುತ್ತಿದ್ದ ನಾಗರಾಜನಿಗೆ, ತನ್ನ ಆಪ್ತ ಹಿತಚಿಂತಕ ನೊಬ್ಬ ತನಗಾಗಿ ಎಷ್ಟು ಬುದ್ಧಿ ಓಡಿಸಿ ಕೆಲಸ ಮಾಡುತ್ತಿದ್ದಾನೆ! ಎನ್ನಿಸಿತು. 'ಪಾಪ, ಕರಿಯಪ್ಪ ಎಷ್ಟು ಕಷ್ಟಪಡುತ್ತಿದ್ದಾನೆ. ಅವನಿಗೆ ಕೊಡೋ ಐವತ್ತು ರೂಪಾಯಿ ಸಾರ್ಥಕ ಪಡೆಯುತ್ತೆ' ಎಂದುಕೊಂಡ.

"ಸರಿ ಕರಿಯಪ್ಪನೋರೆ, ನೀವು ಹೇಳಿದ ಹಾಗೆ. ನಾರಾಯಣರಾಯರಿಗೆ ಇನ್ನೊಂದ್ಸಲ ನೀವು ಹೇಳಿಬಿಟ್ಟರೆ, ನಾನು ರಸೀದಿಗೆ ರುಜು ಹಾಕಿ ಯಾವಾಗ ಬೇಕಾದರೂ ಇಸ್ಕೊಂಡು ಕೊಡ್ತೀನಿ....ಅವರಿಗೆ ಇನ್ನೊಂದ್ಸಲ ದಯವಿಟ್ಟು ಹೇಳಿಬಿಡಬೇಕು."

"ನಾರಾಯಣರಾಯರಿಗೆ ಹೇಳೋದೆಲ್ಲ ಹೇಳಿ ಆಗಿಬಿಟ್ಟಿದೆ. ಅವರು ನನ್ನ ಕೈಲಿದಾರೆ, ನಿನಗ್ಯಾಕ್ ಅವರ ಯೋಚನೆ....ಹಾಗಾದರೆ ನೀನು ನಾಳೆ ಸಂಜೆ, ನಾರಾಯಣರಾಯರನ್ನು ಕಂಡು ಐನೂರು ರೂಪಾಯಿ ತೊಗೊಂಡು ಬಂದ್ಬಿಡು. ನಾನು ಚೌಕದಲ್ಲಿ ಕಾಯ್ತಾ ಇರ್ತೀನಿ" ಎಂದ.

ಕಾಮದ ದೇಹದ, ದುಂಬಿಯ ಮನಸ್ಸಿನ, ಮೇಣದ ಬುದ್ಧಿಯ ನಾಗರಾಜ

ಕರಿಯಪ್ಪನ ಸೂತ್ರದ ಬೊಂಬೆ ಆದ; ಹಾವಾಡಿಗನ ಹಾವಾದ. ಕರಿಯಪ್ಪನ ಮಾತು, ಏರ್ಪಾಟು ಎಲ್ಲ ಅವನಿಗೆ ಒಂದು ವಿಚಿತ್ರ ಆನಂದವನ್ನುಂಟುಮಾಡಿದ್ದುವು.

ಮೈಗೆಲ್ಲ ' ಸ್ಟೂಡಿಯೊ ' ಸೆಂಟ್ ಬಳಿದುಕೊಂಡು, ಅಗಸನ ಮನೆಯಿಂದ ಬಂದ ಸಿಲ್ಕ್ ಷರಟು ಹೊಸ ನೇವಿ ಬ್ಲ್ಯೂ ಕೋಟು, ಕಾಲಿಗೆ ಮಿಂಚುವ ಕರಿಯ ಷೂ ಹಾಕಿಕೊಂಡು ನಾಗರಾಜ ಕೋಣೆಯಲ್ಲಿ ಸಿದ್ಧನಾದ. ಚೆನ್ನಾಗಿ ಉಟ್ಟಿದ್ದ ಫಿನ್ಲೆ ಪಂಚೆಯ ನೆರಿಗೆಯನ್ನು ಜೋಡಿಸಿ ಉಜ್ಜುತ್ತಿದ್ದ ಎರಡು ಕೈಗಳ ಮೂರು ಹರಳುಂಗುರಗಳನ್ನು ನೋಡಿ ಹಿಗ್ಗುತ್ತಿದ್ದ ಅವನ ಹೃದಯ, ಮನಸ್ಸನ್ನೆಲ್ಲೋ ಬಿಟ್ಟು, ಬಾಯಿಯಲ್ಲೇನೋ ಹಾಡಿಸಿ, ತಾನೆಲ್ಲೋ ಓಲಾಡುತ್ತಿತ್ತು. ಜಸ್ಮಿನ್ ಕೊಬ್ಬರಿಯಣ್ಣೆ, ಪೋಮೇಡ್ ಹಚ್ಚಿ ತೀಡಿತೀಡಿ ಹಿಂದಕ್ಕೆ ಕೂಡಿಸಿದ್ದ ನೀಳವಾದ ತಲೆಗೂದಲು ಕೆದರಿದೆಯೊ ಏನೊ ಎಂದು ಕನ್ನಡಿ ನೋಡಿಕೊಂಡಾಗ, ಬೆಳಗ್ಗೆ ತಾನೇ ಬ್ಲೇಡು ಆಡಿಸಿದ ಮೂಗಿನ ಕೆಳಗೆ, ಕೆನ್ನೆಯ ಮೇಲೆ ಹನಿಹನಿಗೂಡಿತ್ತು. ಜೇಬಿನಲ್ಲಿದ್ದ ಬಿಳಿಮಲ್ಲಿನ ಕರವಸ್ತ್ರದಿಂದ ಮುಖವನ್ನೊರಸಿಕೊಂಡು, ಇನ್ನೊಮ್ಮೆ ಕೂದಲಿಗೆ ಪಾಲಿಷ್ ಮಾಡಿ, ನಾಗರಾಜ ಒಳಜೇಬನ್ನು ಮುಟ್ಟಿ ನೋಡಿಕೊಂಡ. ಹಸುರು ವಸ್ತ್ರದಲ್ಲಿ ಕಟ್ಟಿದ್ದ ಐನೂರು ರೂಪಾಯಿಯ ಕಂತೆ ಜೇಬಿನಲ್ಲಿ ಬೆಚ್ಚಗೆ ಕುಳಿತಿತ್ತು. ಎಡಜೇಬಿನಲ್ಲಿ ಕೈಹಾಕಿ ನೋಡಿಕೊಂಡ. ಕರಿಯಪ್ಪನ ಬಾಬ್ತು ಐದು ಹತ್ತು ರೂಪಾಯಿ ನೋಟುಗಳು ಇನ್ನೂ ಎರಡು ನೋಟುಗಳೊಡನೆ ಸುರಕ್ಷಿತವಾಗಿತ್ತು.

ಚೌಕದಲ್ಲಿದ್ದ ಕರಿಯಪ್ಪನನ್ನು ಭೇಟಿಮಾಡಿ, ಅವನ ಜೇಬಿಗೆ ಐವತ್ತು ರೂಪಾಯಿ ಇಳಿಬಿಟ್ಟು, ಅವನೊಡನೆ ಲಕ್ಷಮ್ಮನ ಮನೆಯ ಪಡಸಾಲೆಯನ್ನು ಪ್ರವೇಶಿಸಿದಾಗ, ಹದಿನೇಳು ವರ್ಷದ ಸುಂದರಿ ರತ್ನ ಅಲ್ಲಿಯೆ ಒಂದು ಮೂಲೆಯಲ್ಲಿದ್ದ ಮೇಜಿನ ಹತ್ತಿರ ಯಾವುದೋ ಕಾಗದವನ್ನು ಓದುತ್ತ ಕುಳಿತಿದ್ದಳು. ಕರಿಯಪ್ಪ ಮೊದಲು ಬಂದುದರಿಂದ ಹಿಂದೆ ಒಬ್ಬ ಅಪರಿಚಿತ ಇದ್ದಾನೆಂಬ ಅರಿವಿಲ್ಲದೆ,

" ಕರಿಯಪ್ಪಣ್ಣ ಮಾದಪ್ಪನೋರ ಅಂಗಡೀಲಿ ಕೆಮಿಕಲ್ಸ್ ಮಾರ್‍ತಾರಾ?" ಎಂಬ ಪ್ರಶ್ನೆ ಹಾಕಿ, ಎಂದಿನಂತೆ ನಸುನಗುತ್ತ ಎದ್ದು ಬಂದಳು.

ಕರಿಯಪ್ಪ ಉತ್ತರ ಕೊಡದೆ, ಬೀದಿಯ ಬಾಗಿಲ ಕಡೆ ತಿರುಗಿ " ಬನ್ನಿ

ಸಾಹುಕಾರ್ರೆ, ಪರವಾಯಿಲ್ಲ—ಎಲ್ಲ ನಿಮ್ಮೋರೆ" ಎಂದ.

ರತ್ನಳ ನಗು ಮಾಯವಾಯಿತು. ಯಾರು ಬಂದರೋ ನೋಡಬೇಕೆಂಬ ಕುತೂಹಲದಿಂದ ಇನ್ನೊಂದು ಹೆಜ್ಜೆ ಮುಂದೆ ಬಂದು ಬೀದಿಯ ಬಾಗಿಲ ಕಡೆ ನೋಡಿದಳು. ಮೂರು ನಾಲ್ಕು ಸ್ಥಳಗಳಲ್ಲಿ, ಎರಡು ಮೂರು ಬಾರಿ ತನ್ನನ್ನು ದುರುಗುಟ್ಟಿ ನೋಡಿ ತಲೆ ತಗ್ಗಿಸಿಕೊಂಡಿದ್ದ ಆ ಅಪರಚಿತ ಆಸಾಮಿ ಏಕೆ ಬಂದಿದ್ದಾನೆ ಎಂಬುದು ಅವಳಿಗೆ ಚೆನ್ನಾಗಿ ಗೊತ್ತು.

ಕರಿಯಪ್ಪ ಕಾರ್ಯಗತ ಮಾಡುತ್ತಿದ್ದ ಯೋಜನೆಯನ್ನು ಕರಿಯಪ್ಪನೇ ತಯಾರಿಸಿದ್ದರೂ ಲಕ್ಷಮ್ಮ, ರತ್ನ ಇಬ್ಬರೂ ಆ ಯೋಜನಾ ಸಮಿತಿಯ ಸದಸ್ಯರಾಗಿದ್ದರು. ಚಿಕ್ಕಂದಿನಿಂದಲೂ ರತ್ನಳನ್ನು ನೋಡಿ ಪರೀಕ್ಷಿಸಿದ್ದ ಲಕ್ಷಮ್ಮ, ಕರಿಯಪ್ಪ ಅವಳ ಸಲಹೆಸೂಚನೆಗಳಿಗೆ ಬಹಳ ಬೆಲೆ ಕೊಟ್ಟಿದ್ದರು.

ಪಡಸಾಲೆಯನ್ನು ಪ್ರವೇಶಿಸಿದ ನಾಗರಾಜನ ಮುಖವನ್ನೊಮ್ಮೆ ತಲೆಯೆತ್ತಿ ನೋಡಿ ನಸುನಕ್ಕು, ಬಲಗೈಯಲ್ಲಿದ್ದ ಕಾಗದವನ್ನು ಎಡಗೈಗೆ ಸಾಗಿಸಿ, ಇಲ್ಲದ ನಾಚಿಕೆ ಚೆಲ್ಲೀತೆಂದು ಬಲಗೈಯಲ್ಲಿ ಸೆರಗನ್ನೆಳೆದು ತಲೆಯ ಮೇಲೆ ಹೊದೆದುಕೊಳ್ಳುತ್ತ ಒಳಗೆ ಓಡಿಹೋದಳು.

ನಾಗರಾಜನಿಗೆ ವಿಚಿತ್ರ ಅನುಭವವಾಯಿತು.

ಇದುವರೆಗೂ ತನ್ನ ಮುಖ ಕಂಡರೆ ದುರುಗುಟ್ಟಿಕೊಂಡು ನೋಡುತ್ತಿದ್ದ ಆ ಕಣ್ಣು ನಕ್ಕು ನಗಿಸಿ, ನಾಚಿ ನಲಿದು, ತೆರೆಯ ಹಿಂದೆ ಮಾಯವಾಯಿತು. ಕಣ್ಣು ತುಂಬ ಅರಳಿದ ಹರೆಯದ ಆ ಹೂ ಹೃದಯಕ್ಕೆ ಆನಂದವನ್ನುಂಟುಮಾಡಿತ್ತು. ಬಲಗೈ ಸೆರಗೆಳೆದು ಹಿಂದಲೆಯ ಮೇಲೆ ಹೊದಿಸಿಕೊಂಡಾಗ, ಜೋತಾಡುತ್ತಿದ್ದ ನೀಳವಾದ ಜಡೆಯ ಕೊನೆ—ಚೇಳಿನ ಕೊಂಡಿಯಂತೆ—ತುಂಬು ನಿತಂಬದ ಮಧ್ಯೆ ನಿಂತು ಇಣಿಕಿ ನೋಡುತ್ತಿತ್ತು. ನಡೆದರೂ ಓಡಿದಂತೆ ಕಂಡಾಗ ಅವಳ ಕಾಲು ಚೈನಿನ ಝುಲ್‌ಝುಲ್ ಶಬ್ದ ನಾಗರಾಜನಿಗೆ ಮೋಡಿ ಹಾಕಿತ್ತು.

ಇಷ್ಟವಿಲ್ಲದ ಹೆಣ್ಣು ನಸುನಕ್ಕು ಮರೆಯಾದುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಆದರೆ ಕರಿಯಪ್ಪ ಅವಳ ವಿಚಿತ್ರ ಗುಣವನ್ನು ಚೆನ್ನಾಗಿ ವಿವರಿಸಿದ್ದ. ಅವಳ ಆ ಕಣ್ಣಿನ ನೋಟವನ್ನು, ನಸುನಗುವನ್ನು, ತುಂಬಿದ ನಾಚಿಕೆಯನ್ನು ನೋಡಿದ ಇವನಿಗೆ ಅವಳನ್ನು ಒಲಿಸಿಕೊಳ್ಳುವುದು ಕಷ್ಟವಾಗಿ

ತೋರಲಿಲ್ಲ. ಈ ರಸಮಯ ಸನ್ನಿವೇಶವನ್ನು ನೋಡಿದ ಮೇಲಂತೂ ಈ ದೇಹಕ್ಕಾಗಿ ಎಷ್ಟು ಹಣ ಸುರಿದರೂ ಕಡಮೆಯೇ, ಎನ್ನಿಸಿತು.

ಪಡಸಾಲೆಯಲ್ಲಿ ಕರಿಯಪ್ಪ, ನಾಗರಾಜ, ಲಕ್ಷಮ್ಮನೊಡನೆ ಕುಳಿತು ಮಾತುಕತೆ ನಡಸಿದರು. ಮನೆಯಲ್ಲಿ ಕಮಲುವಿನ ಸುಳಿವೇ ಕಾಣಿಸಲಿಲ್ಲ.

ಐನೂರು ರೂಪಾಯಿಯ ಕಂತೆಯನ್ನು ಕೈಗೆ ತೆಗೆದುಕೊಂಡ ಲಕ್ಷಮ್ಮ "ನಾಳೆ ಸಾಯಂಕಾಲ ಇವರು ಇಷ್ಟು ಹೊತ್ತಿಗೆ ಬಂದರೆ ಮುಂದಿನ ಮಾತಾಡಬಹುದು" ಎಂದು ಎದ್ದಳು. ಕರಿಯಪ್ಪ ನಾಗರಾಜನೊಡನೆ ಎದ್ದು ಹೊರಟು ಹೋದ.

ಮಾರನೆಯ ದಿನ, ನಾಗರಾಜ ಊಹಿಸಿದ್ದಂತೆ ನಡೆಯಲಿಲ್ಲ. ಮಗಳೊಡನೆ ಜಗಳವಾಡಿ ವಾದಿಸಿ ಸೋತುಹೋದ ಲಕ್ಷಮ್ಮ ಐನೂರು ರೂಪಾಯಿಯ ಕಂತೆಯನ್ನು ವಾಪಸು ಕೊಡಲು ಅವನನ್ನು ಬರಮಾಡಿಕೊಂಡಂತಾಗಿತ್ತು. ಮನಸ್ಸಿಗೆ ತುಂಬ ಬೇಸರವಾಯಿತು. ಆದರೆ ಕರಿಯಪ್ಪನ ಮಾತು ಸಮಾಧಾನಪಡಿಸಿತು. "ಆಗಲಿ ನೋಡೋಣ ಬಾ" ಎಂದು ಹೇಳಿ ಹೊರಗೆ ಕರೆದುಕೊಂಡು ಹೋದ ಕರಿಯಪ್ಪನ ನುಡಿ ನಂಬಿಕೆಯನ್ನುಳಿಸಿತು; ಆಸೆಯನ್ನು ಬೆಳಸಿತು.

ನಾಗರಾಜ ಮನೆಗೆ ಬಂದು, ಎಂದಿನಂತೆ ತಂದೆಯ ಬಾಯಿಯಲ್ಲಿ ಸಹಸ್ರನಾಮ ಕೇಳಿ, ಊಟದ ಶಾಸ್ತ್ರ ಮುಗಿಸಿ, ಕೋಣೆ ಸೇರಿ, ಹಾಸಿಗೆಯ ಮೇಲೆ ಯೋಚನೆ ಮಾಡಲು ಮಲಗಿಕೊಂಡಾಗ ಅವನಲ್ಲಿ ವಿಚಿತ್ರ ಬದಲಾವಣೆಯಾಗಿತ್ತು. ತನ್ನ ರತ್ನ ಇರುವ ಆ ಲಕ್ಷಮ್ಮನ ಮನೆ ಅವನಿಗೆ ಆಗಲೆ ತುಂಬ ಒಗ್ಗಿಹೋಗಿತ್ತು. ತಾನು ಶಿಸ್ತಾಗಿ ಉಡುಪು ಹಾಕಿಕೊಂಡು ಕರಿಯಪ್ಪನೊಡನೆ ಪಡಸಾಲೆಯನ್ನು ಪ್ರವೇಶಿಸಿದಾಗ, ಅವಳು ಕೇವಲ ಆರು ಅಡಿ ದೂರದಲ್ಲಿ ನಸುನಗುತ್ತ ನಿಂತುದು ಅಳಿಸದ ಚಿತ್ರವಾಗಿ ಅವನ ಮನಸ್ಸಿನಲ್ಲಿ ನೆಲಸಿಹೋಗಿತ್ತು. 'ನಾನು ಈಗಲೇ ಸಿಕ್ಕಲಾರೆ' ಎಂಬುದನ್ನು ಸೂಚಿಸಲೊ ಏನೊ, ಅವಳು ಮುಸುಕನ್ನೆಳೆದುಕೊಂಡು ನಡುಮನೆಗೆ ಓಡಿದಳು. 'ಎಲ್ಲಿಗೆ ಹೋದೀಯೆ, ದುಡ್ಡಿನ ದೊಡ್ಡಪ್ಪ, ನಿನ್ನ ದೊಡ್ಡಪ್ಪ ಕರಿಯಪ್ಪ ನನ್ನ ಕೈಯಲ್ಲಿರುವಾಗ ನೀನು ಎಲ್ಲಿಗೆ ಹೋದೀಯೆ!' ಎಂದುಕೊಂಡು ನಾಗರಾಜ, ಕಾಲು ಕೆಳಗಿದ್ದ ರಗ್ಗನ್ನು ಮೈಮೇಲೆಳೆದುಕೊಂಡ.

ಆದರೆ ನಿದ್ದೆ ಬಂದೀತೆ! ತನಗೆ ಗೊತ್ತುಮಾಡಿದ್ದ ಕಮಲುವಿನ ಚಿತ್ರ ಕಣ್ಣು ಮುಂದೆ ನಿಂತಿತು. ನಾಗರಾಜ ಅವಳನ್ನು ಐದಾರು ಬಾರಿ ಕಂಡಿದ್ದ. ಮೂರು ವರುಷಗಳ ಹಿಂದೆ ಕಾಮನ ಚಪ್ಪರದಲ್ಲಿ ಕುಣಿಯುತ್ತಿದ್ದಾಗ ಅವಳು ರೂಪದಲ್ಲಿ ರತ್ನಳಿಗೆ ಸಮವಾಗಿ ಕಂಡಳು. ದೊಡ್ಡವಳಾದ ಕಮಲು, ಹದ್ದು ಮೀರಿಸುವ ಹರೆಯಲ್ಲಿದ್ದ ನಾಗರಾಜನಿಗೆ ಒಮ್ಮೆ ರತ್ನಳಿಗಿಂತ ರೂಪವತಿಯಾಗಿ ಕಂಡಳು. ಮಾಗಿದ ದೇಹದ ನಿಲುವು, ಹರೆಯ ತುಂಬಿದ ಎದೆ, ನೃತ್ಯಪದ್ಧತಿಯ ಕಣ್ಣಿನ ಆಟ, ತುಟಿಯ ನಸುನಗು, ಕೊರಳಿನ ಒಲಪು, ಅವನನ್ನು ತುಂಬ ಆಕರ್ಷಿಸಿದುವು. ಆದರೆ ಇವೆಲ್ಲ ಒಂದು ತೂಕ ಆದರೆ, ರತ್ನಳ ಆ ಎರಡು ಕಣ್ಣೇ ಒಂದು ತೂಕ. ಅವಳು ಕಮಲಳನ್ನು ಬೆಳ್ಳಗಿಲ್ಲದಿದ್ದರೂ ಎತ್ತರವಿಲ್ಲ ದಿದ್ದರೂ ಆ ದೇಹದಲ್ಲಿ ಒಂದು ವಿಚಿತ್ರ ಸೊಗಸಿದೆ. ಅವಳ ದುಂಡುಮುಖದ ಮಧ್ಯೆ, ಮಾಟವಾಗಿರುವ ನೀಳವಾದ ಮೂಗಿನ ಮೇಲೆ ಅಕ್ಕಪಕ್ಕದಲ್ಲಿ ಬೆಳಗುವ ಆ ದುಂಬಿಗಣ್ಣು ದುಂಬಿಯಂತೆ ಚಂಚಲ ನೋಟ ಬೀರಿದಾಗ, ಈ ಚಂಚಲ ಹೃದಯ 'ಹಾ!' ಎಂದಿತ್ತು. ಹೆಣ್ಣು, ಹರೆಯ ಎರಡಕ್ಕಾಗಿ ಹಾತೊರೆಯುತ್ತಿದ್ದ ಈ ಹುಚ್ಚುದೇಹದ ಕಣ್ಣು ಒಮ್ಮೆ ಅವಳ ಮೇಲೆ ಒಮ್ಮೆ ಇವಳ ಮೇಲೆ ಕಾಮದ ನೋಟ ಬೀರಿತ್ತು. ಬಾಗಿಲ ಹತ್ತಿರ ಬಂದ ರತ್ನ ಈ ಮುಖದ ಮೇಲೆ ಅಸಹ್ಯದೃಷ್ಟಿ ಬೀರಿದಾಗ ಅವಳ ಮೇಲಿದ್ದ ಆ ನೋಟ ಕಮಲಳ ಮೇಲೆ ಹಾರಿ ಕುಳಿತಿತ್ತು. ಆದರೆ, ಅಲ್ಲಿಯೂ ಅದೇ ರೀತಿಯ ಸ್ವಾಗತ ಬಂದಾಗ, ಅಂದು ನಿರಾಸೆಗೊಂಡರೂ, ಆಸೆ ಬೇರೂರಿಕೊಂಡಿತ್ತು. ಹೋಲಿಸಿ ನೋಡಿದಾಗ ರತ್ನಳೇ ಮೇಲು ಎಂದು, ಹತ್ತಿರದಿಂದ ನೋಡಿದ ಕಣ್ಣು ಅನೇಕ ಬಾರಿ ಹೇಳುತ್ತಿತ್ತು.

ಈ ರೀತಿಯ ಪಶುಹೃದಯದ ಚಂಚಲ ಮನಸ್ಸು ಅಂದು ಎರಡು ಹಕ್ಕಿಗಳ ಮೇಲೆ ಹಾರಾಡಿದರೂ, ಸಂಗೀತ ಹಾಡುವಾಗ, ಹತ್ತಿರ ಬಂದಾಗ ರತ್ನಳೇ ಮೇಲು ಎಂದು ಒಪ್ಪಿಕೊಂಡಿತ್ತು. ಹೃದಯ ಹೆಚ್ಚು ಬಾರಿ ಅವಳ ಕಡೆ ಓಲಾಡುತ್ತಿತ್ತು.

ಆದರೆ ಹರೆಯ ತುಂಬಿದ ದೇಹದ ಕಮಲ, ಹರೆಯಕ್ಕಾಗಿ, ಚೆಲುವು ತುಂಬಿದ ರತ್ನ ಸೌಂದರ್ಯಕ್ಕಾಗಿ ನಾಗರಾಜನ ಮನಸ್ಸನ್ನು ಸೆಳೆದಿದ್ದರು. 'ಹರೆಯ ಚೆಲುವಿಗಿಂತ ಕ್ಷಣಿಕವಾದುದು. ಆ ಚೆಲುವು ನೋಡು, ಅದಕ್ಕೂ ಒಂದು ದಿನ ಹರೆಯ ಬರುತ್ತದೆ' ಎಂದು ಯಾವುದೋ ಒಂದು ರಸಿಕವಾಣಿ

ಅವನಿಗೆ ಸಲಹೆಮಾಡಿತ್ತು.

ಆದರೆ ಕರಿಯಪ್ಪನ ಸಲಹೆ ಈ ಹುಡುಗು ಬುದ್ಧಿಗೆ ಸಾಧುವಾಗಿ ತೋರಿತ್ತು. ಸೋಮಶೇಖರ, ಆನಂದಿ ಮುಂತಾದವರ ಮಾತು ಕೇಳಿ ಬೀದಿಯ ಹೆಣ್ಣುಗಳಿಗೆ ಬಿಡಿಕಾಸು ಸುರಿದು ಸುಖಪಡುವುದಕ್ಕಿಂತ ಕಮಲ, ರತ್ನ ಇಬ್ಬರ ನಡುವೆ ಕಾಲ ಕಳೆಯುವುದು ತುಂಬ ಹಿತಕರವಾಗಿ ಕಂಡಿತ್ತು. ಅದರಲ್ಲೂ ಕರಿಯಪ್ಪನ ಪ್ಲ್ಯಾನು ಕೇಳಿದ ಮೇಲಂತೂ ದೂರಾಲೋಚನೆ ಮಾಡಿದ ಆ ಮನಸ್ಸು, ದೂರಾಲೋಚನೆಯಿಂದ ಕಮಲಳ ಕಡೆ ಹರಿಯುತ್ತಿತ್ತು. 'ಅವಳೂ ಚೆನ್ನಾಗಿದ್ದಾಳೆ. ಹರೆಯ ತುಂಬಿದ ಹೊಸ ಹುಡುಗಿ ಸಿದ್ಧವಾಗಿ ದ್ದಾಳೆ' ಎಂದಿತು; 'ರತ್ನಳಿಗಾಗಿ ಅವಳು' ಎಂದುಕೊಂಡಿತ್ತು. ಆದರೆ ಲಕ್ಷ್ಮಮ್ಮ ಐನೂರು ರೂಪಾಯಿಯ ಕಂತೆಯನ್ನು ವಾಪಸು ಮಾಡಿದಾಗ 'ಇದೇನು ಹಿಗಾಯಿತಲ್ಲ' ಎಂದು ಮನಸ್ಸಿಗೆ ಆಶ್ಚರ್ಯವಾಗಿತ್ತು, ಪಿಚ್ಚೆನಿ ಸಿತ್ತು.

ಕರಿಯಪ್ಪನ ಸಮಾಧಾನದ ಮಾತು, ರತ್ನಳ ಆ ನಸುನಗು, ಇನ್ನೂ ಭರವಸೆ ನೀಡಿದ್ದುವು. ಆದರೂ ಆ ಹರೆಯದ ಹುಚ್ಚುದೇಹ ಹೆಚ್ಚು ದಿನ ಕಾಯುತ್ತ ಕುಳಿತುಕೊಳ್ಳಲು ಇಷ್ಟಪಡಲಿಲ್ಲ. ಕಮಿಷನ್ ಪಡೆದ ಕರಿಯಪ್ಪ ನನ್ನು ಮಾರನೆಯ ದಿನವೇ ಕಂಡು "ಹೇಗಾದರೂ ಮಾಡಿ ಕಮಲಳನ್ನು ಒಪ್ಪಿಸಿ, ಕರಿಯಪ್ಪನೋರೆ" ಎಂದು ಗೋಗರೆದಿತ್ತು. ಅದಕ್ಕೆ ಆತ "ಅದನ್ನು ನನ್ನ ಪಾಲಿಗೆ ಬಿಡು. ದುಡ್ಡೊಂದಿದ್ದರೆ ಏನು ಬೇಕಾದರೂ ಆಗುತ್ತೆ. ಸಮಯ ಬರಬೇಕು. ಅಷ್ಟೆ. ನೀನು ಯೋಚನೆ ಮಾಡಬೇಡ" ಎಂದು ಮತ್ತೆ ಸಮಾಧಾನ ಮಾಡಿದ್ದ.

'ದುಡ್ಡು! ನಾನು ಐನೂರು ರೂಪಾಯಿ ಕೊಟ್ಟುದು ಕಮಲಳಿಗೆ ಸಾಲದೊ, ಏನೊ! ಅದಕ್ಕೇ ಕಸಬಿಗೆ ಒಪ್ಪಿದ ಮನಸ್ಸು ದುಡ್ಡಿಗೆ ಒಪ್ಪಲಿಲ್ಲ. ಅದೇ ಕಾರಣವಾದರೆ ಇನ್ನಷ್ಟೇಕೆ ನಾನು ಕೊಡಬಾರದು?....ಹಾ! ಇನ್ನೊಮ್ಮೆ ಬೇಗ ಪ್ರಯತ್ನ ಮಾಡೋಣ. ಕರಿಯಪ್ಪನಿಗೆ ಹೇಳಿ ನಾರಾಯಣರಾಯರ ಮೂಲಕ ಒಂದು ಸಾವಿರ ರೂಪಾಯಿ ಪಡೆದು ಮತ್ತೆ ಬೇಗದ ಕೈ ತಿರುಗಿ ಸೋಣ' ಎಂದುಕೊಂಡ.

ಈ ಸಲಹೆಯನ್ನು ಮಾರನೆಯ ದಿನವೇ ಕರಿಯಪ್ಪನಿಗೆ ತಿಳಿಸಿದ್ದಾ

ಯಿತು. ಕರಿಯಪ್ಪ "ಬರೀ ಅಷ್ಟು ಕೊಟ್ಟರೆ ಸಾಲದು. ನನ್ನ ಕೈಯಲ್ಲಿ ಇಪ್ಪತ್ತು ರೂಪಾಯಿ ಕೊಡು. ಕಮಲಮ್ಮನ ಗೆಳತಿ ಒಬ್ಬಳಿದ್ದಾಳೆ. ಅವಳೂ ಈ ಕಸಬಿಗೆ ಇತ್ತೀಚೆಗೆ ಇಳಿದೋಳು. ಅವಳಿಗೂ ಇವಳಿಗೂ ಬಹಳ ಬಹಳ. ಅವಳ ಕೈಗೆ ಏನಾದರೂ ಹಾಕಿ ಹೇಳಿಸಿದರೆ ಎಲ್ಲ ಸರಿ ಹೋಗುತ್ತೆ" ಎಂದು, ನಾಮೂಲಿನಂತೆ ಸುಳ್ಳು ಹೇಳಿ ಬೆಂದ ಮನೆಯ ಗಳ ಎಳೆಯುವ ಏರ್ಪಾಟು ಮಾಡಿಕೊಂಡ. ಐನೂರರ ಜೊತೆಗೆ ಇನ್ನೂ ಐನೂರಿಪ್ಪತ್ತು ರೂಪಾಯಿಯನ್ನೂ ಜಮಾಯಿಸಿಕೊಂಡು ನಾಗರಾಜ ಸಿದ್ಧನಾದ. ನಾರಾಯಣರಾಯರು, ಐನೂರೈವತ್ತರ ರಸೀದಿಯನ್ನು ವಜಾ ಮಾಡಿದೆ ಎಂದು ಹೇಳಿ, ಸಾವಿರದ ಒಂದು ರಸೀದಿ ಮಾಡಿಸಿ, ಚಿಲ್ಲರೆ ದುಡ್ಡಿಗೆ ಬೇರೊಂದು ರಸೀದಿ ಬರೆಸಿ ಮೂರನ್ನೂ ಸುರಕ್ಷಿತವಾಗಿ ಮನೆಯಲ್ಲಿಟ್ಟುಕೊಂಡರು. 'ನೀವು ಏನಾದರೂ ಬರೆದುಕೊಳ್ಳಿ, ನನಗೆ ಬೇಕಾದ್ದು ರೂಪಾಯಿ' ಎಂದುಕೊಂಡ ನಾಗರಾಜನ ಕೈ ರಸೀದಿಗೆ ರುಜು ಹಾಕಿ ನೋಟಿನ ಕಂತೆಯನ್ನು ಜೇಬಿನಲ್ಲಿ ಸೇರಿಸಿ ಕೊಂಡಿತ್ತು.

ಆ ದಿನ ಸಂಜೆಯೇ, ಕರಿಯಪ್ಪನ ಏರ್ಪಾಟಿನಂತೆ ಅವನೊಡನೆ ಲಕ್ಷ್ಮಮ್ಮನ ಮನೆಯನ್ನು ಪ್ರವೇಶಿಸಿದಾಗ, ರತ್ನ ಗುಲಾಬಿ ಬಣ್ಣದ ಸೀರೆ ಉಟ್ಟುಕೊಂಡು ಮೇಜಿನ ಮುಂದೆ ಕುರ್ಚಿಯ ಮೇಲೆ ಕುಳಿತು ಏನೋ ಬರೆಯುತ್ತಿದ್ದಳು. ಕರಿಯಪ್ಪನ ಬೂಟ್ಸಿನ ಶಬ್ದ ಕೇಳಿ, ಬಾಗಿಲ ಕಡೆ ತಿರುಗಿ ನೋಡಿದಾಗ, ಕರಿಯಪ್ಪನ ಸೂಚನೆಯಂತೆ ಬಾಗಿಲು ಮುಂದಕ್ಕೆ ಹಾಕುತ್ತಿದ್ದ ಶಿಸ್ತುಗಾರ ನಾಗರಾಜ ಕಣ್ಣಿಗೆ ಬಿದ್ದ. ಕರಿಯಪ್ಪನನ್ನು ಏನೋ ಕೇಳಬೇಕೆಂದಿದ್ದ ಅವಳ ತುಟಿ ನಸುನಕ್ಕು ಸುಮ್ಮನಾಯಿತು. ಮೇಜಿನ ಮೇಲಿದ್ದ ಲೆಟರ್ ಪ್ಯಾಡ್ ಮತ್ತು ಆಗತಾನೆ ಊರಿಂದ ಬಂದಿದ್ದ ಒಂದೆರಡು ಕಾಗದಗಳನ್ನು ಹಿಡಿದುಕೊಂಡು ಒಳಗೆ ಓಡಿದಳು.

ಕರಿಯಪ್ಪ "ರತ್ನಾ ಬಾ ಇಲ್ಲಿ" ಎಂದು ಕರೆದ.

ಆಗಲೆ ನಡುಮನೆಯನ್ನು ದಾಟಿ, ಅಲ್ಲಿದ್ದ ಕೋಣೆಯ ಬಾಗಿಲ ಹತ್ತಿರ ಹೋಗಿದ್ದ ರತ್ನ ಕರಿಯಪ್ಪನ ಕರೆ ಕೇಳಿ ವಾಪಸು ಬಂದಳು.

"ಏನು ಕರಿಯಪ್ಪಣ್ಣ?"—ಕರಿಯಪ್ಪನ ಪಕ್ಕದಲ್ಲಿಯೇ ನಾಗರಾಜ ಶಿಸ್ತಾಗಿ ನಿಂತಿದ್ದರೂ ಕರಿಯಪ್ಪನ ಮುಖವನ್ನು ಮಾತ್ರ ನೋಡುತ್ತ ಪ್ರಶ್ನಿ

ಹಾಕಿದಳು.

"ಏನೂ ಇಲ್ಲ....ಅವರನ್ನ ಪರಿಚಯಮಾಡಿಸಿಕೊಡೋಣಾಂತ....ಇವರು ಈ ಊರಿನಲ್ಲಿ ದೊಡ್ಡ ವ್ಯಾಪಾರಗಾರ್ರು. ಲಕ್ಷಾಂತರ ರೂಪಾಯಿ ವ್ಯಾಪಾರ ಮಾಡ್ತಾರೆ. ಇವರು ಸಿಲ್ಕ್ ಬಿಸಿನೆಸ್ಸೂ ಮಾಡ್ತಾ ಇದ್ದರು....ಈಗ ದಿನಸಿ ವ್ಯಾಪಾರ ಮಾಡ್ತಾ ಇದಾರೆ. ನಿನ್ನ ಹೋಲ್‌ಸೇಲ್ ಬಿಸಿನೆಸ್ಸಿಗೆ ಇಂಥ ವ್ಯಾಪಾರಗಾರರ ಪರಿಚಯ ಇದ್ದರೆ ಅನುಕೂಲಾಂತ ಹೇಳೋಣಾಂದ್ಕೊಂಡೆ...."

"ಓ, ಸಂತೋಷ. ಇವರು ಕೆಮಿಕಲ್ಸ್ ಡೀಲ್ ಮಾಡ್ತಾರಾ?" ತನ್ನ ಕೈಯಲ್ಲಿದ್ದ ಕಾಗದವನ್ನೊಮ್ಮೆ ತೂಗಿ, ಪ್ರಶ್ನೆ ಕರಿಯಪ್ಪನಿಗಾದರೂ ಉತ್ತರಕ್ಕಾಗಿ ನಾಗರಾಜನ ಮುಖ ನೋಡಿದಳು.

ಮೊದಲು ನಾಚಿಕೆ ತುಂಬಿದವಳಂತೆ ಕಂಡರೂ ಅಷ್ಟು ದಿಟ್ಟತನದಿಂದ ಮಾತಾಡುವ ಹುಡುಗಿಯನ್ನು ಅವನು ನೋಡಿರಲಿಲ್ಲ. ಓದಿದವಳು, ಬುದ್ಧಿವಂತೆ, ಬಿಸಿನೆಸ್ಸಿನಲ್ಲಿ ತುಂಬ ಆಸಕ್ತಿಯುಳ್ಳವಳು ಎಂಬುದು ಕರಿಯಪ್ಪನಿಂದ ತಿಳಿದುಬಂದಿದ್ದರಿಂದ ಬಿಸಿನೆಸ್ಸಿನ ದೃಷ್ಟಿಯಲ್ಲಿ ಇಷ್ಟು ಸರಾಗವಾಗಿ ಮಾತಾಡುತ್ತಿದ್ದಾಳೆ, ಎಂದುಕೊಂಡ ನಾಗರಾಜ, ಕೆಮಿಕಲ್ಸ್ ವಿಷಯ ಕೇಳಿದಾಗ ಸ್ವಲ್ಪ ತೊದಲಿ "....ಇಲ್ಲ" ಎಂದ.

"ಕ್ಯಾಸ್ಟಿಕ್ ಸೋಡ ಮಾರೊಲ್ಲವೇ ನಿಮ್ಮಂಗಡೀಲಿ?" ಎಂದು ಅವಳು ತಕ್ಷಣವೆ ಆಶ್ಚರ್ಯ ತುಂಬಿದ ಒಂದು ಪ್ರಶ್ನೆ ಹಾಕಿದಳು.

"ಕ್ಯಾಸ್ಟಿಕ್ ಸೋಡ....ಹ್ಞು, ಕ್ಯಾಸ್ಟಿಕ್ ಸೋಡ ಮಾರ್ತಾ ಇದ್ವು.... ಈಗ, ಹ್ಞು, ಈಗಲೂ ಇದೆ."

"ಕರಿಯಪ್ಪಣ್ಣ, ನಾನದಕ್ಕೇ ನಿಮಗೆ ಹೇಳಿದ್ದು. ಇವರಂಗಡೀಗೆ, ಮಾದಪ್ಪನೋರ ಅಂಗಡೀಗೆ ಹೋಗಿ ಸ್ವಲ್ಪ ರೇಟು ತಿಳಿದುಕೊಂಡು ಬನ್ನೀಂತ. ಅವನೇನೋ ಒಂದು ರೇಟು ಕೊಟ್ಟಿದ್ದ. ನಾನು ಅಂದಾಜಿನ ಮೇಲೆ ಏನೋ ಒಂದು ರೇಟು ಬರೆದುಹಾಕಿದ್ದೆ. ಯಾಕೇಂದ್ರೆ ಈ ಕಾಗದ ತಲುಪಿದ ಕೂಡ್ಲೆ ಬರೀಬೇಕು, ಇಲ್ದೆ ಇದ್ರೆ, ಆಮೇಲೆ ಸ್ಟಾಕಿರೊಲ್ಲ, ಅಂತ ಬರೆದಿದ್ದ. ನೀವು ನಿಮ್ಮ ಆಖೈರ್ ರೇಟು, ರಿಕ್ವೈರ್ಡ್ ಕ್ವಾಂಟಿಟಿ ತಿಳಿಸಿ, ನಮಗೆ ಗಿಟ್ಟಿದರೆ ನಾವು ಬುಕ್ ಮಾಡ್ತೀವಿ ಅಂತ. ಈವತ್ತು ಇನ್ನೊಂದು ಕಾಗದ ಬಂತು ಬೊಂಬಾಯಿಂದ. ಅದಕ್ಕೇ ಕೇಳ್ದೆ, ಇವರ ರೇಟ್

ಹೇಗೋಂತ."

ಈ ಹುಡುಗಿ ಎಷ್ಟು ಸಲೀಸಾಗಿ ಮಾತಾಡ್ತಾಳೆ! ಅಬ್ಬ, ಎನ್ನಿಸಿತು ನಾಗರಾಜನಿಗೆ. " ನಾಳೆ ತಿಳಿದು ಹೇಳ್ತೀನಿ " ಎಂದ.

ಕರಿಯಪ್ಪ " ರತ್ನ, ಕಮಲು ಎಲ್ಲಮ್ಮಾ? " ಎಂದ.

" ಒಳಗಿರಬಹುದು."

" ಏನ್ಮಾಡ್ತಾ ಇದಾಳೆ?........ದೊಡ್ಡಮ್ಮ? "

" ಹಾಸಿಗೆ ಬಿಸಿಲಿಗೆ ಹಾಕಿತ್ತು. ಎಲ್ಲ ತಂದು ಕೋಣೆಯಲ್ಲಿ ಹಾಸಿ ಸರಿಪಡಿಸ್ತಾ ಇದಾಳೇಂತ ಕಾಣುತ್ತೆ. ದೊಡ್ಡಮ್ಮ ಅಡಿಗೇ ಮನೇಲಿರಬಹುದು."

" ಓ,........ನಾಗರಾಜಪ್ಪನೋರೆ, ಆ ಕಟ್ಟು ಕೊಡಿ. ನೀವಿಲ್ಲೇ ಕುಳಿತ್ಕೊಳ್ಳಿ, ನಾನು ಒಳಗೆ ಹೋಗಿ ಬರ್‍ತೀನಿ " ಎಂದು ಕರಿಯಪ್ಪ ಬೂಟ್ಸ್ ಬಿಚ್ಚಿ, ಪೇಟ ತೆಗೆದು ಮೇಜಿನ ಮೇಲಿಟ್ಟು ಒಳಗೆ ಹೋದ.

ನಾಗರಾಜ, ಬೂಟ್ಸ್ ಹಾಕಿಕೊಂಡೇ ಮೇಜಿನ ಹತ್ತಿರ ಬಂದು, ರತ್ನ ಕುಳಿತಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ. ರತ್ನ ನಡುಮನೆಯಲ್ಲಿದ್ದ ತನ್ನ ಕೋಣೆಗೆ ಓಡಿಹೋದಳು.

ಐದು ನಿಮಿಷ ಕಳೆಯಿತು.

ಪಡಸಾಲೆಗೂ ನಡುಮನೆಗೂ ಮಧ್ಯೆ ಇದ್ದ ಬಾಗಿಲನ್ನು ಯಾರೋ ಮುಚ್ಚಿ ಅಗಳಿ ಹಾಕಿಬಿಟ್ಟರು.

ಒಳಗೆ ಏನೋ ಗಲಾಟೆ ಆಗುತ್ತಿತ್ತು. ಕರಿಯಪ್ಪ, ಲಕ್ಷಮ್ಮ ಏನೇನೋ ಮಾತಾಡುತ್ತಿದ್ದರು. ಕಮಲೆಯೋ ರತ್ನಳೋ ಯಾರೋ ಅಳುತ್ತಿರುವಂತೆ ತೋರಿತು. ಅವರಿಬ್ಬರ ಪೈಕಿ ಯಾರೋ ಒಬ್ಬರು ಸಿಕ್ಕಾಬಟ್ಟೆ ಕೂಗಾಡುತ್ತಿದ್ದರು.

ಅರ್ಧ ಗಂಟೆಯಾದರೂ ಗಲಾಟೆ ನಿಲ್ಲಲಿಲ್ಲ. ನಾಗರಾಜ ಆ ಅಸ್ಪಷ್ಟ ಮಾತು ಕೇಳಲು ಮೈಯೆಲ್ಲ ಕಿವಿ ಮಾಡಿಕೊಂಡು ಪಡಸಾಲೆಯಲ್ಲಿ ಸುಮ್ಮನೆ ಕುಳಿತಿದ್ದ. ಅರ್ಧ ಗಂಟೆಯಾದನಂತರ ಗಲಾಟೆ ನಿಂತಿತು. ಆದರೂ ಏಕೊ ಕರಿಯಪ್ಪನ ಸುಳಿವು ಕಾಣಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ಕರಿಯಪ್ಪ, ಬಿಚ್ಚಿಹೋದ ವಸ್ತ್ರದಲ್ಲಿ ಹೇಗೆ

ಹೇಗೋ ಕಟ್ಟಿದ ಆ ನೋಟಿನ ಕಂತೆಯನ್ನು ಹಿಡಿದು " ಹಾಳಾಗಲಿ " ಎಂದು ಕೊಂಡು ಹೊರಗೆ ಬಂದ.

ಕುರ್ಚಿಯ ಮೇಲೆ ಕುಳಿತಿದ್ದ ನಾಗರಾಜ ಎದ್ದು ನಿಂತು ಆಶ್ಚರ್ಯದಿಂದ " ಏನಾಯ್ತು ? " ಎಂದ.

" ಏನಾಗೋದು, ಬುದ್ಧಿ ಇಲ್ಲದ ಆ ಹುಡುಗಿ ಹಾಳಾಗುತ್ತೆ ಅಷ್ಟೆ! "

" ಯಾರು ? "

ಅದಕ್ಕೆ ' ಕಮಲು ' ಎಂದು ಉತ್ತರ ಹೇಳಿಬಿಡುವುದರಲ್ಲಿದ್ದ ಕರಿಯಪ್ಪ ಎಚ್ಚರಿಕೆ ತಂದುಕೊಂಡ. " ಯಾರೂ ಇಲ್ಲ " ಎಂಬ ಅರ್ಥವಿಲ್ಲದ ಉತ್ತರ ಹೇಳುತ್ತ, ನಾಗರಾಜನ ಹತ್ತಿರ ಇದ್ದ ಸ್ಟೂಲಿನ ಮೇಲೆ ಬಂದು ಕುಳಿತುಕೊಂಡ.

" ಏನ್ ನಾಗರಾಜಪ್ನೋರೆ ಈಗ ಇನ್ನೊಂದು ಉಪಾಯ ಮಾಡಬೇಕಾ ಗಿದೆ........" ಏನೋ ನೆನಪು ಮಾಡಿಕೊಂಡು, ಮಾತು ನಿಲ್ಲಿಸಿ, ನಡುಮನೆಯ ಬಾಗಿಲನ್ನು ಮುಂದಕ್ಕೆ ಹಾಕಿ ಬಂದು ಕುಳಿತ.

ಮನಸ್ಸು ಹೇಗೆ ಮಾತಾಡಬೇಕೆಂದು ಯೋಚನೆ ಮಾಡುತ್ತಿತ್ತು.

ನಾಗರಾಜ " ಏನ್ಮಾಡಬೇಕು ? " ಎಂದು ಕುತೂಹಲದಿಂದ ಕೇಳುತ್ತ ಕುರ್ಚಿಯನ್ನು ಸ್ಟೂಲಿನ ಸಮೀಪಕ್ಕೆ ಎಳೆದುಕೊಂಡ.

" ಈ ಸಾವಿರ ರೂಪಾಯೀನ—ನಾನು ರತ್ನಾನ ಕರೀತ್ತೀನಿ—ನೀನು ಅವಳ ಕೈಗೆ ಕೊಟ್ಬಿಡು. ನಾನು ಹೇಳಿಕೊಟ್ಟ ಹಾಗೆ ಹೇಳಿಬಿಡು. ಏನೇನು ಮಾಡಬೇಕೋ ಎಲ್ಲ ಮಾಡಿಬಿಟ್ಟದ್ದೀನಿ...."

ಕರಿಯಪ್ಪನ ಈ ಮಾತು ನಾಗರಾಜನಿಗೆ ವಿಚಿತ್ರವಾಗಿ ತೋರಿತು.

" ಕಮಲ ಏನಂದಳು ? " ಎಂಬ ಪ್ರಶ್ನೆ ಬಾಯಿಂದ ಬಂದೇಬಿಟ್ಟಿತು.

" ಕಮಲು ಸುದ್ದಿ ಈಗ್ಯಾಕೆ....ಸುಮ್ನಿರು. ನಿಂಗೊತ್ತಿಲ್ಲ " ಎಂದು ಕರಿಯಪ್ಪ ಏಕೊ ಬಾಯಿಬಡಿದುಬಿಟ್ಟ.

ತನ್ನ ಹಿತಚಿಂತಕನೆಂದು ಅವನನ್ನು ಚೆನ್ನಾಗಿ ನಂಬಿದ್ದ ನಾಗರಾಜನಿಗೆ ಅತ ತನಗಾಗಿ ಇನ್ನೂ ಒಂದು ಒಳ್ಳೆಯ ಉಪಾಯ ಹುಡುಕಿದಂತಿದೆ, ಎನ್ನಿ ಸಿತು.

" ಈಗೇನ್ಮಾಡೂಂತೀರ ಕರಿಯಪ್ನೋರೆ ? " ಎಂದು ಆಸಕ್ತಿಯಿಂದ ಕೇಳಿದ.

" ನಾನು ಈಗ ಹೇಳಿದೆನಲ್ಲ ಹಾಗೆ ಮಾಡೋದು. ಇದು, ಬಹಳ ಬೇಗ ಕಾರ್ಯಸಿದ್ಧಿ ಆಗೋಕೆ ಅನುಕೂಲವಾದ ಸಮಯ. ನೋಡಿಕೊಂಡು ಬಂದಿದೀನಿ....ಸಮಯ ಹೀಗಿರುವಾಗ ಕಮಲು ಯೋಚನೆ ಯಾಕೆ?" ಎಂದು ಕರಿಯಪ್ಪ ವಿಚಿತ್ರ ನಗು ನಕ್ಕ.

ನಾಗರಾಜನಿಗೆ ಅರ್ಥವಾಯಿತು. 'ಓ, ಎಲ್ಲೋ ರತ್ನ ಈ ಕಡೆ ಓಲುತ್ತಿದ್ದಾಳೇಂತ ಕಾಣುತ್ತೆ. ಬಿಸಿನೆಸ್ಸಿನ ಹುಚ್ಚು, ತನ್ನ ವ್ಯಾಪಾರ, ಸಾವಿರದ ಕಂತೆ ನೋಡಿ, ದಾರಿಗೆ ಬರುವ ಹಾಗಿರಬಹುದು. ಅದಕ್ಕೇ ಕರಿಯಪ್ಪ ಸಮಯ ನೋಡಿ ಕಚ್ ಅಂತ ಕಚ್ಕೊಳ್ಳೋಣಾಂತ ಈ ಏರ್ಪಾಟು ಮಾಡಿದಾನೆ.... ನಡೀಲಿ, ಒಳ್ಳೆಯದೇ ಆಯಿತು' ಎಂದುಕೊಂಡ.

ತನ್ನ ಒಪ್ಪಿಗೆಯನ್ನು ಸೂಚಿಸಿದ ಮೇಲೆ ಕರಿಯಪ್ಪ ನಡುಮನೆಯ ಬಾಗಿಲು ತೆಗೆದು ಒಳಗೆ ಹೋದ. ಸ್ವಲ್ಪ ಹೊತ್ತಾದ ಮೇಲೆ ವಾಪಸು ಬಂದ. ಅವನ ಹಿಂದೆಯೇ ರತ್ನ ಬಂದಳು.

ಅವಳು ಬಂದ ಕೂಡಲೆ ನಾಗರಾಜ ಅದೇಕೊ ಎದ್ದು ನಿಂತುಕೊಂಡ. ಅವಳು ಹಿಮ್ಮುಖನಾಗಿ ಓಡಿದಾಗ ಚೆನ್ನಾಗಿ ಕಂಡರೂ ಎದುರಿಗೆ ನಿಂತು ಬಿಸಿನೆಸ್ ವಿಷಯ ಮಾತಾಡಿದಾಗ ಅವಳ ನಿಲುವು, ಮಾತಿನ ಥಾಟಿ, ಕಣ್ಣಿನ ಓಡಾಟ, ಎಲ್ಲ ನೋಡಿ ನಾಗರಾಜನಿಗೆ ಒಂದು ರೀತಿಯ ದಿಗಿಲುಂಟಾಗಿತ್ತು. ತನ್ನ ಯೋಗ್ಯತೆಗೆ ಮೀರಿದ ವಸ್ತುವಿನ ಮುಂದೆ ತಾನು ನಿಂತಂತೆ ಭಾಸವಾಗಿ ಮೈ ಮುದುಡಿಕೊಂಡಿತ್ತು.

ಸ್ಟೂಲಿನ ಮೇಲೆ ಕುಳಿತುಕೊಳ್ಳುತ್ತಿದ್ದ ಕರಿಯಪ್ಪ, ಎದ್ದು ನಿಂತ ನಾಗರಾಜನನ್ನು ನೋಡಿ, " ಕೂತ್ಕೊಳ್ಳಿ ಪರವಾಯಿಲ್ಲ " ಎಂದ.

ನಾಗರಾಜ ರತ್ನಳ ಮುಖವನ್ನೊಮ್ಮೆ ನೋಡಿ ಕುರ್ಚಿಯ ಮೇಲೆ ಕುಳಿತುಕೊಂಡ. ಮೇಜಿನ ಮೇಲೆ, ಹಸುರು ವಸ್ತ್ರದಲ್ಲಿ ಸುತ್ತಿಟ್ಟ ಸಾವಿರ ರೂಪಾಯಿ ನೋಟಿನ ಕಂತೆಯ ಕಡೆ ನಾಗರಾಜನ ದೃಷ್ಟಿ ಹೋಯಿತು.

ಕರಿಯಪ್ಪ ಮಾತಿಗೆ ಮೊದಲು ಮಾಡಿದ.

" ರತ್ನ, ಇವರ ವಿಷಯ ಹೇಳಿದ್ನಲ್ಲ. ನಾಳೆ ಇವರು ಇವರ ರೇಟು ತಿಳಿಸ್ತಾರೆ....ಇವರು ಹೇಳೋದೇನೆಂದರೆ ಮಾಲು ತರಿಸಿಬಿಡ್ಲಿ. ಆಮೇಲೆ ರೇಟು

ನೋಡಿಕೊಂಡು, ಯಾವುದು ಸರಿಹೋದರೆ ಅದನ್ನು ಒಪ್ಪಿಕೊಂಡು ತಳ್ಳಿ ಬಿಡೋದು ಅಂತಾರೆ........ಯಾಕೇಂದ್ರೆ, ಇದು ಸಮಯ ಆಗಿರೋದರಿಂದ, ಇಂಥ ಸಾಮಾನಿಗೆ ಗಿರಾಕಿ ಜಾಸ್ತಿ. ಇವರದು ಒಂದೆಂಟ್ಹತ್ತು ಮೈಸೂರು ಬ್ಯಾಂಕು ಷೇರಿತ್ತು. ಅದನ್ನೆಲ್ಲ ಈಗ ಯಾವನೋ ಮಾರ್ವಾಡಿಗೆ ಮಾರಿ ಈ ಒಂದು ಸಾವಿರ ರೂಪಾಯಿ ತೊಗೊಂಡ್ರು. ನಾನು ಸುಮ್ನೆ ಷೇರ್‌ಗೆ ಯಾಕ್ ಹಾಕ್ತೀರಿ, ಬಿಸಿನೆಸ್ಸಿಗೆ ನಿಮ್ಮಪ್ಪನ ಬಂಡವಾಳವೇ ಸಾಕು. ಇದನ್ನ ನಮ್ಮಂಥವರಿಗೆ ಕೊಟ್ಟು ನಮಗೂ ಉಪಕಾರ ಮಾಡಿ, ನೀವೂ ನಾಲ್ಕು ಕಾಸು ತಗೊಳ್ಳೀಂತಂದೆ. ಇವರಿಗೆ ನಿನ್ನ ವಿಷಯ ಎಲ್ಲ ಹೇಳಿದೆ, ಇವರು ಒಪ್ಪಿದಾರೆ...."

ರತ್ನ "ಓ" ಎಂದಳು.

ಕರಿಯಪ್ಪ "ನೀವೇ ಕೊಟ್ಬಿಡಿ, ನಾಗರಾಜಪ್ನೋರೆ ಅದನ್ನ" ಎಂದಾಗ ನಾಗರಾಜ ನೋಟಿನ ಕಂತೆಯನ್ನು ಹಸುರು ವಸ್ತ್ರದ ಸಮೇತ ಎರಡು ಕೈಯಲ್ಲೂ ತೆಗೆದುಕೊಂಡು ರತ್ನಳ ಕಡೆ ಹಿಡಿದ. ನಿಂತುಕೊಂಡಿದ್ದ ರತ್ನ ಸ್ವಲ್ಪ ಬಾಗಿ, ಬೊಗಸೆ ಹಿಡಿದು ಸ್ವಾಗತಿಸಿದಳು. ಸಾವಿರ ರೂಪಾಯಿ ಕೈಗೆ ಬಿತ್ತು.

ಬಿಗಿಯಿಂದ ಮಾತಾಡಿದ ಹುಡುಗಿ, 'ಓ' ಎಂದು ವಿನಯಗೊಂಡು, ಅಂಗೈ ಚಾಚಿದಾಗ ನಾಗರಾಜನ ಹೃದಯಕ್ಕೆ ವಿಚಿತ್ರ ಆನಂದವುಂಟಾಗಿತ್ತು. ಅಷ್ಟಕ್ಕೇ ಅವನಿಗೆ ಎಷ್ಟೋ ತೃಪ್ತಿಯಾಗಿತ್ತು.

"ಸರಿ, ಇವರು ನಾಳೆ ಇವರ ರೇಟು ತಿಳಿಸ್ತಾರೆ. ನಾನು ಮಾದಪ್ನೋರ ಅಂಗಡೀಗೂ ಹೋಗಿ ರೇಟು ತಿಳಿದುಕೊಂಡು ಬರ್‍ತೀನಿ. ಮಾಲು ಬರೋದು ಬಂದುಬಿಡ್ಲಿ. ದುಡ್ಡು ಕೊಟ್ಟು ಬಿಡಿಸಿಕೊಂಡು ಬಿಡೋದು" ಎಂದು ಕರಿಯಪ್ಪ ಹೊರಡಲು ಎದ್ದುನಿಂತ.

ಅವನು ಮೇಲೆದ್ದ ಮೇಲೆ, ನಾಗರಾಜ ನಿಧಾನವಾಗಿ ಎದ್ದುನಿಂತ. ರತ್ನ ನೋಟಿನ ಕಂತೆಯನ್ನು ಕೈಯಲ್ಲಿ ಹಿಡಿದುಕೊಂಡು ನಿಂತಲ್ಲಿಯೇ ನಿಂತಿದ್ದಳು. ಕರಿಯಪ್ಪ ಬೂಟ್ಸ್ ಹಾಕಿಕೊಂಡು, ಗೋಡೆಯಲ್ಲಿದ್ದ ಕನ್ನಡಿಯ ಹತ್ತಿರ ಬಗ್ಗಿ ತಲೆಯಮೇಲಿಟ್ಟುಕೊಂಡ ರುಮಾಲನ್ನು ಸರಿಪಡಿಸಿಕೊಳ್ಳುತ್ತಿದ್ದ. ಬೂಟ್ಸ್ ಹಾಕಿಕೊಳ್ಳುತ್ತಿದ್ದ ಕರಿಯಪ್ಪನ ಕಾಲನ್ನೊಮ್ಮೆ ನೋಡಿದ ನಾಗರಾಜನ ದೃಷ್ಟಿ ಗೋಡೆಯ ಪಕ್ಕದಲ್ಲಿ ಹೋಗಿ ನಿಂತಿದ್ದ ರತ್ನಳ ಕಡೆಗೆ ಹರಿಯಿತು. ಅವನ ಕಣ್ಣು ಅವಳ ಮುಖವನ್ನು ನೋಡಿದಾಗ ಆ ಮುಖ ಕರಿಯಪ್ಪನ ಕಾಲು

ನೋಡುತ್ತಿತ್ತು. ಆದರೆ ತಕ್ಷಣವೆ ನಾಗರಾಜನ ಮುಖ ನೋಡಿತು. ನಾಲ್ಕು ಕಣ್ಣುಗಳೂ ಒಂದಾದಾಗ, ಅವಳ ಆ ಎರಡು ಕಣ್ಣಿನ ಕಾಂತಿಯನ್ನು ತಡೆಯುಲಾರದ ಈ ಎರಡು ಕಣ್ಣಿನ ನೋಟ ಕೆಳಗಿಳಿಯಿತು. ಆ ಹೊಳವು ಕಂಡಾಗ ಮೈಯೆಲ್ಲ ಜುಮ್ಮೆಂದಿತು.

ನಾಗರಾಜ ಚೇತರಿಸಿಕೊಂಡು, "ನಾವು ಹೋಗ್ಬಿಟ್ಟು ಬರ್ತೇವೆ" ಎಂದು ಪಡಸಾಲೆಯ ಬಾಗಿಲ ಕಡೆಗೆ ಬಂದ. ಕರಿಯಪ್ಪ ಲಕ್ಷ್ಮಮ್ಮನಿಗೆ ಹೇಳಲು ಪಡಸಾಲೆಯ ಬಾಗಿಲು ತೆರೆದು, "ಲಕ್ಷಮ್ಮಾ ನಾವ್ ಬರ್ತೀವಿ" ಎಂದು ಕೂಗಿದ.

ಅದೇಕೋ ಲಕ್ಷಮ್ಮ ಅಂದು ಹೊರಗೆ ಬಂದಿರಲಿಲ್ಲ. ಒಳಗಿನಿಂದಲೇ "ಒಳಗೆ ಬರಬಾರ್ದಾ" ಎಂದಳು. ಕರಿಯಪ್ಪ ಒಳಗೆ ಹೋಗಿ ಏನೋ ಮಾತಾಡಿಕೊಂಡು ಹೊರಗೆ ಬಂದ. ಪಡಸಾಲೆಯಲ್ಲಿದ್ದ ರತ್ನ ಕರಿಯಪ್ಪನ ಹಿಂದೆಯೇ ನಡುಮನೆ ಸೇರಿದಳು. ನಾಗರಾಜ ಪಡಸಾಲೆಯಲ್ಲೇನೂ ಸುಖವಿಲ್ಲವೆಂದು, ಬೀದಿಯ ಬಾಗಿಲು ತೆರೆದು ವ್ಹೆರಾಂಡಾಕ್ಕೆ ಬಂದ.

'ಕರಿಯಪ್ಪ ಎಷ್ಟು ಬುದ್ಧಿವಂತ. ಎಷ್ಟು ಚಮತ್ಕಾರವಾಗಿ ಮಾತಾಡಿ ಏನೇನೋ ಕತೆ ಕಟ್ಟಿ ತನ್ನ ಸಾವಿರ ರೂಪಾಯಿಯನ್ನು ರತ್ನ ತೆಗೆದುಕೊಳ್ಳುವಂತೆ ಮಾಡಿದ. ಅಬ್ಬ, ಪರವಾಯಿಲ್ಲ, ಇವನು ನನಗಾಗಿ ತುಂಬ ಸಹಾಯ ಮಾಡುತ್ತಾನೆ' ಎಂದಿತು, ನಾಗರಾಜನ ಮನಸ್ಸು.

ಇಬ್ಬರೂ ಹೊರಗೆ ಹೊರಟಾಗ ದೂರದಲ್ಲಿ ಪೋಲೀಸ್ ಸ್ಟೇಷನ್ನಿನ ಗಂಟೆ ಒಂಬತ್ತು ಬಡಿಯಿತು.

## ೧೦

ತಗಣಿಯ ಕಾಟ ತಡೆಯಲಾರದೆ ಹಾಸಿಗೆಗಳನ್ನು ಬಿಸಿಲಿಗೆ ಹಾಕಿದ್ದ ಕಮಲು ಒಂದೊಂದಾಗಿ ತಂದು ಕೋಣೆಯಲ್ಲಿ ಹಾಸಿ ಸರಿಪಡಿಸಿ, ಸುತ್ತಿಡುತ್ತಿದ್ದಳು. ತನ್ನ ಹಾಸಿಗೆಯನ್ನು ಹಾಸಿ ಸುತ್ತಿದಾಗ, ಕರಿಯಪ್ಪ ಲಕ್ಷಮ್ಮನೊಡನೆ ಊಟದ ಮನೆಯಲ್ಲಿ ಕುಳಿತು ಮಾತಾಡುತ್ತಿದ್ದುದು ಅವಳಿಗೆ ತಿಳಿಯಿತು. ಅವರಿಬ್ಬರೂ ಮಾತಾಡುತ್ತ ಯಾವುದೋ ಒಂದು ತೀರ್ಮಾನಕ್ಕೆ ಬಂದಂತೆ ಮಾತು ನಿಂತಿತು.

ಕೋಣೆಯ ಬಾಗಿಲಲ್ಲಿ ರತ್ನ ನಿಂತು " ಷ್, ಬಾ ಇಲ್ಲಿ. ದೊಡ್ಡಮ್ಮ ಕರೀತಾಳೆ " ಎಂದು ಮೆಲ್ಲಗೆ ಹೇಳಿದಳು.

ಕರಿಯಪ್ಪ ಕೈಯಲ್ಲಿ ದಪ್ಪ ಹಸುರು ಗಂಟು ಹಿಡಿದು ಒಳಗೆ ಬಂದಾಗಲೆ ಕಮಲುವಿಗೆ ವಿಷಯ ತಿಳಿದಿತ್ತು. ಅವರಿಬ್ಬರೂ ಅಷ್ಟು ಆಸಕ್ತಿಯಿಂದ ಮಾತ ನಾಡುತ್ತಿದ್ದುದನ್ನು ನೋಡಿ, ಮೈಯೆಲ್ಲ ಕೆಂಡವಾಗಿತ್ತು. ರತ್ನ ಬಂದು, ಏನೋ ಹೊರಿಸಿಕೊಡುವಂತೆ ' ಷ್, ಬಾ ಇಲ್ಲಿ ' ಎಂದಾಗ ಅವಳ ಕೋಪ ಮಿತಿಮೀರಿತು.

" ಬರೊಲ್ಲ ಹೋಗು " ಎಂದಳು.

ರತ್ನ ಸರಕ್ಕನೆ ಹೊರಟುಹೋದಳು.

ಆರು ದಿನಗಳಿಂದ ಅವಳ ಬುದ್ಧಿ ಅವಳ ಕೈಯಲ್ಲಿರಲಿಲ್ಲ. ಅವಳ ಮೆದುಳು ಯೋಚನೆ ಮಾಡಿಮಾಡಿ ಏನೊಂದೂ ತೀರ್ಮಾನಕ್ಕೂ ಬರದೆ ಕುದಿ ಯುತ್ತಿತ್ತು. ಹೆತ್ತ ತಾಯಿಯ ಹಾದಿಯಲ್ಲಿ ಹೋಗಲು ಇಷ್ಟವಿಲ್ಲದ ಆ ಹುಡುಗಿ " ನನಗೆ ಮದುವೆ ಮಾಡು " ಎಂದು ಹಟಹಿಡಿದಿದ್ದಳು. ತಾಯಿ ಏನೇನೋ ಆಸೆ ತೋರಿಸಿ ಮಗಳನ್ನು ದಾರಿಗೆ ತರಲು ಪ್ರಯತ್ನಿಸಿದಳು. ಆದರೆ ಪ್ರಯತ್ನವೆಲ್ಲ ವಿಫಲವಾಗಿತ್ತು. ' ನಿನ್ನನ್ನು ನಾಗರಾಜಪ್ಪನವರಿಗೆ ಕೊಟ್ಟು ಮದುವೆ ಮಾಡುತ್ತೇನೆ ' ಎಂದು ಕೊನೆಯ ದಾಳ ಹಾಕಿ ನೋಡಿದ್ದಳು. ಮಗಳು ' ನನಗೆ ಅಂಥ ಮದುವೆ ಬೇಡ. ಕೈಯಲ್ಲಾದರೆ ಸರಿಯಾದ ಮದುವೆ ಮಾಡು. ಇಲ್ಲದಿದ್ದರೆ ಪೂನಾಕ್ಕೆ ಕಳಿಸು, ನಾನು ನನ್ನ ತಂದೆಗೆ ಹೇಳಿಕೊಳ್ಳು ತ್ತೇನೆ. ಆತ ನನ್ನನ್ನು ಕೈಬಿಡೋದಿಲ್ಲ ' ಎಂದುಬಿಟ್ಟಿದ್ದಳು.

ಅವಳು ಯುವತಿಯಾಗಿ ನಾಲ್ಕು ವರುಷಗಳಾಗಿದ್ದುವು. ಹರೆಯ ತುಂಬಿದ ದೇಹ ಸರಿಯಾದ ಜೊತೆಯಿಲ್ಲದೆ ಸೊರಗುತ್ತಿದೆ, ಎಂಬುದನ್ನು ಅವಳ ತಾಯಿಯ ಬಾಯಿಂದ ಅವಳು ಅನೇಕ ಬಾರಿ ಕೇಳಿದ್ದಳು. ಅವಳಿಗೂ ಒಮ್ಮೆ ಗಂಡಿನ ಸಹವಾಸಬೇಕು ತಾನೂ ತಾಯಿಯಾಗಿ ಸುಖವಾಗಿ ಬಾಳಬೇಕು ಎನ್ನಿಸಿತ್ತು. ಆದರೆ ತನ್ನ ತಾಯಿಯಂತೆ, ಬೀದಿಯ ಹೆಂಡತಿಯಾಗಿ, ಬಲ ವಂತದ ಸುಖ ಅನುಭವಿಸುವ ಇಷ್ಟವಿರಲಿಲ್ಲ.

ಹೈಸ್ಕೂಲು ಓದು ನಡೆಯುತ್ತಿದ್ದುದರಿಂದ ಓದು ಮುಗಿಯಲಿ, ಆಮೇಲೆ ಸರಿಯಾಗಿ ಪ್ರಯತ್ನಿಸೋಣ, ಎಂದು ತಾಯಿ ಮೂರು ವರುಷ ಅಷ್ಟು ಮನ

ಸ್ಸಿಟ್ಟು ಮಾತಾಡಲಿಲ್ಲ. ಆದರೆ ಪರೀಕ್ಷೆ ಮುಗಿದಿದ್ದೇ ತಡ ಷುರುಮಾಡಿ ಬಿಟ್ಟಳು.

ಅಕ್ಕ ಒಂದು ದಾರಿಯಾದರೆ ತಂಗಿ ಒಂದು ದಾರಿ ಹಿಡಿದಿದ್ದಳು. ಅಕ್ಕನಿಂದ ಲಕ್ಷ್ಮಮ್ಮ ನಿರಾಸೆಗೊಂಡಿದ್ದರೂ, ತಂಗಿಯಿಂದ, ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚು ಯಶಸ್ಸು ಗಳಿಸುವ ನಂಬಿಕೆ ಹೊಂದಿದ್ದಳು.

ಕಮಲುವಿಗೆ ರತ್ನಳ ನಡತೆಯೇ ಸರಿಬೀಳುತ್ತಿರಲಿಲ್ಲ. ಇನ್ನೂ ದೊಡ್ಡವಳಾಗದ ಅವಳು ಆಗಲೆ ಸಣ್ಣ ಸಣ್ಣ ಬಿಸಿನೆಸ್ಸಿನಲ್ಲಿ ಕೈಹಾಕಿ, ತಾಯಿಯ ಬಿಸಿನೆಸ್ಸಿನ ಕಡೆ ಓಲುತ್ತಿರುವುದನ್ನು ನೋಡಿ, ಅಸಹ್ಯಪಡುತ್ತಿದ್ದಳು.

ನಿಜ, ಅವಳ ಬುದ್ಧಿ ಚುರುಕು. ಎಷ್ಟೋ ಬಾರಿ ತಾಯಿಯನ್ನೂ ಮನೆಗೆ ಬರುವ ಗಿರಾಕಿಗಳನ್ನೂ ಬಚಾವು ಮಾಡಿದ್ದಾಳೆ; ತನ್ನಷ್ಟು ಬೆಳ್ಳಗಿಲ್ಲದಿದ್ದರೂ, ಎತ್ತರವಾಗಿಲ್ಲದಿದ್ದರೂ ನೋಡುವುದಕ್ಕೆ ತನಗಿಂತ ಚೆನ್ನಾಗಿದ್ದಾಳೆ; ಅವಳ ಕಣ್ಣಿನಂಥ ಕಣ್ಣುಗಳೇ ಇಲ್ಲ. ಆ ಮನಮೋಹಕವಾದ ಕಣ್ಣುಗಳನ್ನು ನೋಡಿದವರೆಲ್ಲರೂ ಅವಳಿಗೆ ಮನಸೋಲುವುದು ಖಂಡಿತ. ಎಲ್ಲ ಸರಿ, ಆದರೆ ಆ ಮನೆಹಾಳುಬುದ್ಧಿಯನ್ನು ಕಂಡರೆ ಮಾತ್ರ ಕಮಲುವಿಗೆ ಆಗುತ್ತಿರಲಿಲ್ಲ. ಅನೇಕ ಬಾರಿ ಇಬ್ಬರೂ ಜಗಳ ಆಡುತ್ತಿದ್ದರು. ದೇಹದ ಮಾರಾಟವನ್ನೇ ಜೀವನದ ಕಸುಬನ್ನಾಗಿ ಮಾಡಿಕೊಂಡಿದ್ದ ಮೂವತ್ತು ವರುಷದ ಲಕ್ಷ್ಮಮ್ಮ ಹೆತ್ತ ಮಗಳ ವಾದವನ್ನು ಸಹಿಸದೆ ರತ್ನಳನ್ನು ವಹಿಸಿಕೊಂಡು ಮಾತಾಡುತ್ತಿದ್ದಳು. ತಾಯಿ, ರತ್ನ ಒಂದಾದರೆ ಕಮಲು ಒಬ್ಬಳೇ ಒಂದಾಗುತ್ತಿದ್ದಳು. ಮನೆಗೆ ಬರುವವರಾದರೋ ಕಾಮದ ಪಶುಗಳಾದುದರಿಂದ, ಈ ಮಾತು ಬಂದಾಗ ಅವರು ಕಮಲುವನ್ನೇ ಬಯ್ಯುತ್ತಿದ್ದರು. ಹೀಗೆ ದಿನ ಕಳೆಯುತ್ತಿತ್ತು.

ಮದುವೆಯ ಪ್ರಸ್ತಾಪ ಬಂದರಂತೂ, ಕೊನೆಕೊನೆಗೆ " ಮೂದೇವಿ, ನಿನ್ನನ್ನು ಯಾರು ಮದುವೆ ಮಾಡ್ಕೊಳ್ತಾರೆ! ಯಾವ ಜಾತಿಯೋನಿಗೆ ಕೊಡುವ ?" ಎನ್ನುತ್ತಿದ್ದಳು. ಕರಿಯಪ್ಪ ಕಮಲಮ್ಮನನ್ನು ಕೂಡಿಸಿಕೊಂಡು ಅನೇಕ ಬಾರಿ ಬುದ್ಧಿ ಹೇಳಿದ್ದ; " ಮದುವೆ ಮದುವೆ ಅಂದರೆ ಆಗದ ಮಾತು ಕಮಲಮ್ಮ. ನಾ ಹೇಳೋದು ಕೇಳು. ಈಗಿನ ಕಾಲದಲ್ಲಿ ಇಂಥ ಜೀವನ ನಡಸೋರು ಪುಣ್ಯವಂತರು. ಅದೂ ಅಲ್ಲದೆ ಇಂಥವರ ಮಗಳು ಎಂದರೆ ಯಾರು ತಾನೆ ಮದುವೆ ಮಾಡಿಕೊಳ್ತಾರೆ. ಸರಿಯಾದ ವರ ಸಿಕ್ಕೊಲ್ಲ. ಪುಂಡು

ಪೋಕರಿಗಳಿಗೆ ಕೊಡಬೇಕಾಗುತ್ತೆ. ನಿಮ್ಮ ತಾಯಿ ಹೇಳೋ ಹಾಗೆ ಕೇಳಮ್ಮ. ಜೊತೆಗೆ ರತ್ನಾನೂ ಇದ್ದಾಳೆ. ಸುಖವಾಗಿ ಜೀವನ ಮಾಡಬಹುದು" ಎಂದು ವಿವರಿಸಿದ. ಅದರೆ ಕಮಲಳ ಮನಸ್ಸು ಬದಲಾಯಿಸಲಿಲ್ಲ.

ಲಕ್ಷ್ಮಮ್ಮ ಸಾವಿರ ರೂಪಾಯಿಯ ಕಂತೆಯನ್ನು ತಂದು ಕಮಲಳ ಹಾಸಿಗೆಯ ಮೇಲೆ ಕೋಪದಿಂದ ಬಿಸಾಡಿದಳು. ಕಟ್ಟು ಬಿಚ್ಚಿ ಹಾಸಿಗೆಯ ತುಂಬ ನೋಟುಗಳು ಹರಡಿದುವು. ಹಾಸಿಗೆಯನ್ನು ಹಾಸಿ ಸರಿ ಪಡಿಸುತ್ತಿದ್ದ ಕಮಲಳಿಗೆ ಇದ್ದಕ್ಕಿದ್ದಂತೆ ಅಳು ಬಂದುಬಿಟ್ಟಿತು. ಮಂಡಿಯೂರಿ ಕುಳಿತು, ಮಡಿಸುತ್ತಿದ್ದ ಕಂಬಳಿಯಲ್ಲಿ ಮುಖ ಮುಚ್ಚಿಕೊಂಡು ಹಾಗೆಯೇ ಮಲಗಿ ಬಿಕ್ಕಿಬಿಕ್ಕಿ ಅಳತೊಡಗಿದಳು. ನೋಟಿನ ರಾಸಿಯನ್ನು ಕಣ್ಣು ತುಂಬ ನೋಡುವಷ್ಟು ತಾಳ್ಮೆಯೂ ಅವಳಿಗಿರಲಿಲ್ಲ. ತಾಯಿಯ ಕೋಪದಿಂದ, ಆ ನೋಟಿನ ರಾಸಿಯಿಂದ ಅವಳ ನಿರ್ಧಾರ ಬದಲಾಗಲಿಲ್ಲ.

ಹೆತ್ತ ತಾಯಿ, ಎದೆ ಚುಚ್ಚುವಂಥ ಮಾತಾಡಿದಳು. ಕಳೆದು ಹೋದ ತನ್ನ ಜೀವನದ ನೆನಪಿಲ್ಲದೆ, "ಯಾವೋನೋ ಹಾರಿಸ್ಕೊಂಡ್ಹೋಗೋಕೆ ನಿನಗೆ ಈ ರೀತಿ ಮಂಕು ಬೂದಿ ಎರಚಿದಾನೆ" ಎಂದು ಹೊಲಸು ಹೊಲಸು ಮಾತಾಡಿದಳು.

ರತ್ನ, 'ಬೆಪ್ಪುತಕ್ಕಡಿ, ಸಾವಿರಾರು ರೂಪಾಯಿಯ ಯಜಮಾನಿ ಆಗುವುದರ ಬದಲು ಒಂದು ಗಂಡಿನ ಗುಲಾಮಳಾಗ್ತಾಳಂತೆ!' ಎಂದುಕೊಂಡಳು.

ತಾನು ಅವರ ಬಲೆಗೆ ಬೀಳದೆ ಗೆದ್ದರೂ ಸಾವಿರ ರೂಪಾಯಿಯ ಕಂತೆ ಮನೆಯಲ್ಲಿಯೇ ಉಳಿದುದನ್ನು ನೋಡಿ ಕಮಲಳ ಮನಸ್ಸು ತಳಮಳಿಸಿತು. ಹಾಸಿಗೆಯ ಮೇಲೆ ಹರಡಿದ್ದ ನೋಟುಗಳನ್ನೆಲ್ಲ ಜೋಡಿಸಿ ಅದೇ ಹಸುರು ವಸ್ತ್ರದಲ್ಲಿ ಕಂತೆ ಕಟ್ಟಿದ ರತ್ನ, ತನ್ನನ್ನು ಕೋಣೆಯಲ್ಲಿಯೇ ಬಿಟ್ಟು, ಬಾಗಿಲು ಮುಂದಕ್ಕೆ ಹಾಕಿಕೊಂಡು ಎಲ್ಲಿಗೋ ಹೋಗಿಬಿಟ್ಟಿದ್ದಳು. ಆಮೇಲೆ ಆ ಹಸುರು ಕಂತೆಯನ್ನು ರತ್ನಳ ಕೈಯಲ್ಲೇ ಇಟ್ಟು, ನಾಗರಾಜ, ಕರಿಯಪ್ಪ ಹೊರಟುಹೋದುದನ್ನು ನೋಡಿ ಕಮಲಳಿಗೆ ಆಶ್ಚರ್ಯವಾಗಿತ್ತು. ಇದು ಯಾವ ರೀತಿಯ ಏರ್ಪಾಟೋ ಅವಳಿಗೆ ತಿಳಿಯಲಿಲ್ಲ!

ಎಂಟು ಹತ್ತು ದಿನಗಳಲ್ಲಿ ಅವಳಿಗೆ ಎಲ್ಲ ಅರ್ಥವಾಯಿತು. ರತ್ನ ಕೆಡುತ್ತಿದ್ದಾಳೆ, ಎಂದುಕೊಂಡಳು. ಆ ಶುದ್ಧ ಪೋಲಿ ನಾಗರಾಜ ನಾಯಿಯಂತೆ,

ರತ್ನಳ ಮುಖ ನೋಡಲು ದಿನಕ್ಕೊಮ್ಮೆ ಬಂದು ಹೋಗುತ್ತಿದ್ದ. ಅವಳು ಇನ್ನೂ ಹುಡುಗಿ. ಆದರೂ ತನ್ನ ಕಣ್ಣಿನ ನೋಟದಿಂದ, ಮಾಟವಾದ ಮುಖ ದಿಂದ, ತುಂಬು ದೇಹದಿಂದ ಗಂಡಿನ ಮನಸ್ಸನ್ನು ಸೆಳೆಯುತ್ತಿದ್ದಳು.

ನಾಲ್ಕೈದು ತಿಂಗಳು ಕಳೆದುವು. ನಾಗರಾಜನ ಸ್ನೇಹವಾದ ಮೇಲೆ ರತ್ನಳ ಬಿಸಿನೆಸ್ ಜೋರಾಯಿತು. 'ಬಿಸಿನೆಸ್, ಬಿಸಿನೆಸ್' ಎಂದುಕೊಳ್ಳುತ್ತ ಊರಿನ ವರ್ತಕರ ಹತ್ತಿರ, ಅಧಿಕಾರಿಗಳ ಹತ್ತಿರ ವ್ಯವಹಾರ ನಡಸುತ್ತಿದ್ದ ರತ್ನ, ಬರಿಯ ಬಿಸಿನೆಸ್ ನಡಸುವುದಿಲ್ಲ ಎಂದು, ಅವಳ ಮನಸ್ಸು ತಿಳಿದ ಕಮಲ ನಂಬಿದ್ದಳು.

ದೊಡ್ಡವಳಾದ ಕೇವಲ ಎರಡು ತಿಂಗಳೊಳಗೆ, ಹಲವಾರು ಹೊಲಸು ಸಮಾಚಾರಗಳಿಗೆ ಎಡೆಕೊಟ್ಟಿದ್ದ ರತ್ನಳನ್ನು ಕಂಡರೆ ಕಮಲುವಿನ ಕಣ್ಣು ಕಿಡಿಕಿಡಿಯಾಗುತ್ತಿತ್ತು. ವಯಸ್ಸಿನಲ್ಲಿ ಹಿರಿಯಳೂ, ಮನೆಯ ಯಜಮಾನಿಯ ಹೆತ್ತ ಮಗಳೂ ತಾನಾಗಿದ್ದುದರಿಂದ, ಈ ಹೊಲಸು ಹುಡುಗಿಯನ್ನು ಸಿಕ್ಕಾಬಟ್ಟೆ ಬಯ್ಯುತ್ತಿದ್ದಳು. ಸರಿ, ಇವರಿಬ್ಬರಿಗೂ ದಿನಾ ಬೆಳಗಾದರೆ ಜಗಳ ಶುರುವಾಗುತ್ತಿತ್ತು. ಕಮಲುವಿನಿಂದ ಅನೇಕ ವೇಳೆ ರತ್ನಳ ಬಿಸಿನೆಸ್ಸಿಗೆ ತೊಂದರೆಯುಂಟಾಗುತ್ತಿತ್ತು. ತಾನೂ ಕೆಟ್ಟು, ಸಾವಿರಾರು ರೂಪಾಯಿ ನಷ್ಟಮಾಡಿದ ಹುಡುಗಿ, ದುಡಿಯುತ್ತಿರುವ ಈ ಹುಡುಗಿಗೂ ಅಡ್ಡಿ ಬರುವುದನ್ನು ಲಕ್ಷಮ್ಮ ಸಹಿಸಲಿಲ್ಲ. ಏನಾದರೂ ಮಾಡಿ ಇದನ್ನು ಹೊರಗೆ ಹೊರಡಿಸಬೇಕೆಂದು ಮನಸ್ಸುಮಾಡಿದಳು.

ಮೂರು ತಿಂಗಳ ಹಿಂದೆ ಹೊಸೂರಿಗೆ ಬಂದು ಬಿಡಾರ ಹಾಕಿದ್ದ ಲಕ್ಷ್ಮೀಪ್ರಸಾದ ನಾಟಕ ಮಂಡಲಿಯ ಮಾಲೀಕ ಚಿನ್ನಪ್ಪ, ಕರಿಯಪ್ಪನ ಮೂಲಕ ಲಕ್ಷಮ್ಮನ ಪರಿಚಯ ಮಾಡಿಕೊಂಡಿದ್ದ. ಹಳೆಯ ಗಿರಾಕಿಗಳ ಆಸಕ್ತಿ ಕಡಮೆಯಾಗುತ್ತಿರುವಾಗ ಹೊಸಹೊಸ ಗಿರಾಕಿಗಳಿಂದ ಬಂದಷ್ಟೆ ಲಾಭ ಎಂದುಕೊಂಡು ಲಕ್ಷಮ್ಮ ಬಿಸಿನೆಸ್ ನಡಸುತ್ತಿದ್ದಳು.

ಮನೆಯ ಈ ಹುಡುಗರ ಗಲಾಟೆಯನ್ನು ಅರಿತುಕೊಂಡ ಚಿನ್ನಪ್ಪ, ಒಂದು ರಾತ್ರಿ ಲಕ್ಷಮ್ಮನಿಗೆ ಸೂಕ್ತವಾದ ಸಲಹೆ ನೀಡಿದ.

ಅವರ ಕಂಪನಿಯಲ್ಲಿ ಅಭಿಮನ್ಯು ಪಾರ್ಟು ಮಾಡುತ್ತಿದ್ದ ಪುಟ್ಟಪ್ಪ ನೋಡುವುದಕ್ಕೆ ಬಹಳ ಚೆನ್ನಾಗಿದ್ದ. ತಂದೆ ತಾಯಿ ಇಲ್ಲದ ತಬ್ಬಲಿ ತಂಜಾವೂರಿನ ಕೃಷ್ಣಭಾಗವತರ ಶಿಷ್ಯನಾಗಿ ಹತ್ತು ವರುಷ ವಿದ್ಯೆ ಕಲಿತು, ಆಮೇಲೆ

ಚಿನ್ನಪ್ಪನ ಪ್ರೇರಣೆಯಿಂದ ಲಕ್ಷ್ಮೀಪ್ರಸಾದ ನಾಟಕ ಮಂಡಲಿ ಸೇರಿದ್ದ. ಚಿನ್ನಪ್ಪನ ಕಂಪನಿಯ ನಾಟಕಗಳ ಜಾಹಿರಾತುಗಳಲ್ಲಿ ಚಿನ್ನಪ್ಪನ ಹೆಸರಿನ ಕೆಳಗೆ, ಸಂಗೀತ ವಿಶಾರದ ಪುಟ್ಟಪ್ಪನ ಹೆಸರು ತಪ್ಪದೆ ಇರುತ್ತಿತ್ತು. ಸಂಬಳ ಅರುವತ್ತು ರೂಪಾಯಿ ಆದರೂ ಇತರ ನಟರಿಗೆ ತಿಳಿಯದಂತೆ ಚಿನ್ನಪ್ಪ, ಲಾಭ ದಲ್ಲಿ ಶೇಕಡ ಐದು ರೂಪಾಯಿಯನ್ನು ಪುಟ್ಟಪ್ಪನ ಲೆಕ್ಕಕ್ಕೆ ಸೇರಿಸುತ್ತಿದ್ದ. ಪುಟ್ಟಪ್ಪನನ್ನು ಕಂಡರೆ ಚಿನ್ನಪ್ಪನಿಗೆ ತುಂಬ ಪ್ರೀತಿ, ವಿಶ್ವಾಸ ಇತ್ತು. ಪುಟ್ಟಪ್ಪ ಐದು ವರುಷ ಎಡೆಬಿಡದೆ ಕಂಪನಿಯ ಸೇವೆ ಮಾಡಿದ್ದ.

ನಾಟಕದ ಕಂಪನಿಯಲ್ಲಿದ್ದರೂ, ಹೇಳುವವರು, ಕೇಳುವವರು, ಯಾರೂ ಇಲ್ಲದಿದ್ದರೂ ಅವನ ಮನಸ್ಸು ನಿರ್ಮಲವಾಗಿತ್ತು. ಉಳಿದ ನಟರಂತೆ ಅವನು ಬೀಡಿ, ಸಿಗರೇಟು ಸಹ ಸೇದುತ್ತಿರಲಿಲ್ಲ. ದೇವರು ದಿಂಡಿರೆಂದರೆ ಬಹಳ ಭಯ ಭಕ್ತಿ. ಒಳ್ಳೆಯ ಜೀವನ ನಡಸುತ್ತಿದ್ದ. ತಾನು ಕೆಟ್ಟಹಾದಿಯಲ್ಲಿದ್ದರೂ ಚಿನ್ನಪ್ಪ ಪುಟ್ಟಪ್ಪನನ್ನು ತುಂಬ ಮೆಚ್ಚಿಕೊಂಡಿದ್ದ. ಅಲ್ಲದೆ, ಎಲ್ಲ ನಟರೂ ಪುಟ್ಟಪ್ಪನನ್ನು ಮಾದರಿಯಾಗಿಟ್ಟುಕೊಳ್ಳಬೇಕೆಂದು, ಆಗಾಗ ಕಂಪನಿಮನೆಯಲ್ಲಿ ಭಾಷಣ ಮಾಡುತ್ತಿದ್ದ.

ಹೆಂಡತಿ ಮಕ್ಕಳಿಲ್ಲದ ಚಿನ್ನಪ್ಪ ಪುಟ್ಟಪ್ಪನನ್ನು ಮಗನಂತೆ, ಒಡಹುಟ್ಟಿದ ತಮ್ಮನಂತೆ ಕಾಣುತ್ತಿದ್ದುದರಿಂದ ಅವನಿಗೆ ಸರಿಯಾದ ಹೆಣ್ಣು ನೋಡಿ ತನ್ನ ಖರ್ಚಿನಿಂದ ಮದುವೆ ಮಾಡಬೇಕೆಂದೂ, ಆ ಸಂಸಾರ ಜೀವನವನ್ನು ಕಣ್ಣು ತುಂಬ ನೋಡಬೇಕೆಂದೂ ಹಂಬಲಿಸುತ್ತಿದ್ದ. ಹಾಳು ಗಂಡಸರ ಕಂಪನಿಮನೆ ಯಲ್ಲಿ ಹಲವಾರು ವರುಷ ಕಳೆದ ಅವನಿಗೆ ಇದೊಂದು ಮಹದಾಸೆಯಾಗಿತ್ತು.

ಬೆಂಗಳೂರಿನಲ್ಲಿದ್ದಾಗ, ಹಾರ್ಮೋನಿಯಂ ರಂಗಪ್ಪನ ತಂಗಿಯ ಮಗಳು ಗೊತ್ತಾಗಿತ್ತು. ಮಾತುಕತೆ ಎಲ್ಲ ಮುಗಿದು, ಸಂಗೀತವಿಶಾರದ ಪುಟ್ಟಪ್ಪನವರ ವಿವಾಹಕ್ಕಾಗಿ ಎಂದು 'ವೀರ ಅಭಿಮನ್ಯು' ಬೆನಿಫಿಟ್ ಆಟ ಸಹ ಆಯಿತು. ಅಂದು ಎಂದೂ ಇಲ್ಲದಷ್ಟು ಕಲೆಕ್ಷನ್. ತಟ್ಟೆಯಲ್ಲಿದ್ದ ಒಂದುಸಾವಿರದೈನೂರು ರೂಪಾಯಿ ಮತ್ತು ಆ ಜನ ನೋಡಿ ಚಿನ್ನಪ್ಪನಿಗೆ ತುಂಬ ಆನಂದವಾಗಿತ್ತು. ಆದರೆ, ಹುಡಗಿಗೆ ಕಿವಿ ಕೇಳಿಸುವುದಿಲ್ಲ ಎಂಬುದು ಆಮೇಲೆ ತಿಳಿಯಿತು. ಎಲ್ಲ ಆಗಿದೆಯಲ್ಲ ಎಂದು ಪುಟ್ಟಪ್ಪ ಸಿದ್ಧವಾಗಿದ್ದರೂ, ಚಿನ್ನಪ್ಪ 'ಬೇರೆ ನೋಡೋಣ' ಎಂದು ಬಿಟ್ಟ. ಮದುವೆ ನಿಂತು ಹೋಯಿತು. ಅದರ ಫಲವಾಗಿ ಹಾರ್ಮೋ

ನಿಯಂ ರಂಗಪ್ಪ ಕಂಪನಿ ಬಿಟ್ಟುಬಿಟ್ಟ. ಆದರೆ ಒಂದು ಸಾವಿರದೈನೂರು ರೂಪಾಯಿ ಪುಟ್ಟಪ್ಪನ ಹೆಸರಿನಲ್ಲಿ ಮೈಸೂರು ಬ್ಯಾಂಕಿನ ಬೆಂಗಳೂರು ಫೋರ್ಟ್ ಬ್ರಾಂಚಿನಲ್ಲಿ ಮೀಸಲಾಗಿ ಉಳಿಯಿತು.

ಲಕ್ಷ್ಮಮ್ಮನ ಮನೆಯ ಎಲ್ಲ ಸಮಾಚಾರವನ್ನೂ ತಿಳಿದಿದ್ದ ಮತ್ತು ಕಮಲಳನ್ನು ಚೆನ್ನಾಗಿ ನೋಡಿದ್ದ ಚಿನ್ನಪ್ಪ ಪುಟ್ಟಪ್ಪನನ್ನು ಕಂಡು ಮಾತಾಡಿದ. ಪುಟ್ಟಪ್ಪ ತಾನು ನಾಟಕದ ಕಂಪನಿಯಲ್ಲಿದ್ದರೂ ನಿಷ್ಠೆಯಿಂದ ಜೀವನ ನಡಸುತ್ತಿದ್ದುದರಿಂದ, ಸೂಳೆಯ ಮಗಳಾದರೂ ಸುಶೀಲೆಯಾದರೆ ಏಕಾಗಬಾರದು, ಎಂದುಕೊಂಡ. ಅದರಲ್ಲೂ ಚಿನ್ನಪ್ಪ ಆರಿಸಿದ ಮೇಲೆ ಅದಕ್ಕೆ ಪ್ರತಿಯಾಡುವ ಸ್ವಭಾವ ಅವನದಾಗಿರಲಿಲ್ಲ. ತಂದೆಯಂತೆ, ಅಣ್ಣನಂತೆ, ಆಪ್ತಮಿತ್ರನಂತೆ ತನ್ನನ್ನು ಕಾಣುತ್ತಿದ್ದ ಚಿನ್ನಪ್ಪನ ಸಲಹೆಗೆ ತನ್ನ ಒಪ್ಪಿಗೆ ಸೂಚಿಸಿದ.

ಇನ್ನು ಕನ್ಯೆಯನ್ನು ಒಪ್ಪಿಸಬೇಕಾಗಿತ್ತು.

ಮುಳ್ಳಿನಂತಿದ್ದ ಮಗಳನ್ನು ದೂರ ಇಟ್ಟರೆ ಸಾಕೆಂದುಕೊಳ್ಳುತ್ತಿದ್ದ ತಾಯಿ ಈ ಯೋಚನೆ ಮಾಡಿದ ಮೇಲೆ, ಮಾರನೆಯ ದಿನವೇ "ಕಮಲೂ ಬಾ ಇಲ್ಲಿ" ಎಂದು ಕರೆದಳು.

ತನ್ನ ಒಣಗಿದ ಸೀರೆಯನ್ನು ಮಡಿಸಿ ಪೆಟ್ಟಿಗೆಯಲ್ಲಿಡುತ್ತಿದ್ದ ಕಮಲ ಏನೋ ಬಂತೆಂದುಕೊಂಡು "ಏನಮ್ಮಾ?" ಎಂದು ರಾಗ ಎಳೆದು ಕೇಳಿದಳು.

"ಏನೂ ಇಲ್ಲ. ಒಂದು ವಿಷಯ, ನಿನ್ನ ಅಭಿಪ್ರಾಯ ಕೇಳೋಣಾಂತ."

"ಏನು?"

"ಒಂದು ವರ ಬಂದಿದೆ. ಒಪ್ಕೊಳ್ತೀಯಾಂತ. ಚಿನ್ನಪ್ಪನೋರ ಕಂಪನಿಯಲ್ಲಿ ಮ್ಯಾನೇಜರಾಗಿದಾನೆ—ಪುಟ್ಟಪ್ಪಾಂತ. ಬಹಳ ಒಳ್ಳೆಯ ಹುಡುಗಾಂತ ಎಲ್ಲ ಹೇಳ್ತಾರೆ. ಚಿನ್ನಪ್ಪನೋರೂ ಹೇಳಿದರು. ಹುಡುಗನಿಗೆ ತಂದೆ ತಾಯಿ ಯಾರೂ ಇಲ್ಲವಂತೆ. ಆಗಲೇ ಎರಡು ಮೂರು ಸಾವಿರ ರೂಪಾಯಿ ಆಸ್ತಿ ಮಾಡಿದಾನಂತೆ. ಹತ್‌ಹತ್ರ ಎರಡು ಸಾವಿರ ರೂಪಾಯಿ ಖರ್ಚುಮಾಡಿ ಮದುವೆ ಮಾಡ್ಕೊಳ್ತಾನಂತೆ....ಬಹಳ ಒಳ್ಳೆ ಗುಣಾಂತೆ....ನೋಡು, ನೀನು ಒಪ್ಪಿದರೆ ಮುಂದಿನ ಮಾತಾಡಬಹುದು."

ಕಮಲು ಸುಮ್ಮನೆ ಕುಳಿತಿದ್ದಳು.

"ನಾಳೆ ಮಧ್ಯಾಹ್ನ ಚಿನ್ನಪ್ಪನೋರು ಬರ್ತಾರೆ. ನೀನು ಯಾವುದೂ

ಹೇಳಿದರೆ ಮುಂದಿನ ಮಾತಾಡೋಕೆ ಅನುಕೂಲವಾಗುತ್ತೆ” ಎಂದು ತಾಯಿ, ಉತ್ತರವನ್ನು ತಕ್ಷಣವೆ ಅಪೇಕ್ಷಿಸುವ ದನಿಯಲ್ಲಿ ಹೇಳಿದಳು.

ಯೋಚನೆಯಲ್ಲಿ ಮಗ್ನಳಾಗಿದ್ದ ಕಮಲು “ ಬೆಳಗ್ಗೆ ಹೇಳ್ತೀನಿ ”ಎಂದಳು.

“ ಹ್ಞು, ಏನಾದರೂ ಒಂದು ತೀರ್ಮಾನವಾಗಿ ಹೇಳಿಬಿಡು. ಸುಮ್ಮನೆ ಮೂದೇವಿ ಕೂತ್ಕೊಂಡ್ ಹಾಗೆ ಕೂತಿರ್ಬ್ಯಾಡಾ. ಇತ್ತಲಾ ಕಡೆ ಹಾಗೂ ಇಲ್ಲ, ಹೀಗೂ ಇಲ್ಲ; ಏನಾಗಬೇಕು ವಯಸ್ಸು ! ” ಎಂದು, ತೀರ್ಮಾನವಾಗ ಲೆಂದೊ ಏನೊ !—ಬಿಸಿಯಾಗಿ ಮಾತಾಡಿ ತಾಯಿ ಅಡುಗೆಮನೆಯ ಕಡೆಗೆ ಹೊರಟುಹೋದಳು.

* * * *

ಕಮಲ ರಾತ್ರಿಯೆಲ್ಲ ಯೋಚನೆ ಮಾಡಿದಳು.

ಆ ಮನೆಯಲ್ಲಿ ಜೀವಿಸಿ ಅವಳಿಗೆ ಸಾಕಾಗಿತ್ತು. ರತ್ನಳ ಪ್ರೇಮಕ್ಕಾಗಿ ಕಾಮಿಸಿ ಬರುತ್ತಿದ್ದ ನಾಗರಾಜ, ಬಿಸಿನೆಸ್ಸಿನ ನೆಪದಲ್ಲಿ ಹೊಸದಾಗಿ ಸ್ನೇಹ ಮಾಡಿಕೊಂಡಿದ್ದ ಇನ್‌ಷೂರೆನ್ಸ್ ಕಂಪನಿ ಆರ್ಗನೈಸರ್ ನರಸಿಂಹಮೂರ್ತಿ, ಪಕ್ಕದ ಹಳೆಯ ಮನೆಯನ್ನು ಕೊಂಡು ಕೆಡವಿಸಿ ಅದರ ಜಾಗದಲ್ಲಿ ದೊಡ್ಡ ಬಂಗಲೆ ಕಟ್ಟಿಸುತ್ತಿದ್ದ ವೀರಪ್ಪಶೆಟ್ಟರ ಮಗ ಕಂಟ್ರಾಕ್ಟರ್ ರಾಜಪ್ಪಶೆಟ್ಟಿ, ಊರಿಗೆ ಹೊಸದಾಗಿ ಬಂದ ಪ್ರೊಬೇಷನರಿ ಸಬ್‌ಇನ್‌ಸ್ಪೆಕ್ಟರ್ ನಾರಾಯಣ ಸ್ವಾಮಿ, ಜ್ಯುಯಲರ್ ಅನಂತಯ್ಯ, ಟಾಡಿ ಕಂಟ್ರಾಕ್ಟರ್ ಮುನಿಸ್ವಾಮಪ್ಪ ನವರ ಮಗ ವಿಷಕಂಠು, ಇವರೆಲ್ಲರ ಪೆರೇಡು ನೋಡಿ ನೋಡಿ ಅವಳಿಗೆ ಬೇಸರ ವಾಗಿತ್ತು. ಎಲ್ಲರನ್ನೂ ಕೈಯಲ್ಲಿಟ್ಟುಕೊಂಡು ಕುಣಿಸುತ್ತಿದ್ದ ರತ್ನಳ ಹೊಲಸು ವ್ಯವಹಾರದಿಂದ ತಾನು ದೂರವಾಗಬೇಕೆನಿಸಿತ್ತು.

ಆರ್ಗನೈಸರ್ ನರಸಿಂಹಮೂರ್ತಿ ಇವಳನ್ನೊಬ್ಬ ಏಜೆಂಟ್ ಮಾಡಿ, ಇವಳಿಗಾಗಿ ತಾನು ಬಿಸಿನೆಸ್ ಮಾಡುತ್ತ, ಆಗಾಗ ಮನೆಯ ಮುಂದೆ ಕಾರು ನಿಲ್ಲಿಸುತ್ತಿದ್ದ. ನಾಗರಾಜ ಸುರಿಯುವ ದುಡ್ಡಿಗೆ ನಾಲ್ಕು ನಿಮಿಷ ಕುಳಿತು ಒಳ್ಳೆಯ ಮಾತಾಡಿ ಅವನನ್ನು ರಮಿಸಿ ಕಳಿಸಿ, ರತ್ನ ನರಸಿಂಹಮೂರ್ತಿಯ ಕಾರಿನಲ್ಲಿ ಕುಳಿತು ಊರಿಂದಾಚೆ ಓಡಿಹೋಗುತ್ತಿದ್ದಳು. ಬಿಸಿನೆಸ್ ಮಾಡುವ ನೆಪದಲ್ಲಿ ಬೆಂಗಳೂರು, ಮೈಸೂರು, ಶ್ರೀರಂಗಪಟ್ಟಣ, ಕೃಷ್ಣರಾಜಸಾಗರ ಎಲ್ಲ ಆ ಕಾರಿನಲ್ಲಿ ಕುಳಿತು ನೋಡಿ ಬಂದಿದ್ದಳು.

ಕಂಟ್ರಾಕ್ಟರ್ ರಾಜಪ್ಪಶೆಟ್ಟಿ, ಲಕ್ಷಮ್ಮನ ಹಳೆಯ ಮನೆಯನ್ನು ಕೆಡವಿಸಿ, ಕಡಮೆ ಖರ್ಚಿನಲ್ಲಿ ದೊಡ್ಡ ಬಂಗಲೆ ಕಟ್ಟಿಸಿಕೊಡುವ ನೆಪದಲ್ಲಿ ರತ್ನಳ ಸನ್ನಿಧಿಯನ್ನು ಆಗಾಗ ಬಯಸುತ್ತಿದ್ದ. ಸಬ್ ಇನ್‌ಸ್ಪೆಕ್ಟರ್ ನಾರಾಯಣಸ್ವಾಮಿ ಬಸ್ ಸ್ಟ್ಯಾಂಡಿನಲ್ಲಿ ರತ್ನಳನ್ನು ಮೊದಲು ಬಾರಿ ನೋಡಿದಾಗ ಅವಳನ್ನು ಅರೆಸ್ಟ್ ಮಾಡಿದ್ದ. ವ್ಯಾಪಾರಕ್ಕಾಗಿ ಬೆಂಗಳೂರಿಗೆ ತೆಗೆದುಕೊಂಡು ಹೋಗಿದ್ದ ಸಿಲ್ಕ್ ಪೈಕಿ ಮಾರಾಟ ಮಾಡದೆ ಉಳಿಸಿಕೊಂಡು ತಂದಿದ್ದ ನಲವತ್ತು ಗಜವನ್ನು ಸೂಟ್‌ಕೇಸಿನಲ್ಲಿಟ್ಟುಕೊಂಡು ಒಬ್ಬಳೇ ಊರಿಗೆ ವಾಪಸು ಬಂದಾಗ, ಹೊಸ ಹುರುಪಿನ ಸಬ್‌ಇನ್‌ಸ್ಪೆಕ್ಟರ್ ಕೈಗೆ ರತ್ನ ಸಿಕ್ಕಿಬಿದ್ದಿದ್ದಳು. ಅಲ್ಲಿಯೇ ಡ್ಯೂಟಿಯ ಮೇಲಿದ್ದ ಕರಿಯಪ್ಪ ಹತ್ತಿರ ಬಂದಾಗ, ಅವಳು "ಕರಿಯಪ್ಪಣ್ಣ, ಇಲ್ಲಿ ನೋಡಪ್ಪ, ಯಾರೋ ನನ್ನ ಸೂಟ್‌ಕೇಸಿನಲ್ಲಿ ಸಿಲ್ಕ್ ತುಂಬಿ ಬಿಟ್ಟಿದ್ದಾರೆ. ಈವಾಗ ನೋಡಿದೆ ಗೊತ್ತಾಯ್ತು. ಬೆಂಗಳೂರಿನಲ್ಲಿ ನಾನು ಹೋಟಲಲ್ಲಿಳಿದುಕೊಂಡಿದ್ದೆ. ನನ್ನ ರೂಮಿನಲ್ಲೇ ಇನ್ನೊಬ್ಬಳು ಇದ್ದಳು....ಅವಳೆಲ್ಲೋ ರಾತ್ರಿ ಇಟ್ಟುಬಿಟ್ಟಿದಾಳೆ!" ಎಂದು ಕತೆ ಕಟ್ಟಿ ಗೋಗರೆದಳು. ಅಷ್ಟು ಹೊತ್ತಿಗಾಗಲೆ, ಇಪ್ಪತ್ತೈದು ವರುಷದ ಬ್ರಹ್ಮಚಾರಿ ನಾರಾಯಣಸ್ವಾಮಿ ಇವಳ ಕಣ್ಣಿಗೆ ಬಲಿಯಾಗಿಬಿಟ್ಟಿದ್ದ.

ಕರಿಯಪ್ಪ ನೆಟ್ಟಗೆ ನಿಂತು, ಸಾಹೇಬರಿಗೆ ಸಲಾಂ ಹಾಕಿದಾಗ ನಾರಾಯಣಸ್ವಾಮಿ "ಇವರು ನಿಂಗೆ ಗೊತ್ತ?" ಎಂದು ಕೇಳಿದ.

"ಗೊತ್ತು ಸಾರ್, ಚೆನ್ನಾಗಿ ಗೊತ್ತು" ಎಂದು ಕರಿಯಪ್ಪ ಉತ್ತರ ಕೊಟ್ಟ.

"ಇವರ ಮೇಲೆ ಸ್ವಲ್ಪ ನಿಗಾ ಇಡಬೇಕು" ಎಂದು ಅಪ್ಪಣೆ ಆಯಿತು.

ಆಮೇಲೆ, ಕರಿಯಪ್ಪ ಬಹಳ ಬುದ್ಧಿವಂತಿಕೆಯಿಂದ ಸಾಹೇಬರ ನಿಗಾ ಇವಳ ಮೇಲೆ ಬೀಳುವಂತೆ ಮಾಡಿದ.

ರತ್ನಳಿಗೆ ಮತ್ತು ಕಮಲುವಿಗೆ ಒಂದೊಂದು ಜೊತೆ ಬಳೆ ಮಾಡಿಸಬೇಕೆಂದು ಲಕ್ಷಮ್ಮ ಜ್ಯೂಯಲರ್ ಅನಂತಯ್ಯನನ್ನು ಮನೆಗೆ ಕರೆಸಿದಾಗ, ಆ ಬಿಳಿಯ ಜುಬ್ಬ ಹಾಕಿಕೊಂಡು ಗುಂಗುರು ಕ್ರಾಪು ಬಿಟ್ಟಿದ್ದ ಕೆಂಪು ಮುಖದ ಅನಂತಯ್ಯ ರತ್ನಳ ಬಲೆಗೆ ಬಿದ್ದಿದ್ದ. ಅವನು ತನ್ನ ಸ್ವಂತ ಖರ್ಚಿನಿಂದ ಮಾಡಿ ಕಳುಹಿಸಿದ್ದ, ಅಗಲವಾದ ಹಸುರು ಹರಳಿನ ಉಂಗುರ ರತ್ನಳ ಕೈಯ

ಸೌಂದರ್ಯವನ್ನು ಹೆಚ್ಚಿಸಿದ್ದನ್ನು ಕಮಲ ನೋಡಿ ಅಸಹ್ಯಪಟ್ಟುಕೊಂಡಿದ್ದಳು.

ಟಾಡಿ ಕಂಟ್ರಾಕ್ಟರ್ ಮುನಿಸ್ವಾಮಪ್ಪನವರ ಮಗ ವಿಷಕಂಠು ಸಿನಿಮಾ ಥಿಯೇಟರ್ ಕಟ್ಟಿಸುವ ನೆಪದಲ್ಲಿ, ಐದು ವರುಷದ ಹಿಂದೆ ಲಕ್ಷ್ಮಮ್ಮ ಕೊಂಡು ಕೊಂಡಿದ್ದ ಖಾಲಿ ನಿವೇಶನವನ್ನು ಖರೀದಿಗೆ ಕೇಳಲು—ಕೇಳುವ ನೆಪದಲ್ಲಿ ರತ್ನಳನ್ನೊಮ್ಮೆ ನೋಡಿ, ಪರಿಚಯ ಮಾಡಿಕೊಳ್ಳಲು—ಹೊಸ 'ಪ್ಲಿಮತ್' ಕಾರಿನಲ್ಲಿ ಅವಳ ಮನೆಗೆ ಬಂದಿದ್ದ.

ಇವರೆಲ್ಲರ ಕುಣಿತಕ್ಕೂ ಹಾಡಿಕೊಂಡು, ಇವರನ್ನು ಕುಣಿಸಿಕೊಂಡು 'ಬಿಸಿನೆಸ್ ಬಿಸಿನೆಸ್' ಎಂದಾಡುತ್ತಿದ್ದ ರತ್ನಳಿಂದ ತಾನು ದೂರ ಹೋಗ ಬೇಕಪ್ಪ, ಎನ್ನಿಸಿತ್ತು.

ಪುಟ್ಟಪ್ಪನಿಗೆ ಒಳ್ಳೆಯ ವೈಕಟ್ಟಿದೆ, ಆತ ಒಳ್ಳೆಯ ನಟ, ಒಳ್ಳೆಯ ಸಂಗೀತಗಾರ ಎಂಬುದನ್ನು ತಾನೇ ನಾಲ್ಕು ನಾಟಕ ನೋಡಿ ತಿಳಿದಿದ್ದಳು. ಅವನ ವಿಷಯ ಕಮಲಳ ಕಿವಿಗೆ ಅನ್ಯರ ಬಾಯಿಂದಲೂ ಅಲ್ಪ ಸ್ವಲ್ಪ ಬಿದ್ದಿತ್ತು. "ಒಳ್ಳೆಯ ಮನುಷ್ಯ, ನೋಡುವುದಕ್ಕೂ ಸುಂದರವಾಗಿದ್ದಾನೆ. ಚಿನ್ನಪ್ಪನಿಗೆ ಈತ ಸಾಕುಮಗನಂತಿದ್ದಾನೆ. ನಾಳೆ ಕಂಪನಿಗೆ ಇವನೇ ಯಜಮಾನ. ಇವನ ಗುಣವೂ ಸಹ ಒಳ್ಳೆಯದು. ನಾಟಕದ ಕಂಪನಿಯಲ್ಲಿ ಇದಾನೇಂತ ಹೇಳುವ ಹಾಗೆಯೇ ಇಲ್ಲ. ಒಪ್ಪಿಕೊಂಡು ಬಿಡು. ನಿನ್ನ ಇಷ್ಟದಂತೆ ಸುಖ ವಾಗಿರಬಹುದು. ಚಿನ್ನಪ್ಪನಿಗೂ ನಿನ್ನನ್ನು ಕಂಡರೆ ಪ್ರೀತಿ, ವಿಶ್ವಾಸ" ಎಂದು ಹೇಳಿದ ಕರಿಯಪ್ಪನ ಮಾತಿನಲ್ಲೂ ಅವಳಿಗೆ ನಂಬಿಕೆ ಮೂಡಿತ್ತು; ನಂಜುಂ ಡಿಯೂ ನಾಲ್ಕು ವಿಷಯ ಹೇಳಿದ್ದ.

'ಆಗಲಿ, ಸದ್ಯ ಈ ಹೊಲಸು ಆವರಣ ಬಿಟ್ಟು ಹೋದರೆ ಸಾಕು. ಆ ಹೊಸ ಮನೆಗೆ ನಾನು ಯಜಮಾನಿ ಆಗುತ್ತೇನೆ. ನನಗೆ ಬೇಕಾದ ರೀತಿಯಲ್ಲಿ ಜೀವನ ನಡಸಲು ನನಗೆ ಹಕ್ಕಿರುತ್ತದೆ. ಇಲ್ಲಾದರೋ ಇವರ ತಾಳಕ್ಕೆ ಸರಿ ಯಾಗಿ, ಇವರ ಗುಣಕ್ಕೆ ತಕ್ಕ ಹಾಗೆ, ಸೂತ್ರದ ಬೊಂಬೆಯಂತೆ ಬಾಳಬೇಕು. ಅದು ನನಗೆ ಸರಿ ಬೀಳದು; ಆದ್ದರಿಂದಲೇ ದಿನ ಬೆಳಗಾದರೆ ಜಗಳ' ಎಂದು ಕೊಂಡಳು.

ಎಲ್ಲಕ್ಕಿಂತ ಹೆಚ್ಚಾಗಿ ಆ ಸುಡುಗಾಡು ಗಿರಾಕಿಗಳು ಕಮಲುವನ್ನು ವಕ್ರ ದೃಷ್ಟಿಯಿಂದ ನೋಡುತ್ತಾರೆ. ಮೊನ್ನೆ ವಿಷಕಂಠು, ತುಳಸಿ ಕಟ್ಟೆಯ ಹತ್ತಿರ

ಕುಳಿತಿದ್ದ ಅವಳನ್ನು ಹೊಲಸುಗಣ್ಣಿಂದ ನೋಡಿದ. ಒಮ್ಮೆ ಮಹಡಿಯ ಮೆಟ್ಟಲು ಹತ್ತುತ್ತಿದ್ದಾಗ, ಮೇಲಿಂದ ಇಳಿದು ಬಂದ ನರಸಿಂಹಮೂರ್ತಿ ಕಮಲಳ ಎಡಗೈ ಹಿಡಿದು ಬಿಟ್ಟಿದ್ದ. ಕಮಲ 'ಥೂ!' ಎಂದು ಕೊಡವಿಕೊಂಡು ಮೇಲೆ ಓಡಿಬಿಟ್ಟಿದ್ದಳು.

ಸಾವಿರದ ಮಧ್ಯೆ ಸಾಸಿವೆಯಾಗಿದ್ದ ನಾಗರಾಜನನ್ನು ಲಕ್ಷ್ಯಕ್ಕೆ ಇಡದಿದ್ದ ರತ್ನ ದುಡ್ಡಿಗಾಗಿ ಬರಿಯ ಮಾತಿನ ಸುಖವನ್ನು ಮಾತ್ರ ಅವನಿಗೆ ಮೀಸಲಾಗಿಟ್ಟಿದ್ದಳು. ಒಂದು ದಿನ ಆತ, ಕೋಣೆಯಲ್ಲಿ ಹಿಂದು ಮುಂದಾಗಿ ನಿಂತಿದ್ದ ಕಮಲಳನ್ನು ರತ್ನ ಎಂದು ತಿಳಿದು 'ಒಂದೇ ಒಂದು ಮು....' ಎಂದು ಅಂಗಲಾಚಿ ಬೇಡಿ, ಮುಖ ನೋಡಿದ ಮೇಲೂ ಮುಟ್ಟುವುದಕ್ಕೇ ಬಂದುಬಿಟ್ಟಿದ್ದ. ಆ ಕಾಮದ ಪಶುವಿಗೆ, ಮೊದಲು ತನ್ನನ್ನು ಗೊತ್ತುಮಾಡಿದ್ದರೆಂಬ ಹೆಮ್ಮೆಯೊ ಏನೊ!

ಸದ್ಯ ಈ ಮನೆ ಬಿಟ್ಟರೆ ಸಾಕಪ್ಪ ಎಂದುಕೊಂಡಿದ್ದ ಕಮಲ ರಾತ್ರಿಯೆಲ್ಲ ಯೋಚನೆ ಮಾಡಿ, 'ಒಪ್ಪಿದೆ' ಎಂದುಕೊಂಡು ಮಲಗಿದ್ದಳು.

* * * *

ಬೆಳಗಾದ ಮೇಲೆ, ತಾಯಿ ಉತ್ತರ ಕೇಳುವುದಕ್ಕೆ ಮುಂಚೆಯೆ ಕಮಲ ಒಂದು ಚೂರು ಕಾಗದದಲ್ಲಿ 'ನಾನು ಒಪ್ಪಿದ್ದೇನೆ' ಎಂದು ಬರೆದು ತಾಯಿಯ ಕೈಯಲ್ಲಿಟ್ಟು, ಕೋಣೆಗೆ ಓಡಿದಳು.

ಮಗಳ ನಿರ್ಧಾರ ನೋಡಿ ತಾಯಿಗೆ ಆನಂದವಾಯಿತು. ತಕ್ಷಣವೆ ನಂಜುಂಡಿಯನ್ನು ಕೂಗಿ "ಕಂಪನಿ ಮನೆಗೆ ಹೋಗಿ ಚಿನ್ನಪ್ಪನವರನ್ನು ಕರೆದುಕೊಂಡು ಬಾ. ಹಾಗೇ ಮಾದಪ್ಪನವರ ಅಂಗಡಿಗೆ ಹೋಗಿ, ನಿನ್ನೆ ನಿಮ್ಮ ಬಸಪ್ಪ ಬಂದಿದ್ದ....ಬಾಡಿಗೇನ ನಾಳೆ ಕಳಿಸ್ತಾರೆ....ಸ್ವಲ್ಪ ತಾವು ಮನೇ ಹತ್ರ ಬಂದು ನೋಡ್ಬೇಕಂತೆ—ಸುಣ್ಣ ಬಣ್ಣ ಮಾಡಿಸ್ಬೇಕಾಗಿದೇಂತ ತಿಳಿಸಿ, ಬೇಗ ಬಾ" ಎಂದು ಹೇಳಿ ಓಡಿಸಿದಳು. ಕಾಫಿಗೆ ಇಟ್ಟಿದ್ದ ನಂಜುಂಡಿ ಬೇಗ ಬನೀನು ಸಿಕ್ಕಿಸಿಕೊಂಡು, ಹೆಗಲ ಮೇಲೊಂದು ಟವಲು ಹಾಕಿ ಕಂಪನಿ ಮನೆಯ ಕಡೆಗೆ ಹೊರಟ.

ಪೇಟೆಯ ಬೀದಿಯಲ್ಲಿ ಮಾದಪ್ಪನವರ ಮನೆಯ ಪಕ್ಕದ ಗಲ್ಲಿಯಲ್ಲಿ ಕರಿಯಪ್ಪನ ರೂಮು. ಆ ರೂಮಿಗೆ ನಾಲ್ಕನೆಯದೇ ಕಂಪನಿಯವರು ವಾಸಕ್ಕಾಗಿ

ಬಾಡಿಗೆಗೆ ತೆಗೆದುಕೊಂಡಿದ್ದ ಮನೆ. ನಂಜುಂಡಿ ಬಾಗಿಲಲ್ಲಿ ನಿಂತು ಚಿನ್ನಪ್ಪ ನವರ ಹೆಸರು ಕೂಗಿದಾಗ, ದುಂಡು ಮುಖದ ಸುಂದರ ಮೈಕಟ್ಟಿನ ಪುಟ್ಟಪ್ಪ ಹೊರಗೆ ಬಂದ. ದಟ್ಟಿಪಂಚೆ ಉಟ್ಟುಕೊಂಡು ಮೇಲೆ ಏನನ್ನೂ ಹೊದ್ದು ಕೊಳ್ಳದೆ ಮೈ ತುಂಬ, ಹಣೆ ತುಂಬ ವಿಭೂತಿ ಹಚ್ಚಿಕೊಂಡು ಬಂದುದನ್ನು ನೋಡಿದರೆ ಆತ ಈಗತಾನೆ ಪೂಜೆಯಿಂದ ಎದ್ದು ಬಂದಂತಿತ್ತು. ಕಪ್ಪು ಹುಬ್ಬು ಗೂದಲಿನ ಮೇಲೆ ಬಳಿದ ಬಿಳಿಯ ವಿಭೂತಿಯ ಪಟ್ಟಿ, ಎರಡು ಕಣ್ಣಿನ ನಡುವೆ ಒಂದಕ್ಕೊಂದು ನಂಟು ಮಾಡಲು ಅಂಟಿಸಿದ ದೊಡ್ಡ ಕುಂಕುಮದ ಬಟ್ಟು ಆ ಮನುಷ್ಯನ ಶೀಲವನ್ನು ವ್ಯಕ್ತಪಡಿಸುತ್ತಿತ್ತು.

ನಂಜುಂಡಿ "ಚಿನ್ನಪ್ನೋರು ಇದಾರಾ ?" ಎಂದುದಕ್ಕೆ ಪುಟ್ಟಪ್ಪ "ಇಲ್ಲ, ಈಗತಾನೆ ಥೇಟರ ಹತ್ತಿರ ಹೋದರು........ಬೇಗ ಹೋಗಿ, ಅಲ್ಲಿ ಸಿಗ್ತಾರೆ" ಎಂದ.

ನಾಟಕಗಳಲ್ಲಿ, ನಾಟಕದ ಹೊರಗೆ ಚೆನ್ನಾಗಿ ನೋಡಿದ್ದ ಪುಟ್ಟಪ್ಪನನ್ನು ನಂಜುಂಡಿ ಬಹಳ ಮೆಚ್ಚಿಕೊಂಡಿದ್ದರೂ, ತಾನು ಇಂಥವರ ಮನೆಯವನು, ಬೇಕಾದಷ್ಟು ಬಿಟ್ಟಿ ನಾಟಕ ನೋಡಿದವನು, ತನ್ನ ಕಸಬು ಇಂಥದು ಎಂಬು ದನ್ನು ಯಾವ ರೀತಿಯೂ ಆತನೊಡನೆ ವ್ಯಕ್ತಪಡಿಸುವ ಸುಯೋಗ ಅವನಿಗೆ ಸಿಕ್ಕಿರಲಿಲ್ಲ. ಪುಟ್ಟಪ್ಪನೂ ನಂಜುಂಡಿಯನ್ನು ಅನೇಕ ಬಾರಿ ನೋಡಿದ್ದ. ಆದರೆ ಆತ, ಚಿನ್ನಪ್ಪ ಹೋಗುತ್ತಿರುವ ಮನೆಯ ಆಳು ಎಂಬುದು ತಿಳಿದಿರಲಿಲ್ಲ. ಕಂಟ್ರಾಕ್ಟ್‌ದಾರರೋ, ಲೈಟಿನವರೋ, ಪ್ರೆಸ್ಸಿನವರೋ ಇನ್ನಾರೋ ಕಳಿಸಿರ ಬಹುದೆಂದು ತಿಳಿದು 'ಥೇಟರ ಹತ್ತಿರವೇ ಇರ್ತಾರೆ. ಈಗ ಹೋದರು ಕಾಫಿ ಕುಡಿದ್ಕೊಂಡು. ಬೇಗ ಹೋಗಿ ಸಿಗ್ತಾರೆ' ಎಂದು ಪುನಃ ಹೇಳಿ, ಆಗಲೆ ಹೆಜ್ಜೆ ಹಾಕುತ್ತಿದ್ದ ವ್ಯಕ್ತಿಗೆ ಬೇಗ ಬೇಗ ಹೋಗುವಂತೆ ಹುರಿದುಂಬಿಸಿದ.

ಥಿಯೇಟರಿನ ಹತ್ತಿರ ಇದ್ದ ಚಿನ್ನಪ್ಪನವರನ್ನು ನಂಜುಂಡಿ ಮನೆಗೆ ಕರೆ ತಂದಾಗ ಒಂಭತ್ತು ಗಂಟೆಯ ಸಮಯ. ಲಕ್ಷಮ್ಮ, ಚಿನ್ನಪ್ಪ ಕೋಣೆಯಲ್ಲಿ ಕುಳಿತು ಮಾತುಕತೆ ಆಡಿದರು. ಮಧ್ಯಾಹ್ನ ಪುಟ್ಟಪ್ಪನನ್ನು ಕರೆದುಕೊಂಡು ಬಂದು ಹೆಣ್ಣು ತೋರಿಸುವುದು, ಆಮೇಲೆ ಮುಂದಿನ ಏರ್ಪಾಟು ಎಂದು ನಿಶ್ಚಯವಾಯಿತು.

ಲಕ್ಷಮ್ಮ "ಹುಡುಗ ಒಪ್ಪದೆ ಏನು. ಹುಡುಗೀನೂ ಒಪ್ಪೇ ಒಪ್ತಾಳೆ—

ನಾಟಕದಲ್ಲಿ ನೋಡಿಲ್ವೆ ಅವನನ್ನ! ಎಲ್ಲ ಆಗುತ್ತೆ. ನಾ ಹೇಳಿದೆನಲ್ಲ, ನನ್ನ ಇಷ್ಟಾನ. ಅದರಂತೆ ಮೂಡ್ಲಹಳ್ಳಿ ಛತ್ರದಲ್ಲಿ ನಡಸೋ ಏರ್ಪಾಟು ಮಾಡ ಬೇಕು. ಸುಮ್ನೆ ಟಾಂಟಾಂ ಬೇಡ. ಅದೇಕೊ ನನಗೆ ಇಷ್ಟವಿಲ್ಲ. ಎಲ್ಲ ಗುಟ್ಟುಗುಟ್ಟಾಗಿ ನಡೆದಂತೇ ಇರಬೇಕು" ಎಂದು ತನ್ನ ಅಭಿಪ್ರಾಯವನ್ನು ಮತ್ತೆ ತಿಳಿಸಿದಳು.

ಮೂವತ್ತು ವರುಷ ಮೀರಿದ್ದ ಅವಳು ಇಬ್ಬರು ಮಕ್ಕಳನ್ನು ಸರ್ವಿಸಿಗೆ ಹಾಕಲು ಬ್ರಹ್ಮಪ್ರಯತ್ನ ಮಾಡಿ ಅರ್ಧ ಸೋತಿದ್ದಳು. ಈ ವಿಷಯದಲ್ಲಿ ಜನ ಆಡಿಕೊಳ್ಳುತ್ತಿದ್ದರು. ಪಕ್ಕದ ಮನೆಯ ಮೀನಾಕ್ಷಮ್ಮ ಯಾರೆದುರಿಗೋ ಹೇಳಿದಳಂತೆ, "ಹೊರಗಿನ ಮಗಳು ಹಾದಿಗೆ ಬಂದರೂ ಹೆತ್ತ ಮಗಳೇ ಕತ್ತಿ ಕಟ್ಟಿದಾಳೆ. ಅದಕ್ಕೇನ್ ಕಾರಣ ಗೊತ್ತೆ! ಅದೆಲ್ಲ ಆ ಲಕ್ಷ್ಮಮ್ಮನ ಆಟಾನೆ. ಮಗಳಿಗೆ ಆ ಹೊಲಸು ಜೀವನ ಬ್ಯಾಡಾಂತ ಅವಳನ್ನು ಆ ರೀತಿ ಹಟ ಹಿಡಿಸಿ, ಹೊರಗಿನ ಈ ಹುಡುಗೀಗೆ ಕಸಬು ಹೇಳಿಕೊಡ್ತಿರೋದು. ನೋಡೋರ ಕಣ್ಣಿಗೆ ಜಗಳ, ವ್ಯಾಜ್ಯ, ಕೂಗಾಟ" ಎಂದು ಆಕೆ ಹೇಳಿದ ಮಾತು ನಂಜುಂಡಿಯ ಮೂಲಕ ತನ್ನ ಕಿವಿಗೆ ಬಿದ್ದಿತ್ತು. ಆ ಮಾತು ಕೇಳಿದಾಗ ಲಕ್ಷ್ಮಮ್ಮನಿಗೆ ತುಂಬ ಕೋಪ ಬಂತು; ಹೋಗಿ ಜಗಳ ಆಡಿಬಿಡೋಣ, ಎಂದುಕೊಂಡಳು.

ಆಮೇಲಾಮೇಲೆ ಇಂಥ ಸಾವಿರ ಮಾತು ಇವಳ ಕಿವಿಗೆ ಬೀಳತೊಡಗಿತು. 'ಕಮಲಮ್ಮನನ್ನು ನಂಜಪ್ಪಶೆಟ್ಟರ ಮಗ ನಾಗರಾಜಪ್ಪನಿಗೆ ಕೊಟ್ಟು ಮದುವೆ ಶಾಸ್ತ್ರ ಮಾಡ್ತಾಳಂತೆ, ಅವನ ಹತ್ತಿರ ದುಡ್ಡು ಹೊಡೆಯೋಕೆ. ಆ ಹುಡುಗಿಗೆ ಇಷ್ಟ ಇಲ್ಲವಂತೆ........ರತ್ನಳಿಗಾಗಿ ಆ ಪ್ರೊಬೇಷನರಿ ಸಬ್ ಇನ್‌ಸ್ಪೆಕ್ಟರ್ ನಾರಾಯಣಸ್ವಾಮಿ ಬರ್‍ತಾ ಇದಾನೆ, ಇನ್ನೂ ಯಾರ್‍ಯಾರೋ ಬರ್‍ತಾ ಇದಾರೆ. ಅವಳ ಮಾತಿಗೆ ಮರುಳಾಗಿ, ಇವರೆಲ್ಲರ ಸುಖಕ್ಕಾಗಿ ಬೆಪ್ಪುತಕ್ಕಡಿ ನಾಗರಾಜ ದುಡ್ಡು ಸುರೀತಾ ಇದೆ.... ರತ್ನ ಒಂದಲ್ಲ ಒಂದು ದಿನ ಯಾರನ್ನೋ ಕಟ್ಟಿಕೊಂಡು ಓಡಿಹೋಗೋ ಹಾಗೆ ಕಾಣುತ್ತೆ. ಆಗಲೆ ನಾಲ್ಕು ಸಲ ಆ ನರಸಿಂಹಮೂರ್ತಿಯ ಜೊತೆ ಬೆಂಗಳೂರಿಗೆ ಓಡಿಹೋಗಿಬಿಟ್ಟಿದ್ದಳು. ಒಂದೊಂದು ವಾರದ ಮೇಲೆ ವಾಪಸು ಬಂದಳು'— ಹೀಗೆ ಏನೇನೋ ಹುಚ್ಚುಹುಚ್ಚು ಮಾತು.

ಏನಾದರೂ ಆಡಿಕೊಳ್ಳಲಿ, ಜನರ ಬಾಯಿ ಮುಚ್ಚಿಸಲು ಸಾಧ್ಯವೇ? ಆದಷ್ಟು ಬೇಗ ಕಮಲುವಿಗೆ ಮದುವೆ ಮಾಡಿ ಅವಳನ್ನು ಗಂಡನ ಮನೆಗೆ ತೊಲಗಿಸಿಬಿಟ್ಟರೆ ಸಾಕು, ಎನ್ನಿಸಿಬಿಟ್ಟಿತ್ತು.

"ಮದುವೆ ಅನ್ನುವುದು ಪಬ್ಲಿಕ್ ಆದರೆ ಅದೇ ಒಂದು ದೊಡ್ಡ ರಾಮಾಯಣವಾಗಿಬಿಡುತ್ತೆ. ಆ ಮೀನಾಕ್ಷಮ್ಮನಂಥೋರು, 'ಕಮಲೂನ್ನ ಕಸಬಿಗೆ ಹಾಕೋಕೆ ಹೋಗಿ ಸೋತು ಕೊನೇ ತೀರ್ಮಾನಕ್ಕೆ ಬಂದಳು, ಲಕ್ಷಮ್ಮ' ಅಂತಾರೆ; ಎಲ್ಲ ಹಾಸ್ಯ ಮಾಡಿಕೊಂಡು ನಗುತ್ತಾರೆ. ಅದೂ ಅಲ್ಲದೆ, ಕೈಗೆ ಬಂದ ಸೂಳೆಯ ಮಗಳ ಮದುವೆ ಆದರೆ ತಾಯಿಗೆ ದೊಡ್ಡ ಅವಮಾನ ಎಂಬ ನಂಬಿಕೆ ಇಟ್ಟುಕೊಂಡಿದ್ದ ಲಕ್ಷಮ್ಮ ಮಗಳ ಮದುವೆಯನ್ನು ಮಗಳಿಗಾಗಿ, ಮೂಡ್ಲಹಳ್ಳಿ ಛತ್ರದಲ್ಲಿ ಗುಟ್ಟಾಗಿ ಮಾಡಲು ನಿಶ್ಚಯಿಸಿದ್ದಳು.

ಮಧ್ಯಾಹ್ನ, ಹುಡುಗ ಹುಡುಗಿಯರು ನೋಡಿದ್ದಾದ ಮೇಲೆ ಮುಂದಿನ ಮಾತಾಯಿತು. "ಮೂಡ್ಲಹಳ್ಳಿ ಆಂಜನೇಯಸ್ವಾಮಿ ರಥೋತ್ಸವ ಮುಗಿದ ಮೇಲೆ ಬರುವ ಸೋಮವಾರ ದಿನ ಚೆನ್ನಾಗಿದೆಯಂತೆ. ಅಷ್ಟರೊಳಗೆ ಇನ್ನೊಂದು ಬೆನಫಿಟ್ ಆಟ ಹಾಕೋಣ" ಎಂದು ಚಿನ್ನಪ್ಪ ಸಲಹೆ ಮಾಡಿದ.

"ಛೆ ಛೆ, ಆ ಕೆಲಸ ಬೇಡ. ಎಲ್ಲ ಅದಷ್ಟು ಗುಟ್ಟಾಗಿ ನಡೀಬೇಕು. ಬೆನಿಫಿಟ್ ಆಟ ಅಂದ್ರೆ ವಧು ಯಾರು ಅಂತ ಮಾತು ಬರುತ್ತೆ....ಈಗ ಒಂದು ಆಟದಿಂದ ಬಂದಿರೋ ಹಣಾನೇ ಸಾಕು. ಅದೃಷ್ಟವಿದ್ದರೆ ದೇವರು ಮುಂದೆ ಕೊಡ್ತಾನೆ" ಎಂದು ಲಕ್ಷಮ್ಮ, ತನ್ನ ಕಸಬಿನ ಗುಣವಾದ ದುಡ್ಡಿನ ಆಸೆಯನ್ನೂ ತೊರೆದು, ತನ್ನ ಅಭಿಪ್ರಾಯ ತಿಳಿಸಿದಳು.

* * * *

ಎಲ್ಲ ಅವಳ ಇಷ್ಟದಂತೆಯೇ ನಡೆಯಿತು.

ಮಂಗಳವಾರ ಅಲ್ಲೇ ಇರಬೇಕಾಗುತ್ತದೆಂದು ಸೋಮವಾರ ರಾತ್ರಿಯೇ ಮದುವೆಯ ಗುಂಪು ಊರಿಗೆ ವಾಪಸು ಬಂತು.

ಭಾನುವಾರ ಬೆಳಗ್ಗೆ ಮೂಡ್ಲಹಳ್ಳಿಗೆ ಹೋದ ಟ್ಯಾಕ್ಸಿ ಸೋಮವಾರ ರಾತ್ರಿ ಗಂಡು ಹೆಣ್ಣನ್ನು ಕೂಡಿಸಿಕೊಂಡು ವಾಪಸ್ಸು ಬಂದುಬಿಟ್ಟಿತು.

ಸಾಮಾನು ಸರಂಜಾಮು ತುಂಬಿಕೊಂಡ ಗಾಡಿಯಲ್ಲಿ ನಂಜುಂಡಿ ಮಂಗಳವಾರ ಊರು ತಲಪಿದ.

ಕಮಲಳಿಗೆ ತನ್ನ ಹದಿನೈದು ವರುಷಗಳ ಜೀವನ ಕಷ್ಟವಾಗಿ ತೋರಿರಲಿಲ್ಲ. ಆದರೆ ಆದಾದ ಮೂರು ವರುಷಗಳನ್ನು ಕಳೆಯುವುದು ಯಮಯಾತನೆಯಂತಾಗಿತ್ತು. ಹರೆಯ ತುಂಬಿದ ತಾನು ಆ ತಾಯಿಯ ಕೈಯಲ್ಲಿ, ಮನೆಗೆ ಬರುವ ಗಂಡುಪಶುಗಳ ಕಣ್ಣಿನಲ್ಲಿ, ರತ್ನಳ ಬಾಯಿಯಲ್ಲಿ ಬಾಳುವುದು ಬಹಳ ಕಷ್ಟವಾಗಿತ್ತು. ಇಂದು ಆ ಮೂರು ವರುಷದ ಭಾರವನ್ನು ಪುಟ್ಟಪ್ಪ ಇಳಿಸಿದ. ಹೃದಯ ತುಂಬ ಹಗುರವಾಗಿತ್ತು. ಮನಸ್ಸು ತಂಗಾಳಿಯಲ್ಲಿ ಓಲಾಡುತ್ತಿತ್ತು. ಮದುವೆಯಾದ ಕಳೆ ಮುಖದ ಮೇಲೆ ಶೋಭಿಸುತ್ತಿರುವಾಗ, ಕೆದರಿದ ಮುಂಗುರುಳು ಗಾಳಿಗೆ ಬಳುಕಾಡುತ್ತಿರುವುದನ್ನು ಬೀದಿಯ ದೀಪದ ಬೆಳಕಿನಲ್ಲಿ ಕಂಡ ಪುಟ್ಟಪ್ಪನಿಗೆ ಮೈಯೆಲ್ಲ ಆನಂದವಾಯಿತು. ಗಂಡನ ತಲೆಯ ಹರಡಿದ ಗುಂಗುರು ಕೂದಲು, ವಿಶಾಲವಾದ ಹಣೆ, ಮಾಟವಾದ ಮೂಗು, ದುಂಡು ಮುಖ, ಕಪ್ಪುಗಣ್ಣುಗಳನ್ನು ಆಗಾಗ ಸಮಯ ನೋಡಿ ಸ್ವಲ್ಪಸ್ವಲ್ಪ ಕಂಡು ಸುಖ ಪಡುತ್ತಿದ್ದ ಕಮಲ ಎರಡು ಮೂರು ಬಾರಿ "ಸದ್ಯ, ದೇವರು ಇದುವರೆಗೂ ನನ್ನನ್ನು ಈ ರೀತಿ ಇಟ್ಟಿದ್ದನಲ್ಲ, ಮೂಡ್ಲಹಳ್ಳಿಯ ಹನುಮಂತನ ಕೃಪೆ. ಇನ್ನು ಮುಂದೆ ನಾನು ಸಂಸಾರಂದಿಗಳಾಗಿ ಬಾಳಬಹುದು" ಎಂದುಕೊಂಡಳು.

## ೧೧

ಮಾದಪ್ಪನವರು ಸತ್ತುಹೋದಮೇಲೆ, ಮಗ ಮಹೇಶ್ವರನಿಗೆ ಮನೆ ನಡಸುವ ಒಂದು ಕೈ ಮುರಿದಂತಾಗಿತ್ತು. ಮೊದಮೊದಲು ಅಷ್ಟು ತೊಂದರೆ ಕಾಣಿಸಲಿಲ್ಲ. ಏಕೆಂದರೆ ತನ್ನ ಇಪ್ಪತ್ತನೆಯ ವಯಸ್ಸಿನಿಂದಲೂ ಅಂಗಡಿಯ ಆಡಳಿತವನ್ನು ತಾನೇ ನೋಡುತ್ತಿದ್ದ. ಎಸ್. ಎಸ್. ಎಲ್. ಸಿ. ಫೇಲಾದ ಕೂಡಲೆ ಅವರಪ್ಪ ಅವನನ್ನು ಅಂಗಡಿಗೆ ಹಾಕಿದ್ದ. ಮನೆಯ ಆಡಳಿತವನ್ನು ನೋಡಿಕೊಳ್ಳಲು ನೆಚ್ಚಿನ ಆಳು ಬಸಪ್ಪ ಮಾದಪ್ಪನವರಿಗೆ ನೆರವಾಗಿದ್ದ.

ಮಗನಿಗೆ ಮೊದಲಿಂದಲೂ ವ್ಯಾಪಾರದಲ್ಲಿ ಆಸಕ್ತಿ. ತಂದೆ ಓದು ಬಿಡಿಸಿ ವ್ಯಾಪಾರಕ್ಕೆ ಹಾಕಿದ ಸ್ವಲ್ಪ ದಿನಗಳಲ್ಲಿಯೇ ಮಗ ಆಹಾದಿಯಲ್ಲಿ ಬಹಳ ಪಳಗಿಬಿಟ್ಟ. ಯಾವ ಯಾವ ಸ್ಥಳದಲ್ಲಿ ಯಾವ ಯಾವ ಸಾಮಾನಿದೆ, ಅವುಗಳ ಬೆಲೆ ಏನು, ಬೆಲೆಗಳ ಬದಲಾವಣೆ ಆದ ಆದ ಹಾಗೆ ಬದಲಾಯಿಸಿ ಹೇಗೆ ನೆನ

ಹಿಟ್ಟುಕೊಳ್ಳಬೇಕು, ಯಾವ ಯಾವ ಸಾಮಾನುಗಳನ್ನು ಯಾವಾಗ ಒಳಗೆ ಮುಚ್ಚಿಡಬೇಕು, ಎಲ್ಲ ಚೆನ್ನಾಗಿ ಗ್ರಹಿಸಿಬಿಟ್ಟ.

ಮಾದಪ್ಪನವರಿಗೆ ಉತ್ಪತ್ತಿ ಬಹಳ ಚೆನ್ನಾಗಿತ್ತು. ಹಿರೇಹಳ್ಳಿ ಜೋಡೀದಾರ್ ಶಿವನಂಜಪ್ಪನವರಿಗೆ ಇವರೊಬ್ಬರೇ ಮಗ. ಆ ತಂದೆಯಂತೆಯೇ ಇವರೂ ಏಕಮಾತ್ರ ಪುತ್ರಫಲ ಪಡೆದಿದ್ದರು. ಆದರೆ ಒಬ್ಬ ಹೆಣ್ಣುಮಗಳೂ ಇದ್ದಳು. ಅಪ್ಪ ಹಾಕಿದ ತೆಂಗಿನ ಗಿಡದಂತಿದ್ದ ಹಿರೇಹಳ್ಳಿಯ ತೋಟ ತುಡಿಗೆ ಮಗನ ಕಾಲಕ್ಕೆ ತುಂಬು ಫಲ ನೀಡುತ್ತಿದ್ದುವು. ಹಳ್ಳಿಯಲ್ಲಿದ್ದ ತಮ್ಮ ದೊಡ್ಡ ಬಂಗಲೆಯನ್ನು ಮೀರಿಸುವಂಥ ನಾಲ್ಕು ಬಂಗಲೆಗಳನ್ನು ಹೊಸೂರಿನಲ್ಲಿ ಮಾಡಿ ಶಿವನಂಜಪ್ಪನವರು ಕಣ್ಣು ಮುಚ್ಚಿದ್ದರು. ಮಾದಪ್ಪನ ಮಿಡ್ಲ್‌ಸ್ಕೂಲ್ ಓದಿಗೆ ಏರ್ಪಾಟು ಮಾಡಲು ಈ ಊರಿಗೆ ಬಂದ ಶಿವನಂಜಪ್ಪನವರು ಆಗಲೇ ಈ ಊರಿನಲ್ಲಿ ಒಂದು ಮನೆ ಕೊಂಡರು. ಒಂದರ ಹಿಂದೆ ನಾಲ್ಕು ಬಂಗಲೆ ಮಾಡುವವರೆಗೂ ಶಿವನಂಜಪ್ಪನವರು ಜೀವಿಸಿದ್ದರು. ಪೇಟೆಯ ಬೀದಿಯಲ್ಲಿದ್ದ ಶಾಸ್ತ್ರಿಗಳ ಮನೆಯನ್ನು ಕೊಂಡು, ಕೆಡವಿಸಿ ಹೊಸದಾಗಿ ತಮಗೆ ಹೇಗೆ ಬೇಕೋ ಹಾಗೆ ಕಟ್ಟಿಸಿಕೊಂಡರು. ಆ ಮನೆಯಲ್ಲಿಯೇ ಈಗ ಮಹೇಶ್ವರಪ್ಪ ಅಜ್ಜನ ಕಾಲದಿಂದ ವಾಸಮಾಡುತ್ತಿರುವುದು. ಉಳಿದ ಮೂರು ಬಂಗಲೆಗಳ ಪೈಕಿ ಒಂದು ಪೇಟೆಯ ಮುಖ್ಯಭಾಗದಲ್ಲಿತ್ತು. ಅದರ ಕೆಳಭಾಗದಲ್ಲಿಯೇ 'ಮಾದಪ್ಪ ಅಂಡ್ ಸನ್' ಇದ್ದುದು. ಮಹೇಶ್ವರನಿಗೆ ಇನ್ನೂ ಎಂಟು ವರುಷವಾಗಿರುವಾಗಲೆ ಅಗ್ರಹಾರದಲ್ಲಿ ಇನ್ನೊಂದು ಮನೆ ಕೊಂಡರು. ಆಮೇಲೆ ಕೊಂಡಿದ್ದು ಮಾರಮ್ಮನ ಚೌಕಕ್ಕೆ ಸಮೀಪದಲ್ಲಿ ಲಕ್ಷ್ಮಮ್ಮನ ಮನೆಯ ಸಾಲಿನಲ್ಲಿದ್ದ ಹಳೆಯ ಮನೆ. ಅದನ್ನು ಕೊಳ್ಳಲು ಶಿವನಂಜಪ್ಪನವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅದಕ್ಕೆ ಎರಡು ಕಾರಣಗಳಿದ್ದುವು. ಆ ಮನೆಯಲ್ಲಿ ರಾಧಾಬಾಯಿ ಎಂಬ ನಾಯಕಸಾನಿ ಇದ್ದಳಂತೆ. ಇದುವರೆಗೂ ಯಾವ ಸಂಸಾರಂದಿಗರೂ ಅದರಲ್ಲಿ ವಾಸಮಾಡಿಲ್ಲವಂತೆ. ಹೋಗಲಿ, ಅದರಲ್ಲೇನು ಮಹಾ ಎಂದರೆ, ಎರಡನೆಯ ಕಾರಣ ಶಿವನಂಜಪ್ಪನವರಿಗೆ ಬಹಳ ಮುಖ್ಯವಾಗಿತ್ತು. ಅವರು ಹತ್ತುಹನ್ನೆರಡು ವರುಷಗಳಿಂದ ಮನೆ ಖರೀದಿ ಮಾಡಲು ಹೋಗಿರಲಿಲ್ಲ. ಈಗ ಆ ಪ್ರಸ್ತಾಪಮಾಡಲು ಹೋದರೆ, ಚಿಕ್ಕ ಬೆಲೆಗೆ ದೊಡ್ಡ ಆಸ್ತಿ ಹೊಡೆದ ಹಳೆಯ ಹುಲಿಗೆ ಹೇಗೆತಾನೇ ಮನಸ್ಸೊಪ್ಪೀತು. ನಾಲ್ಕು ಹೆಂಚಿನ ಚಪ್ಪರಕ್ಕೂ

ನಾಲ್ಕು ಸಾವಿರ ರೂಪಾಯಿ ಹೇಳುತ್ತಿದ್ದರು. ಆಗ ಷುರುವಾದ ಯುದ್ಧ ಬೇಗ ನಿಲ್ಲುವಂತಿರಲಿಲ್ಲ. ಇನ್ನೂ ಬೆಲೆ ಏರುವ ಸೂಚನೆ ಕಂಡುಬಂತೇ ವಿನಾ ಇಳಿಯು ವಂತಿರಲಿಲ್ಲ. ಸ್ವಲ್ಪ ತಡೆಯೋಣ, ಈಗೇನು ಅವಸರ ಎಂದರೆ ಮಹೇಶ್ವರ ಕೇಳಲಿಲ್ಲ. 'ಆ ಮನೆ ತೆಗೆದುಕೊಂಡು ಅದನ್ನು ಸರಿಯಾಗಿ ಕಟ್ಟಿಸಿದರೆ ಒಳ್ಳೆಯ ಬಾಡಿಗೆ ದುಡಿಯುತ್ತದೆ. ಮುಂದೆ ಮಾರಿದರೂ ಒಳ್ಳೆಯ ಬೆಲೆ ಬರು ತ್ತದೆ' ಎಂದು ಹಟ ಹಿಡಿದ. ಮೊಮ್ಮಗನ ಆಸೆ ತೀರಿಸಲು ಶಿವನಂಜಪ್ಪ ನವರು 'ಹ್ಞೂ' ಎಂದು ಕ್ರಯಪತ್ರ ಮಾಡಿಸಿ, ಹಿರೇಹಳ್ಳಿಗೆ ಹೋದರು.

ಮಾದಪ್ಪನವರು ಮೊದಲಿನಿಂದಲೂ ರಸಿಕರು. ಓದಿಗಾಗಿ ಹೊಸೂರಿಗೆ ಬಂದವರು ಅಪ್ಪ ಕೊಂಡುಕೊಂಡ ಮನೆಯಲ್ಲಿ ಶಾಶ್ವತವಾಗಿ ನೆಲಸಿಬಿಟ್ಟರು. ಅವರಿಗೆ ಹಿರೇಹಳ್ಳಿಯ ಜೀವನ ರುಚಿಸುತ್ತಿರಲಿಲ್ಲ. ಅದನ್ನು ಅಪ್ಪನಿಗೇ ಬಿಟ್ಟು, ತಾವು ತಮ್ಮ ತಾಯಿಯೊಡನೆ ಹೊಸೂರಿನಲ್ಲಿ ಸಂಸಾರ ಹೂಡಿಸಿ ಬಿಟ್ಟರು. ಹಳ್ಳಿಯ ಜೀವನ ಬೇಸರವಾದಾಗ ಊರಿನಲ್ಲಿಯೂ ನಾಲ್ಕು ದಿನ ಇರುವಂತಾಗಲೆಂದು ಶಿವನಂಜಪ್ಪನವರು ಈ ಏರ್ಪಾಟು ಮಾಡಿದ್ದರೂ, ಇದ್ದೊಬ್ಬ ಮಗ ಸುಖವಾಗಿರಲಿ ಎಂಬುದೂ ಅವರ ಆಸೆಯಾಗಿತ್ತು. 'ಹಳ್ಳಿಯ ಲ್ಲಿಯೇ ಕುಳಿತರೆ ಮಕ್ಕಳೆಲ್ಲ ಹಳ್ಳಿಮುಕ್ಕ ಆಗಿಬಿಡುತ್ತವೆ' ಎಂದು ಹೊಸೂರಿ ನಲ್ಲಿದ್ದ ಬಿದರಹಳ್ಳಿಯ ಶಾನುಭೋಗ ನರಸಪ್ಪನವರು ಹೇಳುತ್ತಿದ್ದರು. ಆ ಮಾತಿ ನಲ್ಲಿ ಸ್ವಲ್ಪ ನಂಬಿಕೆಯನ್ನಿಟ್ಟಿದ್ದ ಶಿವನಂಜಪ್ಪನವರು ಶಾನುಭೋಗರ ಸೂಚನೆಗೆ ಮುಂಚೆಯೇ, ಮಗನ ಓದಿನ ನೆಪವಾಗಿ ಹೊಸೂರಿನಲ್ಲಿ ಒಂದು ಮನೆ ಮಾಡಿ ಸಂಸಾರ ಹೂಡಿದರು. ಅವರ ಹೆಂಡತಿ ಮಂಗಳಮ್ಮ ಬೆಂಗಳೂರಿನವಳು. ಇದ್ದೊಬ್ಬ ಮಗನನ್ನಿಟ್ಟುಕೊಂಡು ಊರಿನಲ್ಲಿ ಸುಖವಾಗಿ ಬಾಳಲಿ. ಈ ಹಳ್ಳಿ ಯಲ್ಲಿ ತೋಟದ ಮಧ್ಯೆ, ಬಿಕೋ ಎನ್ನುವ ಬಂಗಲೆಯ ಬಾಳು ಬೇಡ, ಎಂದು ಶಿವನಂಜಪ್ಪನವರು ಹಾಗೆ ಮಾಡಿದ್ದರು.

ಆದರೆ ತಾಯಿಯ ಮುದ್ದಿನಲ್ಲಿ ಬೆಳೆದ ಮಾದಪ್ಪನ ಓದು ಮಿಡ್ಲ್ ಸ್ಕೂಲು ದಾಟಲಿಲ್ಲ. ಆರು ಬಾರಿ ಹಣ ಕಟ್ಟಿ, ಏಳನೆಯ ಬಾರಿ 'ಥೂ, ಈ ಓದಿನ ಮನೆ ಹಾಳಾಗ' ಎಂದು ಕೈಬಿಟ್ಟುಬಿಟ್ಟಿದ್ದ. ಆಮೇಲೆ ಶಿವನಂಜಪ್ಪ ನವರಿಗೆ ಮನೆ ಹೊಸೂರು, ತೋಟ ಹಿರೇಹಳ್ಳಿ ಆಗಿಬಿಟ್ಟಿತ್ತು. ಅಲ್ಲಿಗೆ ಇಲ್ಲಿಗೆ ಹೋಗಿಬರಲು ಒಂದು ಪುಟ್ಟ ಮೆತ್ತೆಯಗಾಡಿಯನ್ನು ಮಾಡಿದ್ದರು. ಹಾಸನದ

ಜಾತ್ರೆಯಲ್ಲಿ ಹಿಂದೆ ಕೊಂಡಿದ್ದ ಕರಿಯನ ಕರು ಗಿಡ್ಡಹೋರಿ ಆ ಗಾಡಿಗೆ ಮಟ್ಟಸವಾಗಿತ್ತು.

ಮಾದಪ್ಪನಿಗೆ ಹತ್ತೊಂಬತ್ತು ತುಂಬುವುದರೊಳಗಾಗಿ, ಕಾಗಲವಾಡಿಯ ಜಮೀನುದಾರ್ ಶ್ರೀಕಂಠಪ್ಪನವರ ಮಗಳನ್ನು ಕೊಟ್ಟು ಮದುವೆ ಆಯಿತು. ಆಕೆ ಒಳ್ಳೆಯ ರೂಪವಂತೆ ಗುಣವಂತೆ. ಅಂಥ ರೂಪವತಿ ಹೆಂಡತಿ ಮನೆಯಲ್ಲಿದ್ದರೂ ಎರಡು ಹಕ್ಕಿಗಳಂತೆ ಒಂದು ಗಂಡುಮಗು, ಒಂದು ಹೆಣ್ಣುಮಗು ಮನೆಯೆಲ್ಲ ಆಡುತ್ತಿದ್ದರೂ ಮಾದಪ್ಪನವರು ಕುಂಬಾರಕೇರಿಯ ನಾಯಕಸಾನಿ ಕಿಟ್ಟವ್ಮ್ಮ, ಅಗ್ರಹಾರದ ಪುಟ್ಟ ಇವರ ಮನೆಗೆ ದುಡ್ಡು ಸುರಿದು ದೇಹ ಕೆಡಿಸಿಕೊಳ್ಳಲು ಹೋಗುತ್ತಿದ್ದರು. ಎಲ್ಲ ಸಹವಾಸ ದೋಷ, ಕಾಮನ ಹಬ್ಬದಲ್ಲಂತೂ ಇವರ ಆಟ ಹೇಳತೀರದು. ಇದೊಂದನ್ನೂ ಸಹಿಸದ ಶಿವನಂಜಪ್ಪನವರಿಗೆ, ಎಲ್ಲ ವಿಷಯ ತಿಳಿದಿತ್ತು. ಆದರೆ, ಮಗ ಎಂಬ ಮಮತೆಯಿಂದ ಮುದುಕ ಮುದುಕಿಯರು—ಒಳ್ಳೆಯ ಮಾತು ಕೇಳದ ಮಗನನ್ನು ಎದುರುಹಾಕಿಕೊಳ್ಳಲಾರದೆ—ಮೌನವಾಗಿ ಕೊರಗುತ್ತಿದ್ದರು. ಅವರ ಕೊರಗನ್ನು ಕಡಮೆ ಮಾಡಲು ಮುದ್ದಾದ ಮೊಮ್ಮಗ ಮಹೇಶ್ವರ, ಮೊಮ್ಮಗಳು ಶಾಂತಾ ಸಹಕರಿಸುತ್ತಿದ್ದರು. ಮುದುಕ ಎರಡು ಮೊಗ್ಗುಗಳನ್ನು ನೋಡಿಕೊಂಡು, ಈ ಹೂವು ಹೇಗಾದರೂ ಬಾಳಲಿ ಎಂದು ಕಾಲ ತಳ್ಳುತ್ತಿತ್ತು. ಮಗನ ಮನಸ್ಸು ಚೆನ್ನಾಗಿ ತಿಳಿದಿದ್ದ ಅವರಿಗೆ ಇನ್ನೊಂದು ಕಾರಣದಿಂದಲೂ ಸಮಾಧಾನವುಂಟಾಗುತ್ತಿತ್ತು. ಮಗ ಎಷ್ಟು ಮೆರೆದರೂ ಮನೆಯನ್ನೇ ಮುಳುಗಿಸಿಬಿಡುವಂಥ ಗುಣ ಅವನದಲ್ಲ. ಎಲ್ಲ ಲೆಕ್ಕಾಚಾರದಂತೆ ನಡಸುತ್ತಾನೆ, ಅದರ ಮಿತಿಯೂ ಅವನಿಗೆ ಗೊತ್ತು ಎಂಬುದು ಅವರಿಗೆ ತಿಳಿದಿತ್ತು. ಅದು ನಿಜವೂ ಹೌದು; ಮಾದಪ್ಪನವರು ಮಂದಿಯ ಕಣ್ಣುಮುಂದೆ ಮೆರೆದಂತೆ ಕಂಡರೂ ಅದಕ್ಕೊಂದು ಮಿತಿ ಇಟ್ಟದ್ದರು; ಲೆಕ್ಕಾಚಾರ ಇಟ್ಟದ್ದರು. ಅವರು ಆ ಮಿತಿಯನ್ನು ಮೀರಿ ನಡೆಯುತ್ತಿರಲಿಲ್ಲ.

ತಾವು ಹೀಗಿದ್ದರೂ ತಮ್ಮ ಮಗನನ್ನು ಸರಿಯಾದ ದಾರಿಯಲ್ಲಿ ಬೆಳಸುವುದನ್ನು ಅವರು ತಿಳಿದಿದ್ದರು. ಈ ಕೆಲಸದಲ್ಲಿ ಅವರ ಹೆಂಡತಿ ಪಾರ್ವತಮ್ಮ ಅವರಿಗೆ ತುಂಬ ನೆರವಾಗುತ್ತಿದ್ದಳು. ಮಗಳನ್ನು ಅಕ್ಕಪಕ್ಕದ ಪೋಲಿ ಮಕ್ಕಳೊಡನೆ ಆಟಕ್ಕೆ ಕಳುಹಿಸದೆ, ಮನೆಯೊಳಗೇ ಚೆನ್ನಾಗಿ ಸಾಕುತ್ತಿದ್ದಳು. ಮಗನನ್ನು ಒಳ್ಳೆಯ ವಿದ್ಯಾವಂತನನ್ನಾಗಿ ಮಾಡಬೇಕೆಂಬ ಆಸೆ ಈ ತಾಯಿಗೆ ಇತ್ತು.

ಆದರೆ ಮಗ ಮಹೇಶ್ವರ ತಂದೆಯಷ್ಟೇ ವಿದ್ಯೆಯ ಪುಣ್ಯಕಟ್ಟಿಕೊಂಡು ಬಂದಿದ್ದ.

ಪೋಲೀಸ್ ಕರಿಯಪ್ಪನ ಸ್ನೇಹದಿಂದ ಹೀರಾಲಾಲ್‌ನ ಲಕ್ಷಮ್ಮನಿಗೆ ಆಶ್ರಯ ಕೊಟ್ಟಮೇಲೆ, ಸುಮ್ಮನೆ ಕಾಲ ಕಳೆಯುವುದಕ್ಕಿಂತ ಏನಾದರೂ ವ್ಯಾಪಾರ ಮಾಡಬೇಕು, ಎಂಬ ಆಲೋಚನೆ ಅದೇಕೊ ಮಾದಪ್ಪನವರ ತಲೆಯಲ್ಲಿ ಮೂಡಿತ್ತು. 'ಹ್ನು ಏನಾದರೂ ಅಂಗಡಿ ಹಾಕಬೇಕು' ಎಂದು ಮಗ ಮಹೇಶ್ವರನೂ ಸೂಚಿಸಿದ್ದ. ಇದನ್ನು ಕರಿಯಪ್ಪನ ಹತ್ತಿರ ಪ್ರಸ್ತಾಪ ಮಾಡಿದಾಗ, ಆತ ಒಂದು ಒಳ್ಳೆಯ ಸಲಹೆ ಕೊಟ್ಟಿದ್ದ. "ಉತ್ತರ ದೇಶದ ಬಿಕನಾಸಿ ಬಂದು ಈ ಊರಲ್ಲಿ ಆಸ್ತಿಮಾಡಿರೋವಾಗ, ಊರಿನ ದಣಿ ಅನಿಸ್ಕೊಂಡಿರೋ ತಮ್ಮಂಥೋರು ಸುಮ್ನೆ ಕುಂತ್ಕೊಂಡಿರೋಣಾಂದ್ರೇನು! ನಾನು ಹೇಳಿದ್ಹಾಗೆ ಮಾಡ್ರಿ ಸಾಹುಕಾರ್ರೆ. ಹ್ಯಾಗಿದ್ರೂ ನಿಮ್ದೇ ಮನೆ ಇದೆ—ಫಸ್ಟ್‌ಕ್ಲಾಸ್ ಮಳಿಗೆ—ಹೀರಾಲಾಲ್‌ನ ಅಂಗಡೀ ಎದುರ್‍ದು. ಅಲ್ಲೇ ನೀವೂ ಅದೇ ಅಂಗಡಿ ಹಾಕಿ, ನೋಡೋಣ. ಈ ಊರಿಗೆಲ್ಲ ಸೇಟೊಂದೊಂದೇ ಸಾಕೆ!" ಎಂದ. ಕರಿಯಪ್ಪ ತುಂಬ ದೂರಾಲೋಚನೆ ಯಿಂದ ಈ ಮಾತು ಆಡಿದ್ದ. ಸೇಟನ ಸೂಳೆ ಲಕ್ಷಮ್ಮನನ್ನು ರತಿಯಂತೆ ಕಾಣುತ್ತಿದ್ದ ಮಾದಪ್ಪನವರಿಗೆ ಕರಿಯಪ್ಪನ ಸಲಹೆ ಬಹಳ ಹಿತವಾಗಿ ಕಂಡುಬಂತು. ಈ ಯೋಚನೆಗೆ ಮುಂಚೆ, ಒಂದು ದಿನ ಕರಿಯಪ್ಪನೊಡನೆ ಮಾತಾಡುತ್ತಿದ್ದಾಗ ಅದೇಕೊ ಅವರು, "ಕರಿಯಪ್ಪ, ಹೇಗಾದರೂ ಮಾಡಿ ಈ ಸೇಟನ್ನು ಊರುಬಿಟ್ಟು ಓಡಿಸಬೇಕಲ್ಲ" ಎಂದಿದ್ದರು. ಆ ಸಲಹೆಯನ್ನು ಕಾರ್ಯಗತಮಾಡಿದ ಆರು ತಿಂಗಳೊಳಗಾಗಿ, ಸೇಟು ಅಂಗಡಿಯನ್ನು ಟಾಡಿ ಕಂಟ್ರಾಕ್ಟರ್ ಮುನಿಸ್ವಾಮಪ್ಪನವರಿಗೆ ಮಾರಿ ಪೂನಾಕ್ಕೆ ಗಾಡಿಬಿಡಲೇಬೇಕಾಯಿತು.

ಲಕ್ಷಮ್ಮನ ಸಹವಾಸ ಆದಮೇಲೆ ಮಾದಪ್ಪನವರ ಮಜ ಒಂದೊಂದು ದಿನ ಮಿತಿಮೀರುತ್ತಿತ್ತು. ಮುದುಕ ಶಿವನಂಜಪ್ಪನವರು ಮಗನಿಗೆ ಬುದ್ಧಿ ಹೇಳುವ ಸ್ಥಿತಿಯಲ್ಲಿರಲಿಲ್ಲ. ತಾಯಿ ಮಂಗಳಮ್ಮನಿಗೆ ವಯಸ್ಸು ಮೀರಿದಂತೆಲ್ಲ ಮಗನ ಮೇಲಿನ ಮಮತೆ ಹೆಚ್ಚಾಗುತ್ತಿದ್ದುದರಿಂದ ಮಗನ ತಪ್ಪು ಆ ಮುದಿ ಕಣ್ಣಿಗೆ ಅಷ್ಟು ದೊಡ್ಡದಾಗಿ ಕಾಣುತ್ತಿರಲಿಲ್ಲ. ಒಂದೊಂದು ಬಾರಿ, ಅನ್ಯರ ಬಾಯಿಂದ ಬಂದ ಸುದ್ದಿಯನ್ನು ಆಕೆ ನಂಬುತ್ತಲೇ ಇರಲಿಲ್ಲ. ಹೆಂಡತಿ

ಪಾರ್ವತಮ್ಮನ ಮನಸ್ಸು ಒಳಗೇ ಕೊರಗುತ್ತಿತ್ತು. ಗಂಡನಿಗೆ ಬುದ್ಧಿ ಹೇಳುವ ಶಕ್ತಿ, ಅಭ್ಯಾಸ ಅವಳಿಗೆ ಚೆನ್ನಾಗಿದ್ದರೂ ಕೊನೆಕೊನೆಗೆ ಏಕೋ ಸುಮ್ಮನಾಗಿ ಬಿಟ್ಟಳು—ದಾರಿಗೆ ಬರುವ ದೇಹ ಇದಲ್ಲ ಎಂದೊ, ಏನೊ !

ಮಗ ಮಾತ್ರ ತಾಯಿಯ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿದ್ದ.

ದೊಡ್ಡದಾಗಿ ಅಂಗಡಿ ಹಾಕಿ, ಹೊಸದರಲ್ಲಿ ಹುರುಪಿನಿಂದ ನಡಸಿದ ಮಾದಪ್ಪನವರು, ಎಸ್. ಎಸ್. ಎಲ್. ಸಿ. ಫೇಲ್ ಆದ ಮಗನಿಗೆ ಆಡಳಿತ ವಹಿಸಿಕೊಟ್ಟರು. ಬಹಳ ನಂಬಿಕೆಯಿಂದ ಕೆಲಸಮಾಡುತ್ತಿದ್ದ ಆಳು ಪುಟ್ಟ ಮಾದನ ನೆರವಿನೊಡನೆ, ಬುದ್ಧಿವಂತ, ಮಹೇಶ್ವರ ಅಂಗಡಿಯ ವ್ಯವಹಾರ ವನ್ನು ಚೆನ್ನಾಗಿ ನಡಸುತ್ತಿದ್ದ.

ಮಗ ಮಾಡಬೇಕಾದ ವ್ಯಾಪಾರವನ್ನು ಮೊಮ್ಮಗನೇ ಮಗನಿಗಿಂತ ಚೆನ್ನಾಗಿ ನಡಸುತ್ತಿರುವುದನ್ನು ನೋಡಿದ ಶಿವನಂಜಪ್ಪನವರ ಕಣ್ಣು ಬೇಗ ಮರಿ ಮಗನನ್ನು ನೋಡಲು ಕಾತರಿಸಿತು. ಬೆಂಗಳೂರಿನವರಾದ ಶಿವರುದ್ರಪ್ಪನವರು ತಮ್ಮ ಹಿರಿಯ ಮಗಳಾದ ಗಂಗಮ್ಮನನ್ನು ಮಹೇಶ್ವರನಿಗೆ ಕೊಟ್ಟು ಮದುವೆ ಮಾಡಲು ಒಪ್ಪಿದ್ದರು. ಶಿವನಂಜಪ್ಪನವರಿಗೆ ಗೂರಲುರೋಗ ಹೆಚ್ಚಾಗಿದ್ದುದ ರಿಂದ, ಮಾದಪ್ಪನವರು ಮಹೇಶ್ವರನ ಹತ್ತೊಂಬತ್ತನೆಯ ವಯಸ್ಸಿನಲ್ಲಿಯೆ ಮುಹೂರ್ತ ಇಡಿಸಿಬಿಟ್ಟರು. ಎಸ್. ಎಸ್. ಎಲ್. ಸಿಯ ವರೆಗೆ ಓದಿದ ಶೀಲವಂತೆ ಗಂಗಮ್ಮ ನೋಡುವುದಕ್ಕೂ ಬಹಳ ಚೆನ್ನಾಗಿದ್ದಳು. ಅವಳನ್ನು ನೋಡಲು ಬೆಂಗಳೂರಿಗೆ ಹೋಗಿದ್ದ ಪಾರ್ವತಮ್ಮನವರ ಮನಸ್ಸು ಹುಡುಗಿ ಯನ್ನು ನೋಡಿದ ಕೂಡಲೆ 'ಹ್ಞು ಆಗಲಿ' ಎಂದಿತು. ಮಾದಪ್ಪನವರೂ ಭಾವೀ ಸೊಸೆಯ ರೂಪಿಗೆ, ವಿದ್ಯೆ ಬುದ್ಧಿಗೆ ಮೆಚ್ಚಿದರು. ಯೌವನದ ಮೆಟ್ಟಿ ಲಲ್ಲಿದ್ದ ಮಹೇಶ್ವರ ಹದಿನಾರು ವರುಷದ ತುಂಬುಹರೆಯದ ಗಂಗಮ್ಮನನ್ನು ನೋಡಿ 'ಪರವಾಯಿಲ್ಲ' ಎಂದುಕೊಂಡ. ಅವಳನ್ನು ನೋಡುವುದಕ್ಕಾಗಿ ಶಿವರುದ್ರಪ್ಪನವರ ಮನೆಯ ಪಡಸಾಲೆಯಲ್ಲಿ ಕುಳಿತಿದ್ದಾಗ, ಅವನು ಆ ಹುಡು ಗಿಯ ಮುಖವನ್ನು ಚೆನ್ನಾಗಿ ನೋಡಲಾಗಲಿಲ್ಲ. ಅದೇಕೊ, ಒಂದು ರೀತಿಯ ನಾಚಿಕೆ, ಬಿಗುಮಾನ ಉಂಟಾಗಿ, ಮೈತುಂಬಿದ ಬೆಳ್ಳಗಿರುವ ಹುಡುಗಿ ಎಂಬು ದನ್ನು ಮಾತ್ರ ದೂರದಿಂದ ನೋಡಿ ಮುಖ ತಿರುಗಿಸಿಕೊಂಡುಬಿಟ್ಟ. ಗುರುಹಿರಿ ಯರ ನಿಶ್ಚಯ ತನ್ನ ನಿಶ್ಚಯವೇ ಆದುದನ್ನು ಅರಿತು ಅವನ ಹೃದಯ ಹರುಷ

ಗೊಂಡಿತು.

ಮದುವೆಯಾದ ಆರು ತಿಂಗಳೊಳಗಾಗಿ ಸೊಸೆ ಮನೆಗೆ ಬಂದುಬಿಟ್ಟಳು. ಆ ಮನೆಗೆ ಒಬ್ಬ ಹೆಣ್ಣು ಮಗಳು ಕಾಲಿಟ್ಟ ಕೂಡಲೆ, ಪಾರ್ವತಮ್ಮ ತನ್ನ ಹೆಣ್ಣುಮಗಳ ಧಾರೆಯ ಯೋಚನೆ ಮಾಡಿದಳು.

ತನ್ನಂತೆಯೇ ಚೆಲುವಾಗಿದ್ದ ಮಗಳು ಶಾಂತಮ್ಮನನ್ನು ತನ್ನ ಕಿರಿಯ ತಮ್ಮನಿಗೆ ಕೊಡಬೇಕೆಂಬ ಸಲಹೆಗೆ ಮಾದಪ್ಪನವರೂ, ಅತ್ತೆಮಾವಂದಿರೂ ಅಡ್ಡಿ ಬರಲಿಲ್ಲವಾದುದರಿಂದ ಪಾರ್ವತಮ್ಮನ ಮನಸ್ಸಿಗೆ ಹೆಚ್ಚಿನ ಹರುಷವುಂಟಾಗಿತ್ತು.

ಶಾಂತಮ್ಮ ಇನ್ನೂ ಹದಿನಾಲ್ಕು ವರುಷ ಮೀರದಿದ್ದಾಗಲೆ ಕಿರಿಯ ಸೋದರಮಾವ ಮಹದೇವಪ್ಪನ ಹೆಂಡತಿಯಾದಳು.

ಇಬ್ಬರು ಮಕ್ಕಳ ಜೀವನ ಒಂದು ನೆಲೆ ಕಂಡುದನ್ನು ನೋಡಿ ಪಾರ್ವತಮ್ಮನ ಸಂತೋಷಕ್ಕೆ ಪಾರವಿರಲಿಲ್ಲ. ಅರುವತ್ತು ಮೀರಿದ ಶಿವನಂಜಪ್ಪ ಮತ್ತು ಮಂಗಳಮ್ಮನವರಿಗಂತೂ ಹಿಡಿಸಲಾರದಷ್ಟು ಆನಂದ. ಇಷ್ಟೇ ನೋಡಿದೆವಂತೆ, ಮರಿಮಗನನ್ನೂ ಆಡಿಸಿಬಿಡೋಣ ಎಂದು ಆ ಮುದಿಕೈಗಳು ಹಾತೊರೆಯುತ್ತಿದ್ದುವು.

ಸೊಸೆ ಮನೆಗೆ ಬಂದ ಒಂದು ವರುಷದೊಳಗಾಗಿ ದೇವರು ಆ ಆಸೆಯನ್ನೂ ಈಡೇರಿಸಿದ. ಮಹೇಶ್ವರ ಹೆಣ್ಣು ಮಗುವಿನ ತಂದೆಯಾದ. ಮುದುಕ ಮುದುಕಿ ಮರಿಮಗನನ್ನು ಅಪೇಕ್ಷಿಸಿದರು. ಆದರೆ ದೇವರು ಮರಿಮಗಳನ್ನು ತಂದು ಮಲಗಿಸಿದ. 'ಹೆಣ್ಣೋ, ಗಂಡೋ ನೂರು ವರುಷ ತಣ್ಣಗೆ ಬಾಳಲಿ' ಎಂದು ಕಾಲು ಹೋದ, ಅರೆ ಸತ್ತ ಮುದುಕ ಶಿವನಂಜಪ್ಪನವರು ಮಗುವಿನ ಮೊರವನ್ನು ನೋಡಿ ಹರಸಿದರು.

ಆರೇಳು ತಿಂಗಳಿಂದ ನರಳುತ್ತಿದ್ದ ಆ ಮುದಿದೇಹ ಮರಿಮಗಳ ದರ್ಶನವಾದ ಮೇಲೆ—ಆಸೆ ಈಡೇರಿತೆಂದೊ ಏನೊ—ಹೊಲೆಮನೆಯ ಹತ್ತು ದಿನ ಕಳೆಯುವುದರೊಳಗಾಗಿ ಕಣ್ಣುಮುಚ್ಚಿಕೊಂಡಿತು. ಆ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡ ಮಂಗಳಮ್ಮನ ಪಾಡು ಹೇಳತೀರದು.

ಸೊಸೆ ಮನೆಗೆ ಬಂದಮೇಲೆ ಕೊಂಡುಕೊಂಡಿದ್ದ, ನಾಯಕಸಾನಿ ರಾಧಾಬಾಯಿಯ ಮನೆಯನ್ನು ಕೆಡವಿಸಿ ಹೊಸ ರೀತಿಯಲ್ಲಿ ಕಟ್ಟಿಸುತ್ತಿದ್ದ ಮಾದಪ್ಪ

ನವರಿಗೆ ಈ ಸುದ್ದಿ ಸಿಡಿಲಿನಂತೆ ಮುಟ್ಟಿತು. ಅಷ್ಟು ವಯಸ್ಸಾಗಿ ಕಾಲು ಸ್ವಾಧೀನದಲ್ಲಿಲ್ಲದಿದ್ದರೂ ತಂದೆಯವರು, ಆರಕ್ಕೆ ಮೂರಕ್ಕೆ ಗಾಡಿಯಲ್ಲಿ ಕುಳಿತು ಹಳ್ಳಿಗೆ ಹೋಗಿ, ತೋಟದ ವ್ಯವಸ್ಥೆ ನೋಡಿಕೊಂಡು ಬರುತ್ತಿದ್ದರು. ಆ ಕೆಲಸ ಇನ್ನು ಮುಂದೆ ಮಾದಪ್ಪನವರ ಮೇಲೇ ಬಿತ್ತು.

ಮನೆ ಕಟ್ಟುವ ನೆಪದಲ್ಲಿ—ಅವರು ಅನೇಕ ಬಾರಿ ನಡಸಿದಂತೆ, ಮಿತಿ ಮೀರಿ—ಲಕ್ಷ್ಮಮ್ಮನ ಮನೆಯಲ್ಲಿ ಮೂರು ದಿನದ ಬಿಡಾರ ಬಿಟ್ಟಿದ್ದರು. ಅಲ್ಲೇ ಊಟ, ತಿಂಡಿ, ನಿದ್ದೆ. ಅಂದು ಬೆಳಗ್ಗೆ ಒಂಭತ್ತು ಗಂಟೆಯಲ್ಲಿ ಮಹೇಶ್ವರ ಸೈಕಲ್ ಮೇಲೆ ಬಂದು 'ತಾತನಿಗೆ ಕೆಮ್ಮು ಹೆಚ್ಚಾಗಿದೆ, ಮಾತೇ ಆಡುತ್ತಿಲ್ಲ.' ಎಂದು ಹೇಳಿದಾಗ ಅವರು, ಹೊಸದಾಗಿ ಕಟ್ಟುತ್ತಿದ್ದ ಮನೆಯ ಬೀದಿಯ ಬಾಗಿಲ ಚೌಕಟ್ಟು ಇಡಿಸುತ್ತಿದ್ದರು. 'ನೀವು ಕೆಲಸ ಮಾಡುತ್ತಿರಿ, ನಾನು ನೋಡಿಕೊಂಡು ಬರುತ್ತೇನೆ' ಎಂದು ಕೆಲಸಗಾರರಿಗೆ ಹೇಳಿ, ಮಾದಪ್ಪನವರು ಅದೇ ಸೈಕಲ್ ತೆಗೆದುಕೊಂಡು ಮನೆಯ ಕಡೆ ಬೇಗ ಹೋದರು. ಮಹೇಶ್ವರ ನಡೆದುಕೊಂಡು ಅಂಗಡಿಯ ಕಡೆ ಹೋದ.

ತಾತ ಈ ಲೋಕ ಬಿಟ್ಟುದು ಅಂಗಡಿಯಲ್ಲಿದ್ದ ಮಹೇಶ್ವರನಿಗೆ ಹನ್ನೊಂದು ಗಂಟೆಗೆ ತಿಳಿಯಿತು.

* * * *

ಎಲ್ಲ ಕೆಲಸ ಮುಗಿದ ಮೇಲೆ, ಒಂದು ದಿನ ಮಂಗಳಮ್ಮನ ಸೋದರಳಿಯ ಬಸಪ್ಪಶಾಸ್ತ್ರಿಗಳು ಮನೆಗೆ ಬಂದಿದ್ದರು. ಅವರು ಒಳ್ಳೆಯ ವಿದ್ವಾಂಸರು, ಜ್ಯೋತಿಷ್ಯಶಾಸ್ತ್ರ ನಿಪುಣರು, ಶಿವಕಥಾ ವಿದ್ವಾನ್‌ರು ಎಂದು ಎಲ್ಲೆಲ್ಲೂ ಪ್ರಸಿದ್ಧರಾಗಿದ್ದರು. ಅವರು ಊರಿಗೆ ಬಂದ ದಿನ ಮಂಗಳಮ್ಮ ಎಲ್ಲ ಹೇಳಿಕೊಂಡು-ಗೋಳೋ ಎಂದು ಅತ್ತಳು.

ಗಂಡ ಹೋದಮೇಲೆ ಮರಿಮಗಳ ಜಾತಕ ಹಿಡಿದು ಎಲ್ಲೆಲ್ಲೋ ತೋರಿಸಿ ಅವಲಕ್ಷಣ ಎನಿಸಿಕೊಂಡ ಮಂಗಳಮ್ಮ, ಬಸಣ್ಣನಿಗೂ ತೋರಿಸಿ ತಿಳಿದುಕೊಳ್ಳಬೇಕೆಂದು ಹಾತೊರೆದಳು. ಮಾರನೆಯ ದಿನ, ಮಾತುಕತೆ ಊಟ ಎಲ್ಲ ಆದ ಮೇಲೆ, ಪಡಸಾಲೆಯಲ್ಲಿ ಹಾಸಿದ್ದ ಕಂಬಳಿಯ ಮೇಲೆ ಮಲಗಿ ಆಟ ಮಾಡುತ್ತಿದ್ದ ಆರು ತಿಂಗಳ ಮಗುವನ್ನು ನೋಡುತ್ತ, ಬಸಪ್ಪಶಾಸ್ತ್ರಿಗಳು ಆರಾಮ ಕುರ್ಚಿಯ ಮೇಲೆ ಆರಾಮಾಗಿ ಮಲಗಿದ್ದರು. ಮಗು ಏನನ್ನೋ

ನೋಡುತ್ತ ನಗುತ್ತಿತ್ತು. ಎಲೆಅಡಕೆ ಹಾಕಿಕೊಳ್ಳುತ್ತಿದ್ದ ಬಸಪ್ಪಶಾಸ್ತ್ರಿಗಳು ಮಡಿಸಿದ ಎಲೆಯನ್ನು ಬಾಯಿಯಲ್ಲಿಟ್ಟುಕೊಂಡು 'ಚೀ ಕಳ್ಳ!' ಎಂದು ಚಪ್ಪಾಳೆ ತಟ್ಟಿದರು. ಮಗು ಶಬ್ದ ಕೇಳಿ, ಶಾಸ್ತ್ರಿಗಳ ಕಡೆ ತಿರುಗಿತು. ಅಷ್ಟು ಹೊತ್ತಿಗೆ ಸರಿಯಾಗಿ, ಊಟದ ಮನೆಯಿಂದ ಒಳಗೆ ಬಂದ ಮಂಗಳಮ್ಮನವರು "ಬಸಣ್ಣಾ ನಮ್ಮ ಮರೀ ಜಾತಕಾನ ನೀನು ನೋಡಿ ಹೇಳಪ್ಪ, ಯಾರ್‍ಯಾರೋ ಏನೇನೋ ಹೇಳ್ತಾರೆ. ನಿಜ ಏನೂ ಅನ್ನೋದು ನಿಂಗೆ ಗೊತ್ತಾಗುತ್ತೆ. ನೋಡು ಮತ್ತೆ" ಎನ್ನುತ್ತ ಪಡಸಾಲೆಯ ಗೂಡಿನಲ್ಲಿಟ್ಟಿದ್ದ ಪೆಟ್ಟಿಗೆ ತೆಗೆದು, ಅದರಲ್ಲಿದ್ದ ಜಾತಕವನ್ನು ಬಸಪ್ಪಶಾಸ್ತ್ರಿಗಳ ಕೈಯಲ್ಲಿಟ್ಟಳು.

ಬಸಪ್ಪಶಾಸ್ತ್ರಿಗಳು ನಿಜವಾಗಿಯೂ ಜ್ಯೋತಿಷ್ಯ ಶಾಸ್ತ್ರದಲ್ಲಿ ಒಳ್ಳೆಯ ಪಂಡಿತರು; ಚೆನ್ನಾಗಿ ಲೆಕ್ಕಾಚಾರ ಹಾಕಿ ಹೇಳುತ್ತಿದ್ದರು. ಅವರು ಮಗುವಿನ ಜಾತಕವನ್ನು ಬಹಳ ಹೊತ್ತು ನೋಡಿ, "ಮಹೇಶ್ವರನ ಜಾತಕ ತೊಗೊಂಬಾ" ಎಂದರು. ಮೊಮ್ಮಗನ ಜಾತಕವೂ ಆ ಪೆಟ್ಟಿಗೆಯಿಂದ ಬಂತು. ಶಾಸ್ತ್ರಿಗಳು ಅದನ್ನೂ ಚೆನ್ನಾಗಿ ಪರಿಶೀಲಿಸಿದರು.

ಅವರ ಮುಖವನ್ನೇ ನೋಡುತ್ತ ಕುಳಿತಿದ್ದ ಮಂಗಳಮ್ಮ ಆ ಮುಖದ ಭಾವವನ್ನು ಗ್ರಹಿಸಿದಳು. ಅದು ಅಷ್ಟೇನೂ ಹಿತಕರವಾಗಿರಲಿಲ್ಲ.

ಯಾವುದೋ ಲೆಕ್ಕಾಚಾರ ಹಾಕುತ್ತಿದ್ದ ಬಸಣ್ಣನಿಗೆ, ಇಬ್ಬರು ಜೋಯಿಸರು ಹೇಳಿದ ಕಾರಣವನ್ನು ತಿಳಿಸಿದರೆ ನೆರವಾದಂತಾಗಬಹುದೆಂದುಕೊಂಡು ಮಂಗಳಮ್ಮ,

"ಒಂದು ಮನೆ ಬ್ಯಾರೆ ಕೊಂಡವಪ್ಪ, ಅದು ಒಳ್ಳೇದಲ್ಲಂತೆ. ಸಂಸಾರಂದಿಗರಿಗೆ ಆಗಬರೋದಿಲ್ಲಂತೆ, ಆ ಶಾಮಭಟ್ಟರು ಹೇಳಿದರೂ ನಮ್ಮ ಮಾದಪ್ಪ ಕೇಳಲಿಲ್ಲ. ಇವನಂತೂ ಹುಡುಗ. ಇವನೂ ಅವನ್ಹಾಗೇ ಕುಣಿದ್ಬಿಟ್ಟ........ಅದರಿಂದ ಏನಾದರೂ, ಹೀಗೆಲ್ಲ...." ಎಂದು ನಡುವೆ ಬಾಯಿ ಹಾಕಿದಳು.

"ಆ ಮನೆಯ ಕ್ರಯಪತ್ರ ತೊಗೊಂಬಾ, ಹೇಳ್ತೀನಿ" ಎಂದು ಶಾಸ್ತ್ರಿಗಳು ಕುತೂಹಲದಿಂದ ಕೇಳಿದರು.

ಕೂಡಲೆ "ಪಾತಮ್ಮಾ" ಎಂದು ಕೂಗಿಕೊಂಡು, ಮುದುಕಿ ಅಡಿಗೆ ಮನೆಗೆ ಹೋಯಿತು.

"ಬಸಣ್ಣ ಮಹೇಶಣ್ಣನ ಜಾತಕ ನೋಡ್ತಾ ಇದಾನೆ. ಆ ಚೌಕದ ಮನೆ ಕ್ರಯಪತ್ರ ಬೇಕಂತಲ್ಲೆ ತೆಗೆದುಕೊಟ್ಟೇಯಾ?" ಎಂದು ಕೇಳಿದಳು.

ಮೊದಮೊದಲು ನಿರಾಸಕ್ತಳಾಗಿದ್ದ ಪಾರ್ವತಮ್ಮ, ಶಿವರುದ್ರಪ್ಪನವರ ಮನೆಯ ಕಡೆ, ಬರಿಯ ಹೆಣ್ಣು ಸಂತಾನ ಎಂಬುದನ್ನು ಕೇಳಿದ ಮೇಲೆ, ಸರಿಯಾದವರ ಕೈಯಲ್ಲಿ ಮಗನ ಜಾತಕ ನೋಡಿಸಬೇಕೆಂದು ಅನೇಕ ಬಾರಿ ಅಂದುಕೊಂಡಿದ್ದಳು. ಒಳ್ಳೆಯ ವಿದ್ವಾಂಸರೆಂದು ಹೆಸರಾದ ಬಸಪ್ಪಶಾಸ್ತ್ರಿಗಳು ಮನೆಗೇ ಬಂದಿರುವಾಗ, ಅವರಿಗೆ ತೋರಿಸಿ ಎಲ್ಲ ವಿವರವಾಗಿ ತಿಳಿದುಕೊಳ್ಳಬೇಕೆಂದು ಕುತೂಹಲಪಟ್ಟಳು.

"ಹ್ಞೂ, ಕೈತೊಳೆದುಕೊಂಡು ಬಂದು ಪೆಟ್ಟಿಗೆತೆಗೆದು ಕೊಡ್ತೀನಿ" ಎಂದು ಬಚ್ಚಲುಮನೆಗೆ ಹೋದಳು. ಗಂಗಮ್ಮ ಅಡಿಗೆಯ ಮನೆಯಲ್ಲಿ ಕುಳಿತು ಊಟಮಾಡುತ್ತಿದ್ದಳು. ಮಾದಪ್ಪನವರು ಹಳ್ಳಿಗೆ ಹೋಗಿದ್ದರು: ಮಹೇಶ್ವರ ಅಂಗಡಿಯಲ್ಲಿದ್ದ.

ಕೊರಳಲ್ಲಿದ್ದ ಬೀಗದಕೈ ಕುಚ್ಚಿನಿಂದ ಕಬ್ಬಿಣದ ಪೆಟ್ಟಿಗೆ ತೆಗೆದು, ಮನೆಯ ಕ್ರಯಪತ್ರವನ್ನು ಬಸಪ್ಪಶಾಸ್ತ್ರಿಗಳ ಕೈಗೆ ಕೊಟ್ಟಮೇಲೆ, ಪಾರ್ವತಮ್ಮ ಆಸಕ್ತಿಯಿಂದ ಪಡಸಾಲೆಯಲ್ಲಿಯೇ ಕುಳಿತುಬಿಟ್ಟಳು. ಶಾಸ್ತ್ರಿಗಳು ಎಲ್ಲವನ್ನೂ ನಿಧಾನವಾಗಿ ಓದಿಕೊಂಡರು. ಮಹೇಶ್ವರನ ಹೆಸರಿನಲ್ಲಿದ್ದ ಆ ಮನೆಯ ಕ್ರಯಪತ್ರವನ್ನೂ, ಮಹೇಶ್ವರನ ಜಾತಕವನ್ನೂ ಅಕ್ಕಪಕ್ಕದಲ್ಲಿ ಹಿಡಿದು, ಏನೇನೋ ಲೆಕ್ಕಾಚಾರ ಹಾಕಿಕೊಂಡರು. ಅದನ್ನೊಮ್ಮೆ ಇದನ್ನೊಮ್ಮೆ ಚೆನ್ನಾಗಿ ಪರಿಶೀಲಿಸಿದರು.

"ಮನೆ ಏನೋ ಸುಮಾರೇ...." ಎಂದು ರಾಗ ಎಳೆದು, ಕ್ರಯಪತ್ರವನ್ನು ಪಕ್ಕದ ಸ್ಟೂಲಿನ ಮೇಲಿಟ್ಟರು.

ಎಲ್ಲರ ಬಾಯಿಂದಲೂ ಅದನ್ನೇ ಕೇಳಿದ್ದ ಮಂಗಳಮ್ಮ "ಸುಮಾರು ಎಂದರೆ ಇವನಿಗೆ ಆಗಬರೊಲ್ಲಾಂತ್ಲೇ........ಅಥವಾ?........" ಎಂದು ಕುತೂಹಲದಿಂದ ಕೇಳಿದಳು.

"ಇವನಿಗೇಂತ ಅಲ್ಲ. ಒಟ್ಟಿನ ಮೇಲೆ ಮನೆ ಸುಮಾರು; ಅದರಲ್ಲೂ ಈ ಜಾತಕಕ್ಕೆ ಸ್ವಲ್ಪ ಅಷ್ಟಕಷ್ಟೆ....ಅಂದ್ರೇ....ನೀವೇನು ಅದರಲ್ಲಿ ವಾಸ ಮಾಡೋಕಲ್ಲವಲ್ಲ ಅದನ್ನ ತೊಗೊಂಡಿದ್ದು?...."

" ಇಲ್ಲ ಇಲ್ಲ....ಅಲ್ಲೆಲ್ಲಿ ವಾಸಮಾಡೋದು....ಸುಮ್ಮನೆ ಇವರ ಹುಚ್ಚು ....ಮಹೇಶ್ವರನೂ ಹಂಗೇ ಕುಣಿದ. ನಮ್ಮ ಮಾವನೋರು ಬ್ಯಾಡಾಂದ್ರೂ ಇವರು ಅಡ್ವಾನ್ಸ್ ಕೊಟ್ಟುಬಿಟ್ರು" ಎಂದು ಪಾರ್ವತಮ್ಮ ನಡುವೆ ವಿವರಿಸಿದಳು.

" ಏನು ಮೂರು ಸಾವಿರ ರೂಪಾಯೋ ? "

" ಅಡ್ವಾನ್ಸ್ ಎರಡು ಸಾವಿರ, ಪತ್ರ ಆದ ದಿನ ಮೂರು ಸಾವಿರ— ಒಟ್ಟು ಐದು ಸಾವಿರ ಆ ಮನೇಗೆ."

" ಓ ! ಹಾಗಾದರೆ ಮನೆ ಚೆನ್ನಾಗಿರಬಹುದು....ಆಗಬರದೇ ಇದ್ಮೇಲೆ ಅದನ್ನ ಯಾಕೆ ಮಾರಿಬಿಡಬಾರ್ದು ? "

" ಅಯ್ಯೋ, ಅದೇನ್ ಕೇಳ್ತಿ....ಅದನ್ನ ತೊಗೊಂಡಿದ್ದೋ ಕೆಡವಿಸಿ ಕಟ್ಟೋಕೆ. ಈಗ ಅದಕ್ಕೆ ಒಟ್ಟು ಹನ್ನೆರಡು ಸಾವಿರ ರೂಪಾಯಿ ಬಿದ್ದಿದೆ. ಅದನ್ನ ಮಾರೋಕೆ ಹೊರಟರೆ ಹನ್ನೆರಡು ಬರೊಲ್ಲ. ಅದಿರೋ ಜಾಗ ಚೆನ್ನಾಗಿಲ್ಲ; ಅಕ್ಕಪಕ್ಕ ನೆರೆ ಸರಿಯಾಗಿಲ್ಲ. ಏನೋ ಪ್ರಯತ್ನ ಮಾಡಬಹುದು. ಆದರೆ ಅದರಿಂದ ನಷ್ಟ ಆಗುತ್ತೆ....ಇಷ್ಟರ ಮೇಲೆ ಮಹೇಶ್ವರ ಒಪ್ಪಿದರೂ ನಮ್ಮ ಮಾದಣ್ಣ ಅದಕ್ಕೊಪ್ಪಲ್ಲ" ಎಂದು ಮಂಗಳಮ್ಮ ಉತ್ತರ ಕೊಟ್ಟಳು.

" ಸರಿ, ಯಾರಿಗಾದರೂ ಸರಿಯಾದವರಿಗೆ ನೋಡಿ ಬಾಡಿಗೇಕ್ಕೊಡಿ. ಇನ್ನೇನ್ಮಾಡ್ತೀರ."

" ಬಾಡಿಗೇಗೇನೋ ಈಗ ಒಬ್ಬರನ್ನ ಗೊತ್ತುಮಾಡಿದೆ. ನಲವತ್ತು ರೂಪಾಯಿ ಬಾಡಿಗೆ. ಮೈಸೂರು ಬ್ಯಾಂಕಿನ ಮ್ಯಾನೇಜರು ಅದ್ಯಾರೊ ಎತಿರಾಜು ಅಂತ ಬಂದಿದಾರಂತಲ್ಲ, ನಾಯಿಡು ಜಾತಿಯೋರು ಅವರು ಒಪ್ಕೊಂಡು ಹೋಗಿದಾರೆ. ಒಂದು ತಿಂಗಳ ಅಡ್ವಾನ್ಸೂ ಕೊಟ್ಟಿದಾರಂತೆ. ಅದಕ್ಕೂ ಎಷ್ಟೋ ಕಷ್ಟಪಡಬೇಕಾಯ್ತು. ತಿಳಿದೋರ್‍ಯಾರೂ ಆ ಮನೆಗೆ ಬರೊಲ್ಲ. ಸಂಸಾರಂದಿಗರಿಗೆ ಅದು ಆಗಬರೊಲ್ಲ ಅನ್ನೋದು ಈ ಊರಿನಲ್ಲಿ ಎಲ್ಲರಿಗೂ ಗೊತ್ತಿದೆ. ನೋಡ್ಬೇಕು ಅವರು ಎಷ್ಟು ದಿನ ಇರ್ತಾರೊ ! " ಎಂದು ಪಾರ್ವತಮ್ಮ ಹೇಳಿದಳು.

ಗಂಗಮ್ಮ ಊಟ ಮುಗಿಸಿ ಕೈತೊಳೆದುಕೊಂಡು ಪಡಸಾಲೆಯಲ್ಲಿದ್ದ ತಮ್ಮ ಕೋಣೆಗೆ ಹೋದಳು. ಗಂಡನ ಮತ್ತು ಮಗುವಿನ ಜಾತಕ ಪರೀಕ್ಷೆ

ನಡೆಯುತ್ತಿದ್ದಾಗ ಎದುರಿನಲ್ಲೇ ಕಿರಬೇಕೆಂದು ಅವಳು ಪಡಸಾಲೆಯಲ್ಲಿ ಒಂದು ಕ್ಷಣವೂ ನಿಲ್ಲಲಿಲ್ಲ. ತನ್ನತವರು ಮನೆಯಲ್ಲಿಯೂ ಇದೇ ಚಿತ್ರ ನೋಡಿ ನೋಡಿ ಅವಳಿಗೆ ಬೇಸರವಾಗಿತ್ತು. ಶಿವರುದ್ರಪ್ಪನವರಿಗೆ ಒಂದಾದ ಮೇಲೊಂದು ನಾಲ್ಕು ಹೆಣ್ಣು ಮಕ್ಕಳಾದ ಮೇಲೆ ಅವರ ತಾಯಿ ತನ್ನ ಸೊಸೆಯ ಜಾತಕ ಹಿಡಿದು, ಊರಿನ ಜೋಯಿಸರಿಗೆಲ್ಲ ತೋರಿಸಿದಳು. ಅವರಲ್ಲನೇಕರು ಹೇಳಿ ದಂತೆ, ಶಿವರುದ್ರಪ್ಪನವರಿಗೆ ಸಾಕಮ್ಮಾ ಎನ್ನುವಷ್ಟು ಹೆಣ್ಣುಮಕ್ಕಳೇ ಆದುವು. ಅವರು ಇನ್ನೂ ಒಬ್ಬ ಮಗಳ ಮದುವೆ ಮಾಡಿ ಹೊರೆಯಲ್ಲಿ ಎಂಟನೆಯ ಒಂದು ಭಾಗವನ್ನು ಮಾತ್ರ ಕಡಮೆ ಮಾಡಿಕೊಂಡಿದ್ದರು. ಜಾತಕಗಳ ಪರೀಕ್ಷೆ ಆದಮೇಲೆ ಗಂಗಮ್ಮನ ತಾಯಿಯ ಪಾಡು ಯಾರಿಗೂ ಬೇಡ ಎನ್ನಿಸಿಬಿಟ್ಟಿತ್ತು.

ಈ ಮನೆಯ ಪಡಸಾಲೆಯಲ್ಲಿ ಪ್ರಾರಂಭವಾಗಿದ್ದ ಆ ರೀತಿಯ ಜಾತಕ ಪರೀಕ್ಷೆ ನೋಡಿದಾಗ, ಗಂಗಮ್ಮನಿಗೆ ಏಕೊ, ಭಯವಾಯಿತು. ಮಂಚದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಕುಳಿತು, ಎಲೆಅಡಕೆ ಹಾಕಿಕೊಳ್ಳುತ್ತಾ ಹಾಗೆಯೇ ಪಡಸಾಲೆಯ ಮಾತಿಗೆ ಕಿವಿಗೊಟ್ಟಳು.

'ಮಹೇಶ್ವರನಿಗೆ ಎಷ್ಟು ಮಕ್ಕಳು ?' ಎಂಬ ಪ್ರಶ್ನೆಗೊ ಏನೊ ಬಸಪ್ಪ ಶಾಸ್ತ್ರಿಗಳು ಉತ್ತರ ಹೇಳುತ್ತಿದ್ದರು.

"ಫಲ ಹೆಣ್ಣಿನ ತವರನ್ನು ಹೊತ್ತಿದೆ. ಆದರೆ ಗಂಡನ ಮನೆಯ ಕಡೆ ಏಕಪುತ್ರಫಲ ಬಲವಾಗಿರೋಣದರಿಂದ ಗಂಡುಫಲವೂ ಆಗುವ ಸಂಭವ ಇದೆ ....ಏನೇ ಆಗಲಿ, ಈಗಲೇ ನಾಗಪ್ರತಿಷ್ಠೆಯನ್ನೂ ಮಾಡಿಬಿಡುವುದು ಒಳ್ಳೆ ಯದು" ಎಂಬ ಮಾತು ಗಂಗಮ್ಮನ ಕಿವಿಗೆ ತುಂಬ ನೋವನ್ನುಂಟುಮಾಡಿತು.

ಮುದುಕಿಗೆ ಆಗಲೆ ಅರ್ಧ ನಿರಾಸೆಯುಂಟಾಗಿದ್ದರೂ, ಸೊಸೆಯನ್ನು ತುಂಬ ಅಂತಃಕರುಣೆಯಿಂದ ಕಾಣುತ್ತಿದ್ದ ಪಾರ್ವತಮ್ಮ "ಮಾಡಿದರಾಯಿತು, ನಾಗಪ್ರತಿಷ್ಠೆಗೇನು....ಚೆನ್ನಾಗೇ ಮಾಡಿಸೋಣ" ಎಂದಳು.

ಮಂಗಳಮ್ಮ ಮಾತ್ರ, ಮರಿಮಗನನ್ನು ನೋಡುವ ಭಾಗ್ಯವಿಲ್ಲವಲ್ಲಾ ಎಂದು ಮೌನವಾಗಿದ್ದಳು. ಮನಸ್ಸು ತಡೆಯಲಿಲ್ಲ. "ನೋಡು ಬಸಣ್ಣ, ಆ ಮನೆ ಕೊಂಡಿದ್ದಾಯ್ತು, ಒಂದಾದ ಮೇಲೊಂದು ಕಷ್ಟ ಬರಲಿಕ್ಕೆ ಷುರು ವಾಯ್ತು........ಅ–ವ–ರು" ಎಂದುಕೊಳ್ಳುತ್ತ ಗಂಡನನ್ನು ನೆನಸಿಕೊಂಡು ಕಣ್ಣುಮುಚ್ಚಿ, ಮೂಗು ಹಿಂಡಿ, ಕೈಕೊಡವಿದಳು.

"ಕಷ್ಟಾನ್ನೋದು ಹುಟ್ಟಬಿಟ್ಟರೆ ಬೆಟ್ಟದ್ಹಾಗೆ ಬರುತ್ತಮ್ಮಾ, ಬೆಟ್ಟದ್ಹಾಗೆ ಬರುತ್ತೆ" ಎಂದು ಶಾಸ್ತ್ರಿಗಳು ಮಹಾತತ್ತ್ವವನ್ನು ಸಾರುವಂತೆ ಗಂಭೀರವಾಗಿ ನುಡಿದರು.

ಬಾಗಿಲಲ್ಲಿ 'ಟ್ರಿನ್' ಎಂದು ಸೈಕಲ್ ಬೆಲ್ ಶಬ್ದವಾಯಿತು.

"ಮಹೇಶಣ್ಣ ಬಂದ, ಬಸಣ್ಣ, ಅದನ್ನು ತೆಗೆದಿಡು. ಇನ್ನು ನನ್ನ ಬಯ್ತಾನೆ ಅವನು....ಯಾಕೆ ತೋರಿಸ್ತೀಯಾ ಎಲ್ಲಾರ್ಗೂ ಅದನ್ನಾಂತ" ಎಂದು ಮುದುಕಿ ಮಂಗಳಮ್ಮ ಎದ್ದು ಹೋಗಿ, ಆ ಕ್ರಯಪತ್ರ ಮತ್ತು ಜಾತಕಗಳನ್ನು ಮಡಿಸಿ ತೆಗೆದಿಡಲು ಹೊರಟಳು.

"ನೀವು ಬಾಗಿಲು ತೆಗೀರಿ, ನಾನವನ್ನು ಒಳಗಿಡ್ತೀನಿ" ಎಂದು ಪಾರ್ವತಮ್ಮ ಅತ್ತೆಯನ್ನು ವ್ಹೆರಾಂಡಾಕ್ಕೆ ಕಳಿಸಿ, ತಾನು ಈ ಕಾಗದ ಪತ್ರಗಳನ್ನು ಒಳಗೆ ಪಡಸಾಲೆಯ ಇನ್ನೊಂದು ಕೋಣೆಗೆ ಒಯ್ದಳು.

ಮಹೇಶ್ವರ ಸೈಕಲ್ ತೆಗೆದಿಟ್ಟು "ಅಣ್ಣಯ್ಯ ಬರಲಿಲ್ಲ?" ಎಂದು ಅಜ್ಜಿಯನ್ನು ಕೇಳಿದ.

"ಇಲ್ಲಪ್ಪಾ........ಕಾಯಿ ತುಂಬಿಕೊಂಡು ಬರ್ತೀನಿ ಅಂತಿದ್ದ.... ರಾಮಪ್ಪ ಹೊಲದಿಂದ ಬಂದ ಮೇಲೆ ಗಾಡಿ ಕಟ್ಟಿಸಿಕೊಂಡು ಬರಬೇಕು; ಸಂಜೆಗೆ ಬರಬಹುದು...." ಎಂದು ಮುದುಕಿ ಬಾಗಿಲು ಮುಂದಕ್ಕೆ ಮಾಡುತ್ತ ಹೇಳಿದಳು.

ಮಹೇಶ್ವರ ಪಡಸಾಲೆಯಲ್ಲಿದ್ದ ಬಸಪ್ಪಶಾಸ್ತ್ರಿಗಳನ್ನು ನೋಡಿ "ಊಟ ಆಯ್ತಾ?" ಎಂದು ಉಪಚಾರದ ಮಾತಾಡಿ ವಿಚಾರಿಸಿಕೊಂಡ.

"ಆಯ್ತಪ್ಪಾ........ಏನು ಬಿಸಿಲು?........ದಿನಾ ಇಷ್ಟು ಹೊತ್ತೇ ನಿನ್ನೂಟ?"

"ಹೌದು. ಈಗೇನು ಮಹಾ, ಇನ್ನೂ ಒಂದು ಗಂಟೆ ಇಲ್ಲ!"

"ಅಯ್ಯೊ ಅಯ್ಯೊ, ನನ್ನ ಕೈಲಿ ಸಾಧ್ಯ ಇಲ್ಲಪ್ಪ. ಅಬ್ಬಬ್ಬ ಅಂದರೆ ಹನ್ನೆರಡು ಗಂಟೆ. ಏನೇ ಆಗಲಿ ಅದರೊಳಗೆ ಉಂಡುಬಿಡಬೇಕು. ಹ್ಞ, ಹೋಗು ಬೇಗ ಊಟಮಾಡಪ್ಪ" ಎಂದು ಬಸಪ್ಪಶಾಸ್ತ್ರಿಗಳು ಸ್ಟೂಲಿನ ಮೇಲಿದ್ದ ಬೀಸಣಿಗೆ ತೆಗೆದುಕೊಂಡು ಬೀಸಿಕೊಳ್ಳತೊಡಗಿದರು.

ಸೈಕಲ್ಲನ್ನು ಗೋಡೆಗೆ ಒರಗಿಸಿ, ಮಹೇಶ್ವರ ತನ್ನ ಕೋಣೆಗೆ ಹೋದ.

ಬಾಯಿಯಲ್ಲಿ ಹಾಕಿಕೊಂಡ ಎಲೆಅಡಕೆಯನ್ನು ಅಗಿಯುತ್ತ, ಗಂಗಮ್ಮ ಹಾಸಿಗೆಯ ಮೇಲೆ ಮಲಗಿಕೊಂಡು, ಮುಹಡಿಯ ಹಲಗೆಯನ್ನೇ ನೋಡುತ್ತಿದ್ದಳು. ಬಾಣಂತಿ ಕಾಲದಲ್ಲಿ ಚೆನ್ನಾಗಿ ಶುಶ್ರೂಷೆಗೊಂಡು ಮೈತುಂಬಿಕೊಂಡ ಅವಳ ಕೆನ್ನೆ, ತುಟಿಯ ಕೆಂಪಿಗೆ 'ನಾನೂ ಇದ್ದೇನೆ' ಎಂದು ಹೇಳುವಂತಿತ್ತು. ಆ ದುಂಡು ಮುಖ ಮಹೇಶ್ವರನ ದುಂಡು ಮುಖಕ್ಕೆ ಬಹಳ ಚೆನ್ನಾಗಿ ಒಪ್ಪುತಿತ್ತು. ಮಹೇಶ್ವರನೂ ತುಂಬ ಚೆಲುವ. ಮೊದಲಿನಿಂದ ರಸಿಕ ಅಲ್ಲದಿದ್ದರೂ, ಗಂಗಮ್ಮನನ್ನು ಮದುವೆ ಆದಮೇಲೆ ಚೆನ್ನಾಗಿಯೇ ರಸಿಕನಾಗಿದ್ದ.

ಆ ಕಪ್ಪು ತಲೆಗೂದಲ ಕೆಂಪು ಚೆಲುವೆ ನವಿಲು ಬಣ್ಣದ ಸೀರೆ ಉಟ್ಟುಕೊಂಡು ಹಾಸಿಗೆಯ ಮೇಲೆ ಅಂಗಾತ ಮಲಗಿದ್ದುದನ್ನು ನೋಡಿ, ಮಹೇಶ್ವರನ ರಸಿಕತೆ ಚಿಮ್ಮಿ ಬಂತು.

"ಏನು ಆಕಾಶ ನೋಡ್ತಾ ಇದಾರೆ ಅಮ್ಮನೋರು!" ಎಂದು ಮೆಲ್ಲಗೆ ಕೇಳಿದ.

ಏನೋ ಯೋಚನೆಯಲ್ಲಿದ್ದ ಅವಳಿಗೆ, ಗಂಡ ಬಂದ ಸುಳಿವೇ ಆಗಿರಲಿಲ್ಲ. ತಟ್ಟನೆ ಬೆಚ್ಚಿ, ಈ ಕಡೆ ತಿರುಗಿ ಅರ್ಧ ಎದ್ದು, "ಓ ನೀವಾ!" ಎಂದು ಮತ್ತೆ ಹಾಗೆಯೇ ಮಲಗಿಕೊಂಡಳು.

"ಹ್ಞು, ನಾವೇ" ಎಂದು ಮಹೇಶ್ವರ ಕೋಣೆಯ ಬಾಗಿಲನ್ನು ಮುಂದಕ್ಕೆ ಮಾಡಿ, "ಅಮ್ಮನೋರು ಯಾಕೋ ಆಕಾಶ ನೋಡ್ತಿದ್ರಲ್ಲಾ ಅಂದೆ, ಅಷ್ಟೆ."

"ಹ್ಞು, ಆಕಾಶ ಏನ್ ನೋಡ್ತಿರಲಿಲ್ಲ. ಅಟ್ಟದ ಹಲಗೆ ನೋಡ್ತಿದ್ದೆ" ಎಂದು ಮಡದಿ ಮಾಮೂಲಿನಂತೆ ಮಜಬೂತಾದ ಉತ್ತರ ಕೊಟ್ಟಳು.

ನಿರ್ಮಲವಾದ ಬಿಳಿಯ ಜುಬ್ಬ ಹಾಕಿಕೊಂಡ, ಗುಂಗುರು ಕ್ರಾಪು ತಿದ್ದಿಕೊಂಡ, ಗೆರೆಮೀಸೆಯ ಗಂಡನ ಆ ಸುಂದರವಾದ ಮುಖ ನೋಡಿ ಈ ಚಮತ್ಕಾರದ ಉತ್ತರ ಅವಳ ಬಾಯಿಂದ ಹೊರಬಿತ್ತು. ಆದರೆ ತಕ್ಷಣವೆ, ತಾನು ನಿಜವಾಗಿಯೂ ಏನುಮಾಡುತ್ತಿದ್ದಳೆಂಬುದು ನೆನಪಾಗಿ ಸುಮ್ಮನಾದಳು.

ಮಹೇಶ್ವರ ಜುಬ್ಬ ಬಿಚ್ಚಿ, ಸ್ಟ್ಯಾಂಡಿನ ಮೇಲಿದ್ದ ಟವಲನ್ನು ತೆಗೆದು ಭುಜದ ಮೇಲೆ ಹಾಕಿಕೊಂಡ. ಪದ್ಧತಿಯಂತೆ ತನ್ನ ಜೊತೆಯಲ್ಲಿಯೇ ಅಡಿಗೆ ಮನೆಗೆ ಬರುತ್ತಿದ್ದ ಹೆಂಡತಿ, ಏಕೊ ಹಾಗೆಯೇ ಮಲಗಿದ್ದುದನ್ನು ಕಂಡು ಅವ

ನಿಗೆ ಸ್ವಲ್ಪ ಆಶ್ಚರ್ಯವಾಯಿತು. ಮುಖ ನೋಡಿದ. ಪಾಪ, ಈಗತಾನೆ ಊಟ ಮಾಡಿ ಆಯಾಸವಾದಂತಿದೆ, ಎಂದುಕೊಂಡು ಬಾಗಿಲು ಮುಂದಕ್ಕೆ ಮಾಡಿ ಕೊಂಡು ಅಡಿಗೆ ಮನೆಯ ಕಡೆಗೆ ಹೊರಟ.

* * * *

ಶಿವಣ್ಣಿ ಸಾರು ಬಡಿಸುತ್ತಿದ್ದಾಗ ಗೋಡೆಯ ಹತ್ತಿರ ಮಣೆ ಹಾಕಿಕೊಂಡು ಸುಮ್ಮನೆ ಕುಳಿತಿದ್ದ ಪಾರ್ವತಮ್ಮ "ಆ ಮನೇನ ಯಾಕೆ ಮಾರಿಬಿಡಬಾರ್ದು ಮಹೇಶಣ್ಣ ನಾವು ?" ಎಂದು ಕೇಳಿದಳು.

"ಯಾವ ಮನೇನ ?"—ಸಂದರ್ಭ ತಿಳಿಯದ ಮಹೇಶ್ವರ ಸಾರು ಅನ್ನ ಕಲಸುತ್ತ ಕೇಳಿದ.

"ಆ ಮನೇನ—ಮಾರಮ್ಮನ ಚೌಕದ್ದು."

"ಅದು ನಮ್ಗೇನು ಮಾಡುತ್ತೆ ಹೇಳು. ಸುಮ್ನೆ ಮಾರಿ ಮಾರಿ ಅಂತೀರಿ. ಒಂದಲ್ಲ ಒಂದು ದಿನ ಮಾರೋದೇ ನಿಜ. ಆದರೆ ಸಮಯ ನೋಡಿ ಕಂಡಹಾಗೆ ನಾಲ್ಕು ಕಾಸು ಬರೋವಾಗ ಮಾರೋಣಾಂತ. ಈಗ ಇಷ್ಟೊಂದು ಖರ್ಚು ಮಾಡಿ, ಮಾರೋಕೆ ಹೊರಟರೆ ಆ ದುಡ್ಡೆಲ್ಲ ಬರುತ್ತೇಂತ ತಿಳಿದುಕೊಂಡ್ಯಾ. ಇನ್ನೂ ಕೊನೇ ಪಕ್ಷ ಎರಡು ವರುಷ ಹೋದರೆ ಆಮೇಲೆ ನೋಡ್ಬೇಕು....ಅದರಲ್ಲೂ ಬೆನ್ನೂರು ರಸ್ತೇಲಿ ಕಾಗದದ ಕಾರ್ಖಾನೆ ಆದರೆ ಆ ಕಡೆ ಮನೆಗಳಿಗೆಲ್ಲ ಒಳ್ಳೇ ಬೆಲೆ ಬರುತ್ತೆ. ಆದ್ದರಿಂದ ನಾನು, ಆತುರಪಡೋದು ಬ್ಯಾಡಾನ್ನೋದು."

"ಏನೋಪ್ಪ........ಮನೆ ಒಳ್ಳೇದಲ್ಲಾಂತಾರೆ ಎಲ್ಲ. ಅದಕ್ಕೋಸ್ಕರ ಕೊಟ್ಟು ಕೈ ತೊಳೆದುಕೊಳ್ಳೋಣಾಂತ."

"ಒಳ್ಳೇದೋ ಕೆಟ್ಟದ್ದೋ, ಎಲ್ಲ ನಮ್ಮ ಹಣೇಲಿ ಬರೆದ್ದಾಗಾಗುತ್ತೆ. ಮನೆ ಏನ್ಮಾಡುತ್ತೆ."

"ಅಂದ್ಹಾಗೆ, ನಿನ್ನ ಜಾತ್ಕಾನೂ ತೋರಿಸ್ದೆಕಣೊ ಬಸಣ್ಣಂಗೆ. ನಿಂಗ್ ಹೇಳೋದು ಬ್ಯಾಡಾಂತಿದ್ದೆ....ಹೋಗ್ಲಿ ಬಿಡು ಬಾಯಿಗೆ ಬಂದ್ಬಿಡ್ತು ಹೇಳ್ಬಿಟ್ಟೇನಿ. ನಿನ್ನ ಜಾತಕಕ್ಕೆ ಆ ಮನೆ ಒಗ್ಗಿಬರೊಲ್ವಂತೆ........ಆಮೇಲೇ.... ನಾಗಪ್ರತಿಷ್ಠೆ ಮಾಡ್ಸಿದ್ರೆ ಒಳ್ಳೇದೂಂತ ಎಲ್ಲ ಹೇಳ್ತಾರೆ ;....ಬಸಪ್ಪಣ್ಣನೂ ಅದೇ ಹೇಳಿದ."

" ಈಗ್ಯಾಕೆ ನಾಗಪ್ರತಿಷ್ಠೆ ಹೇಳು."

" ಈಗಾಂತಲ್ಲ........ನಿನ್ನ ಜಾತಕದ ಪ್ರಕಾರ ಅದನ್ನು ಎಂದಿದ್ರೂ ಮಾಡಬೇಕು....ಈಗಲೇ ಮಾಡ್ಸಿದ್ರೆ ಒಳ್ಳೇದೂಂತ, ಅಷ್ಟೆ."

ಮಹೇಶ್ವರ ಊಟ ಮುಗಿಸಿ, ಕೈ ತೊಳೆದುಕೊಳ್ಳಲು ಬಚ್ಚಲು ಮನೆಗೆ ಹೋದ. ತಾಯಿಯ ಸಲಹೆಗೆ ತನ್ನ ಅಭಿಪ್ರಾಯವನ್ನು ತಿಳಿಸದೆ ಮೌನವಾಗಿ ಕೋಣೆ ಸೇರಿದ.

ಗಂಗಮ್ಮ ಹಾಸಿಗೆಯ ಮೇಲೆ ಕುಳಿತು, ಎಲೆಅಡಕೆಯ ತಟ್ಟೆಯನ್ನು ತಂದಿಟ್ಟುಕೊಂಡು, ಮಡಿಸಿ ಸಿದ್ಧಪಡಿಸಿದ ಎಲೆಗಳನ್ನು ಒಂದರ ಪಕ್ಕದಲ್ಲೊಂದ ರಂತೆ ತಟ್ಟೆಯಲ್ಲಿಡುತ್ತಿದ್ದಳು. ಹೆಗಲ ಮೇಲಿದ್ದ ಟರ್ಕಿ ಟವಲಿನಿಂದ ಕೈಯೊ ರಸಿಕೊಳ್ಳುತ್ತ ಮಹೇಶ್ವರ, ಕೋಣೆಯ ಬಾಗಿಲನ್ನು ಬಲಗಾಲಿನಿಂದ ಮುಂದಕ್ಕೆ ಮಾಡಿ, ಹಾಸಿಗೆಯ ಮೇಲೆ ಬಂದು ಕುಳಿತ.

ಮುಖ ಕೈಗಳನ್ನು ಚೆನ್ನಾಗಿ ಒರಸಿಕೊಂಡು, ದಿಂಬಿಗೆ ಅಡ್ಡಲಾಗಿ ಕುಳಿತಿದ್ದ ಹೆಂಡತಿಯ ತೊಡೆಯ ಮೇಲೆ ಒಂದು ಏಟು ಕೊಟ್ಟು " ಸ್ವಲ್ಪ ಸರಿ, ಹಾಗೇ ಉರುಳ್ಕೊಳ್ಳೋಣ " ಎಂದ.

ಏಟು ಬಿದ್ದಕೂಡಲೆ, ಕೀಟಲೆ ಷುರುವಾಯಿತೆಂದು ಗಂಗಮ್ಮ " ಇಲ್ಲೇ ಮಲಕ್ಕೊಳ್ಳಿ" ಎಂದು, ಏಟು ಬಿದ್ದ ಜಾಗವನ್ನು ಮುಟ್ಟಿ ಹೇಳಿದಳು.

" ಇಲ್ಲ. ಅದು ತುಂಬ ಒರಟು, ಮೆತ್ತಗಿಲ್ಲ" ಎಂದು, ಅವಳ ಮೃದುವಾದ ತೊಡೆಯನ್ನು ಮುದ್ದಿನಿಂದ ಬಲವಾಗಿ ಜಿಗುಟಿ, ತಳ್ಳಿ ದಿಂಬಿನ ಮೇಲೆ ಬಿದ್ದುಕೊಂಡ.

" ಹಾ ! ಸುಮ್ನಿರೀಂದ್ರೆ, ಇದೇನು ಹುಚ್ಚು" ಎಂದು ಗಂಗಮ್ಮ ಪಡಸಾಲೆಯ ಕಡೆ ಕೈ ತೋರಿಸಿ, ಎಚ್ಚರಿಸಿದಳು.

ಪಡಸಾಲೆಯಲ್ಲಿ ಬಸಪ್ಪಶಾಸ್ತ್ರಿಗಳು ಆರಾಮು ಕುರ್ಚಿಯ ಮೇಲೆ ಮಲಗಿ ಬಾಯಿ ಬಿಟ್ಟುಕೊಂಡು ಗಾಢ ನಿದ್ದೆ ಹೊಡೆಯುತ್ತಿದ್ದರು. ಬಿಳಿ ಕೂದಲು ತುಂಬಿದ ಎದೆಯ ಮೇಲೆ ಮಲಗಿದ್ದ ಚಿನ್ನದ ಕರಡಿಗೆ ಮೇಲೆ ಕೆಳಗೆ ತೂಗುತ್ತಿತ್ತು ; ಗಂಟಲು ಜೋಗುಳ ಹಾಡುತ್ತಿತ್ತು.

ಅಜ್ಜಿ ಮಂಗಳಮ್ಮ ಅಲ್ಲಿಯೇ ಇದ್ದ ರತ್ನಕಂಬಳಿಯ ಮೇಲೆ, ದುಂಡು ದಿಂಬನ್ನು ತಲೆಯ ಕೆಳಗಿಟ್ಟುಕೊಂಡು ನಿದ್ದೆಮಾಡಿದ್ದಳು. ಪಾರ್ವತಮ್ಮ

ಅಡಿಗೆ ಮನೆಯಲ್ಲಿ ಏನೋ ಕೆಲಸ ಮಾಡುತ್ತಿದ್ದರು.

ಅಷ್ಟು ದೊಡ್ಡ ಪಡಸಾಲೆಯಲ್ಲಿ ಆರು ತಿಂಗಳ ಎಳೆಯ ಮಗು ಗೌರ ಒಂದೇ ಚಟುವಟಿಕೆಯಿಂದ ಕೈಕಾಲು ಬಡಿಯುತ್ತಿದ್ದುದು. 'ಗೂಗು' ಎಂದು ಏನೋ ಹೇಳಿಕೊಳ್ಳುತ್ತ ಆಡುತ್ತಿದ್ದ ಮಗುವಿನ ಹಿಮ್ಮೇಳವಾಗಿ ಕಾಲುಗೆಜ್ಜೆ ತಾಳ ಹಾಕುತ್ತಿತ್ತು. ಕೈಯ ಬಳೆ ಆಗೊಮ್ಮೆ ಈಗೊಮ್ಮೆ 'ಟಣಕ್' ಎನ್ನುತ್ತಿತ್ತು. ನಿಶ್ಶಬ್ದವಾದ ಮನೆಯ ಕೋಣೆಯಲ್ಲಿದ್ದ ಮಹೇಶ್ವರನಿಗೆ ಈ ದನಿ ಕೇಳಿಸಿತೊ, ಏನೊ! ಹೆಂಡತಿ, ಮಲಗಿಕೊಂಡ ಗಂಡನ ಬಾಯಿಗೆ ಒಂದೊಂದೇ ಎಲೆ ಮಡಿಸಿಡುತ್ತಿರುವಾಗ, ಕೊನೆಯ ಎಲೆಯನ್ನು ಬಾಯಿಯಲಿಟ್ಟುಕೊಂಡು,

"ಮಗು ಎಲ್ಲಿ ?" ಎಂದ.

"ನೋಡ್ಲಿಲ್ವ ಪಡಸಾಲೇಲಿ, ಇದೇನ್ ಹೀಗೆ ಕೇಳ್ತೀರಿ ?"

"ಸರಿ. ಅಲ್ಲಿದೆ........ಇಲ್ಲೆಲ್ಲೀಂತ ?"

"ಅಲ್ಲಿದ್ಮೇಲೆ ಇಲ್ಲಿ ಹ್ಯಾಗೆ ಬರುತ್ತೆ !"

ಬುದ್ಧಿವಂತೆ ಗಂಗಮ್ಮನಿಗೆ ತಕ್ಷಣ ಏನೋ ಹೊಳೆಯಿತು. ಗಂಡ ಆ ಮಾತಿಗೆ ಆ ಅರ್ಥ ಇಟ್ಟು ಆಡದಿದ್ದರೂ ಆ ಮಾತು ಅವಳಿಗೆ ಆ ಅರ್ಥ ಇಟ್ಟು ಹೇಳಿತು ; ತುಟಿ ನಕ್ಕಿತು. ನಗುವನ್ನು ತಡೆದುಕೊಂಡು "ಕರಕೊಂಡ್ಬರ್ತೀನಿ ತಡೀರಿ" ಎಂದು ಪಡಸಾಲೆಗೆ ಹೋದಳು.

ಗಂಗಮ್ಮ ರಬ್ಬರ್ ಷೀಟಿನ ಸಮೇತ ಮಗುವನ್ನೆತ್ತಿಕೊಂಡುಬಂದು ಗಂಡನ ಪಕ್ಕದಲ್ಲಿ ಮಲಗಿಸಿದಳು. ಚಿನ್ನದ ತಂತಿಯಲ್ಲಿ ಕೆಂಪು ಮಣಿ ಸುತ್ತಿದ ಬಳೆ, ಒಂದು ಜೊತೆ ಚಿನ್ನದ ಬಳೆ, ಮುದ್ದಾದ ಪುಟ್ಟ ಬೆರಳಿಗೆ ಪುಟ್ಟ ಕೆಂಪು ಹರಳಿನ ಉಂಗುರ ಇಟ್ಟುಕೊಂಡಿದ್ದ, ಆ ಗುಲಾಬಿ ಹೂವಿನಂಥ ಕೈಯನ್ನು ಮಹೇಶ್ವರ ಹಿಂಡಿ ಮುದ್ದಿಸಿದ. ಮಗು ತಂದೆಯ ಮುಖ ನೋಡಿ ನಕ್ಕಿತು. ಒಂದು ತೆರೆ ಹಾಕಿದಂತೆ, ಗುಂಡು ತಲೆಯ ಮೇಲೆ ಬೆಳೆದಿದ್ದ ಕಪ್ಪು ಕೂದಲು ಆಗತಾನೆ ನೆತ್ತಿಗೆ ಹಚ್ಚಿದ ಎಣ್ಣೆಯಿಂದ ಮಿಂಚುತ್ತಿತ್ತು. ಕಾಡಿಗೆ ಹಚ್ಚಿದ ಕಣ್ಣಿನ ಕಪ್ಪುಗುಡ್ಡೆ ಬೆಳ್ಳಿಯಂಥ ಬಿಳಿಯ ಗುಡ್ಡೆಯಲ್ಲಿ ಆಡುತ್ತಿತ್ತು. ಹೊಟ್ಟೆಯ ಮೇಲೆ ಹೊದಿಸಿದ ಪುಟ್ಟ ಶಾಲನ್ನು ತಳ್ಳಿ 'ಸೆಖೆ, ಬೇಡ' ಎಂದು ಆ ಎಳೆಯ ದುಂಡುಗಾಲು ಒದೆಯುತ್ತಿತ್ತು. ದೃಷ್ಟಿಪರಿಹಾರಕ್ಕೆಂದು ಹಣೆಗೆ ಇಟ್ಟ ಕಪ್ಪು ಬೊಟ್ಟು ಮಗುವಿನ ಸೌಂದರ್ಯವನ್ನು ಹೆಚ್ಚಿಸಿತ್ತು.

ಮಹೇಶ್ವರ ಮುದ್ದಿಗಾಗಿ "ಚೀ ಕಳ್ಳ !" ಎಂದು ಕೆನ್ನೆ ಹಿಂಡಿದ.

"ಕಳ್ಳ ಅಲ್ಲವಲ್ಲ, ಕಳ್ಳಿ !" ಎಂದಳು ಹೆಂಡತಿ.

* * * *

ಇಂಥ ಕಳ್ಳಿಯರು ಮೂವರಾದ ಮೇಲೆ ಮಹೇಶ್ವರನ ಮನಸ್ಸು ಬದಲಾಯಿಸಿತು. ಮೊದಲನೆಯ ಮಗಳು ಗೌರ ಹುಟ್ಟಿ ಮುತ್ತಾತನನ್ನು ತಿಂದುಕೊಂಡಿದ್ದಳು. ನಾಗಪ್ರತಿಷ್ಠೆ ಆದಮೇಲೆ ಹುಟ್ಟಿದ ಎರಡನೆಯ ಮಗಳು ಲಲಿತ ಮುತ್ತಜ್ಜಿಯನ್ನು ನುಂಗಿಕೊಂಡಿದ್ದಳು. ಮೂರನೆಯ ಮಗಳು, ಮುತ್ತಜ್ಜಿಯ ಹೆಸರಿಟ್ಟುಕೊಂಡು ಹುಟ್ಟಿದ ಮಂಗಳ ಅಮಂಗಳೆಯಾಗಿ ಮಾದಪ್ಪನವರನ್ನೇ ಮುಗಿಸಿಬಿಟ್ಟಿದ್ದಳು.

ಮಗುವಿನ ಜನನಕ್ಕೂ ಮುದುಕರ ಮರಣಕ್ಕೂ ಸಂಬಂಧ ಉಂಟೆಂಬುದನ್ನು ಮನೆಯಲ್ಲಿ, ಮನೆಯ ಹೊರಗೆ ಎಲ್ಲ ನಂಬಿಬಿಟ್ಟಿದ್ದರು. ಮಹೇಶ್ವರನೂ ಆಗಾಗ ನಂಬುತ್ತಿದ್ದ. ಆದರೆ ಆ ಮಕ್ಕಳ ತಾಯಿ ಗಂಗಮ್ಮ ಮಾತ್ರ 'ಇದು ಅವಿವೇಕ' ಎಂದು ಒಳಗೇ ಕೊರಗುತ್ತಿದ್ದಳು.

ರಸಿಕ ದಂಪತಿ ಜೀವನ ಕನಸಾಗಿ ಹೋಗಿ, ಎರಡು ವರ್ಷ ಉರುಳಿದ್ದುವು. ಆದರೆ ಮಹೇಶ್ವರನಲ್ಲಿ ಆ ರಸಿಕತೆ ಉಡುಗದೆ ಚಿಮ್ಮಿ ಮರುಕಳಿಸಿ, ಒಳಗೇ ಕುಸಿದು ಬೀಳುತ್ತಿತ್ತು. ಗಂಗಮ್ಮ ಮಾತ್ರ ಗಟ್ಟಿ ಮನಸ್ಸು ಮಾಡಿಕೊಂಡು ಸದಾ ಎಚ್ಚರದಿಂದಿರುತ್ತಿದ್ದಳು.

ಎಷ್ಟಾದರೂ ಯೌವನ ಮೀರಿದ ಹೆಣ್ಣು ಜೀವ. ರಸಮಯ ಸನ್ನಿವೇಶಗಳ ರುಚಿ ಕಂಡ ಸುಂದರ ದೇಹ; ಆಗಾಗ ಅದರ ನೆನಪು ಮಾಡಿಕೊಂಡು ಅದಕ್ಕಾಗಿ ಹಾತೊರೆಯುತ್ತಿತ್ತು. ಇಬ್ಬರೂ ಸೋತುದರ ಫಲವಾಗಿಯೆ ಮೂರನೆಯ ಮಗಳು ಮಂಗಳ ಬಂದು ಮಾವನವರನ್ನು ನುಂಗಿಕೊಂಡುದು. ಅದರ ನೆನಪಾದಾಗ, 'ಒಮ್ಮೆ ತಪ್ಪಿ ನಡೆದ ಕಾಲಿಗೆ ಬುದ್ಧಿ ಬಂದಿದೆಯಲ್ಲ. ಸದ್ಯ, ಇನ್ನು ಬೇಡಪ್ಪ ದೇವರೆ !' ಎಂದುಕೊಳ್ಳುತ್ತಿದ್ದಳು.

ಆದರೆ, ಮಹೇಶ್ವರನಿಗೆ ಅನೇಕ ವೇಳೆ ಆ ಎಚ್ಚರಿಕೆ ಉಂಟಾಗುತ್ತಿರಲಿಲ್ಲ. ದೇಹದ ದಾಹಕ್ಕೆ ಸೋತು ಕೈ ಚಾಚಿದಾಗ, ಹೂವಿನಂತಿದ್ದ ಗಂಗಮ್ಮನ ಹೃದಯ ಕಲ್ಲಾಗಿ ದೂರ ನಿಲ್ಲುತ್ತಿತ್ತು. ಅವಳೇ ಗೆಲ್ಲುತ್ತಿದ್ದಳು. ಆದರೆ ಆ ಚೆಲುವು—ಅವಳ ಭಾಗಕ್ಕೆ—ಮುಂದೆ ಸೋಲಾಗಿ ಪರಿಣಮಿಸಿತು.

ಒಂದು ರಾತ್ರಿ, ಎಂದಿನಂತೆ ಒಂದೇ ಕೋಣೆಯಲ್ಲಿ ಬೇರೆ ಬೇರೆ ಹಾಸಿಗೆ

ಹಾಸಿತ್ತು. ಆದರೆ, ಕೆಳಗೆ ಗಂಗಮ್ಮನ ಹಾಸಿಗೆ ಇಬ್ಬರು ಮಲಗುವಂತೆ ದೊಡ್ಡ ಹಾಸಿಗೆಯಾಗಿತ್ತು. ಒಂದೂವರೆ ವರುಷದ ಮಂಗಳ ಆ ಹಾಸಿಗೆಯ ಮೂಲೆಯೊಂದರಲ್ಲಿ ಬಿದ್ದುಕೊಂಡಿತ್ತು. ಬೇಗ ಊಟಮಾಡಿದ ಗೌರ, ಲಲಿತ ಮಂಚದ ಮೇಲೆ ತಂದೆಯ ಹಾಸಿಗೆಯ ಮೇಲೆ ಮಲಗಿಬಿಟ್ಟಿದ್ದರು. ತಾಯಿ ಪಾರ್ವತಮ್ಮ ಹಳ್ಳಿಗೆ ಹೋಗದಿದ್ದರೆ ಅವರಿಬ್ಬರೂ ಅಲ್ಲಿ ಮಲಗುತ್ತಿರಲಿಲ್ಲ. ಪಡಸಾಲೆಯಲ್ಲಿ ಆಕೆಯ ಜೊತೆ ಮಲಗುತ್ತಿದ್ದರು, ಮಂಗಳ ಮಾತ್ರ ಗಂಗಮ್ಮನ ಮಗ್ಗುಲಲ್ಲಿ ಮಲಗುತ್ತಿದ್ದಳು. ಶಿವಣ್ಣಿ ಕಸಮುಸುರೆ ಮಾಡಿ, ಊಟದ ಮನೆಯಲ್ಲಿ ಹಾಸಿಗೆ ಹಾಸಿಕೊಂಡು ಆಗಲೆ ದೀಪ ಆರಿಸಿಬಿಟ್ಟಿದ್ದ. ಆ ದೊಡ್ಡ ಮನೆಗೆಲ್ಲ ಎದ್ದಿದ್ದವರು ಈ ದಂಪತಿಗಳು. ಗಂಡ ಹೆಂಡತಿ ಹಾಲು ಕುಡಿದು ಎಲೆಅಡಕೆ ಹಾಕಿಕೊಂಡು ಸ್ವಲ್ಪ ಹೊತ್ತಾಗಿತ್ತು. ಅಂದೇಕೋ ಮಹೇಶ್ವರ ಅಂಗಡಿಯಿಂದ ಮನೆಗೆ ಬಂದುದು ಬಹಳ ತಡ. ಅವನು ಅಷ್ಟು ಹೊತ್ತಾಗಿ ಮನೆಗೆ ಬರುತ್ತಿದ್ದುದು ಅಪರೂಪ.

ಪಡಸಾಲೆಯ ಗಡಿಯಾರ ಹನ್ನೆರಡು ಬಡಿಯಿತು.

" ಅದೇನು ಇವತ್ತು ಇಷ್ಟು ಹೊತ್ತು ? " ಎನ್ನುತ್ತ ಗಂಗಮ್ಮ ಮಂಚದ ಮೇಲೆ ಮಲಗಿದ್ದ ಗೌರನನ್ನು ಎತ್ತಿ ಕೆಳಗೆ ಮಲಗಿಸಲು ಹೊರಟಳು.

ಕೆಳಗೆ ವಿಶಾಲವಾದ ಹಾಸಿಗೆಯ ಮೇಲೆ ಆಗತಾನೆ ಅರಾಮಾಗಿ ಮಲಗಿದ್ದ ಮಹೇಶ್ವರ " ಬೇಡ, ಅಲ್ಲೇ ಮಲಗಿರಲಿ ಬಾ " ಎಂದ.

" ಬೇಡಾಂದ್ರೆ. ಇಬ್ಬರ್‍ನೂ ಇಲ್ಲಿ ಮಲಗಿಸ್ತೇನೆ. ನಿಮ್ಮ ಹಾಸಿಗೇ ಮೇಲೆ ನೀವು ಆರಾಮಾಗಿ ಮಲಕ್ಕೊಳ್ಳಿ" ಎಂದು ಗೌರನನ್ನು ಎತ್ತಿಕೊಳ್ಳಲು ಗಂಗಮ್ಮ ಮಂಚದ ಹತ್ತಿರ ಹೋದಳು. ಮಹೇಶ್ವರ ಕೈ ಚಾಚಿ, ಹೆಂಡತಿಯ ಸೀರೆಯಂಚನ್ನು ಹಿಡಿದು " ಬೇಡ, ಬಾ ಗಂಗೂ " ಎಂದ.

" ಅಯ್ಯೊ, ಬೇಡೀಂದ್ರೆ. ನಿಮಗ್ಗೊತ್ತಿಲ್ಲ." ಎಂದು, ಗೌರನನ್ನು ಎತ್ತಿಕೊಳ್ಳಲು ಹೋದವಳು, ಗಂಡ ಎಳೆದ ಸೀರೆಯ ಅಂಚನ್ನು ಹಿಡಿದೆಳೆದುಕೊಳ್ಳಲು ಬಾಗಿ ಅಂಚಿಗೆ ಕೈ ಹಾಕಿದಳು. ಮಹೇಶ್ವರ ಆ ಮುಂಗೈಯನ್ನು ಬಲವಾಗಿ ಹಿಡಿದುಕೊಂಡ.

ಒಂದು ಕ್ಷಣದೊಳಗೆ ಗಂಗಮ್ಮ ಮಹೇಶ್ವರನ ತೋಳತೆಕ್ಕೆಯಲ್ಲಿದ್ದಳು. ಇಬ್ಬರ ತುಟಿ ಒಂದಾಗಿತ್ತು.

ಇನ್ನೊಂದು ಕ್ಷಣದೊಳಗೆ, ಗಂಗಮ್ಮ ಕೆಣಕಿದ ಹುಲಿಯಂತೆ ಕೈಕೊಡವಿ ಎದ್ದು ನಿಂತಳು.

ಕಲಕಿದ ಮನಸ್ಸಿನ ಮಹೇಶ್ವರ "ಯಾಕೆ ಗಂಗೂ ?" ಎಂದ.

"ಯಾಕೂ ಇಲ್ಲ. ಹೋಗೀಂದ್ರೆ ನೀವು. ನಾ ಪಡಸಾಲೇಲಿ ಮಲ ಕ್ಕೋತೀನಿ....ನಿಮ್ಮ...." ಏನೋ ಹೇಳುವುದರಲ್ಲಿದ್ದವಳು ಮೌನವಾಗಿ, ಕೆಳಗೆ ಹಾಸಿಗೆಯ ಮೇಲಿದ್ದ ಕಂಬಳಿಯೊಂದನ್ನು ತೆಗೆದುಕೊಂಡು ಪಡಸಾಲೆಗೆ ಓಡಿ ಹೋದಳು.

ಆಮೇಲೆ ಮನೆ ಮೌನವಾಯಿತು.

ಕೋಣೆಯ ದೀಪ ಉರಿಯುತ್ತಲೇ ಇತ್ತು.

ಎಂಟು ಹತ್ತು ದಿನಗಳಿಂದ ಮಹೇಶ್ವರ ಇದೇ ವಿಷಯವಾಗಿ ಚಿಂತಿಸು ತ್ತಿದ್ದ; ಅವನ ಸಮಸ್ಯೆ ಬಗೆಹರಿದಿರಲಿಲ್ಲ.

ಸ್ಟೇಷನರಿ ಅಂಗಡಿಯ ಮಾಲೀಕನಾಗಿ, ಅನೇಕ ಬಣ್ಣದ ಬೀಸಣಿಕೆ ಗಳಿಗೆ ಸೋಪು, ಸೆಂಟು, ಪೌಡರು, ಲಿಪ್‌ಸ್ಟಿಕ್, ಚೀಕ್‌ರೆಡ್ ಮುಂತಾದ ಸೌಂದರ್ಯೋಪಕರಣಗಳನ್ನು ಮಾರಿ ಅವರೊಡನೆ ವ್ಯಾಪಾರ ವ್ಯವಹಾರ ನಡ ಸುತ್ತಿದ್ದ, ಊರಿನ ಪೇಟೆಯ ಮಧ್ಯದಲ್ಲಿ ಕುಳಿತು ನೂರಾರು ಜೀವನ ಚಿತ್ರ ಗಳನ್ನು ಕಣ್ಣಾರೆ ನೋಡಿದ ಕಿವಿಯಾರ ಕೇಳಿದ, ಅವನಿಗೆ ಶಾಂತಿ ನೀಡದ ಮನೆ, ಹಲವಾರು ಯೋಚನೆಗಳಿಗೀಡುಮಾಡಿತ್ತು.

ಎಲ್ಲಕ್ಕಿಂತ ಮುಖ್ಯವಾಗಿ, ಒಂದು ಸೂಜಿಗಲ್ಲು ಅವನನ್ನು ಬಲವಾಗಿ ಹಿಡಿದೆಳೆಯುತ್ತಿತ್ತು.

ಎತಿರಾಜು ಅವರಿಗೆ ಬೆಂಗಳೂರಿಗೆ ವರ್ಗವಾದುದರಿಂದ ಮನೆ ಖಾಲಿ ಆಯಿತು. ಆಮೇಲೆ, ಆ ಮನೆಗೆ ಬಾಡಿಗೆದಾರರನ್ನು ಹೊಂದಿಸುವುದೇ ಕಷ್ಟ ವಾಯಿತು. ಬ್ಯಾಂಕ್ ಮ್ಯಾನೇಜರಿಗೆ ವರ್ಗವಾಗಿ ಮನೆ ಬಿಟ್ಟಿದ್ದರೂ ಆ ಸಮಯಕ್ಕೆ ಸರಿಯಾಗಿ, ವಯಸ್ಸಾದ ಅವರ ತಾಯಿ ಸತ್ತುಹೋದುದು ಆ ಮನೆಯ ಕೆಟ್ಟ ಗುಣಕ್ಕೆ ಗಟ್ಟಿ ನಿದರ್ಶನವಾಗಿ ಬಿಟ್ಟಿತ್ತು. ತಂದೆ ಮಾದಪ್ಪ ನವರು ಒಂದೇ ಮನಸ್ಸು ಮಾಡಿ, 'ಮೂವತ್ತು ರೂಪಾಯಿಗೆ ಲಕ್ಷಮ್ಮನಿಗೆ ಕೊಟ್ಟುಬಿಡುತ್ತೇನೆ' ಎಂದು ಬಿಟ್ಟರು. ತಂದೆಯವರಿಗೂ ಲಕ್ಷಮ್ಮನಿಗೂ ಇದ್ದ ಸಂಬಂಧವನ್ನು ಚೆನ್ನಾಗಿ ತಿಳಿದಿದ್ದ ಮಗ ಆ ಸಲಹೆಯನ್ನು ವಿರೋಧಿಸದೆ

ಸುಮ್ಮನಾದ. ಗಂಡನಿಗೆ ಬುದ್ಧಿ ಹೇಳಿ ಹೇಳಿ ಸಾಕಾದ ಪಾರ್ವತಮ್ಮ ಏನಾದರೂ ಮಾಡಿಕೊಳ್ಳಲಿ, ಸಂಸಾರಂದಿಗರಿಗೆ ಬಾಡಿಗೆಗೆ ಕೊಟ್ಟು, ಅವರ ಕೈಯಲ್ಲಿ ಶಪಿಸಿಕೊಳ್ಳುವುದಕ್ಕಿಂತ ಇಂಥ ಗಿರಾಕಿಗೆ ಕೊಡುವುದು ಮೇಲು, ಎಂದು ಸುಮ್ಮನಾದಳು. ಮಾದಪ್ಪನವರು ಇರುವ ವರೆಗೂ ಬಾಡಿಗೆಯ ರಸೀದಿ ಮೊದಲನೆಯ ತಾರೀಕೇ ಸಿದ್ಧವಾಗುತ್ತಿತ್ತು. ಆದರೆ, ಬಾಡಿಗೆಯ ಹಣ ಕಣ್ಣಿಗೆ ಕಾಣುತ್ತಿರಲಿಲ್ಲ. ಹೋಗಲಿ ಎಂಭತ್ತು ತೆರುವ ಕಡೆ ಮೂವತ್ತು ಕಡಮೆ ಆಯಿತಲ್ಲ, ಎಂದುಕೊಂಡು ಮಹೇಶ್ವರ ಸಮಾಧಾನ ತಂದುಕೊಳ್ಳುತ್ತಿದ್ದ.

ಮೊದಮೊದಲು, ಅವನಿಗೆ ತಂದೆಯ ನಡತೆ ಬಹಳ ಅಸಹ್ಯವಾಗಿ ಕಾಣುತ್ತಿತ್ತು. ಲಕ್ಷಮ್ಮನೊಡನೆ ತಂದೆ ನಡಸುತ್ತಿದ್ದ ದುಡ್ಡಿನ ವ್ಯವಹಾರಗಳ ವಿಷಯವನ್ನು ಅವನು ಅನೇಕ ಬಾರಿ ಗುಟ್ಟಾಗಿ ತಾಯಿಗೆ ತಿಳಿಸುತ್ತಿದ್ದ. ತಾಯಿ ಪಾರ್ವತಮ್ಮ ಬಿಸಿಯುಸಿರು ಬಿಟ್ಟು, "ಏನು ಮಾಡೋದಪ್ಪಾ, ದೇವರು ಯಾವಾಗ ಕಣ್ಣು ಬಿಡ್ತಾನೋ" ಎಂದು ಕೊರಗುತ್ತಿದ್ದರು.

ಆದರೆ, ಮೂರು ಹೆಣ್ಣುಮಕ್ಕಳ ತಂದೆಯಾದ ಮಹೇಶ್ವರನ ಮನಸ್ಸು ಬದಲಾಯಿಸಿ ಬಿಟ್ಟಿತು. ಇದಕ್ಕೆ ಶಾಂತಿಯಿಲ್ಲದ, ಸುಖವಿಲ್ಲದ ಮನೆಯ ಜೊತೆಗೆ, ಸೂಜಿಗಲ್ಲಿನಂತಿದ್ದ ರತ್ನಳೂ ಕಾರಣವಾದಳು.

ತಂಗಿಯ ಮದುವೆಯಲ್ಲಿ ನೋಡಿದ್ದ ಆ ಪುಟ್ಟ ರತ್ನಳಿಗೂ, ಕಾಮನ ತಾಪೆಯಲ್ಲಿ ಕುಣಿದ ರತ್ನಳಿಗೂ, ಹೊಸ ಮನೆ ಕಟ್ಟುತ್ತಿದ್ದಾಗ ಕಟ್ಟಡ ನೋಡಲು ಒಂದೆರಡು ಬಾರಿ ಬಂದಿದ್ದ ರತ್ನಳಿಗೂ, ಸೋಪು, ಸೆಂಟು, ಪೌಡರು ಕೊಳ್ಳಲು ಕಮಲಳೊಡನೆ ಬಂದಿದ್ದ ರತ್ನಳಿಗೂ, ಕಾಸ್ಟಿಕ್ ಸೋಡಾ, ಕಾಳಸಂತೆಯ ಸಿಲ್ಕು ಮಾರಾಟದ ಬಗ್ಗೆ ಮಾತಾಡಲು ಒಬ್ಬಳೇ ಬಂದ ರತ್ನಳಿಗೂ, ಹ್ಯಾಸಲಿನ್ ಸ್ನೋ ಕೊಳ್ಳಲು ಒಬ್ಬಳೇ ತಾನೊಬ್ಬನೇ ಇರುವಾಗ ಬಂದ ರತ್ನಳಿಗೂ ಮಹೇಶ್ವರ ಅಜಗಜಾಂತರ ವ್ಯತ್ಯಾಸ ಕಂಡಿದ್ದ. ಆದರೆ, ಶಾಶ್ವತವಾದ ಒಂದೇ ರೀತಿಯ ಆಕರ್ಷಣೆ ಅವಳ ಆ ಎರಡು ಕಣ್ಣುಗಳಲ್ಲಿತ್ತು. ಅವಳಿಗೆ ವಯಸ್ಸಾದಂತೆಲ್ಲ ಆ ಕಣ್ಣಿನ ರೂಪು, ಹೊಳಪು, ಒಲಪು ಬಲಗೊಳ್ಳುತ್ತಿದ್ದುವು. ಆ ಬಲಿತ ಕಣ್ಣು ಎಂಥ ಯುವಕನನ್ನೇ ಆಗಲಿ ಬಲೆಗೆ ಹಾಕಿಕೊಳ್ಳುವುದರಲ್ಲಿ ಬಲಿಷ್ಠವಾಗಿ ಬಿಟ್ಟಿತ್ತು.

" ಅವಳ ಕಣ್ಣಿಗಾಗಿಯೇ ನಾಗರಾಜ ಸಾವಿರಾರು ರೂಪಾಯಿ ಸುರಿಯುತ್ತಿರುವುದು, ನರಸಿಂಹಮೂರ್ತಿ ಮನೆಯ ಮುಂದೆ ಮೂರು ಹೊತ್ತೂ ಕಾರು ನಿಲ್ಲಿಸಿರುವುದು, ' ನಿಮ್ಮ ಹಳೆಯ ಮನೆ ಕೆಡವಿಸಿ ಮಾದಪ್ಪನವರ ಮನೆಗಿಂತ ಚೆನ್ನಾಗಿ ಕಡಮೆ ದುಡ್ಡಿನಲ್ಲಿ ಕಟ್ಟಿಸಿಕೊಡುತ್ತೇನೆ, ಎಂದು ನೆಪಹಾಕಿಕೊಂಡು ಕಂಟ್ರಾಕ್ಟರ್ ರಾಜಪ್ಪಶೆಟ್ಟಿ ಆಗಾಗ ಬಂದು ಹೋಗುತ್ತಿದ್ದುದು, ಸಿಲ್ಕ್ ಮಾರಾಟದಲ್ಲಿ ಸಿಕ್ಕಿಬಿದ್ದವಳನ್ನು ಸಬ್ ಇನ್‌ಸ್ಪೆಕ್ಟರ್ ನಾರಾಯಣಸ್ವಾಮಿ ಕೈಬಿಟ್ಟು ಮನೆಯೊಳಗೆ ಕೈ ಹಿಡಿದುಕೊಂಡುದು, ಜ್ಯೂಯಲರ್ ಅನಂತಯ್ಯ ನೂರು ರೂಪಾಯಿಯ ಹರಳಿನುಂಗುರವನ್ನು ಮಾಡಿಸಿ ಕೊಟ್ಟುದು, ಥಿಯೇಟರ್ ಕಟ್ಟಲು ಮುನಿಸಿಪಾಲಿಟಿಯವರು ಒಪ್ಪಿಗೆ ಕೊಡುವುದಿಲ್ಲವೆಂಬುದನ್ನು ತಿಳಿದಿದ್ದರೂ ಆ ನಿವೇಶನ ಬೇಕೆಂಬ ನೆಪದಲ್ಲಿ ಟಾಡಿ ಕಂಟ್ರಾಕ್ಟರ್ ಮುನಿಸ್ವಾಮಪ್ಪನವರ ಮಗ ವಿಷಕಂಠ ಅವಳ ಮನೆಯ ಮುಂದೆ ಆಗಾಗ ತನ್ನ ಹೊಸ ' ಪ್ಲಿಮತ್ ' ತಂದು ನಿಲ್ಲಿಸುತ್ತಿದ್ದುದು " ಎಂದು, ಪೇಪರ್ ಓದಲು ಮಾದಪ್ಪನವರ ಅಂಗಡಿಗೆ ಬರುತ್ತಿದ್ದ ನಂಜುಂಡಪ್ಪನವರು ಹೇಳುತ್ತಿದ್ದರು.

ಆ ಮಾತಿನ ನಿಜಾಂಶವನ್ನು ಮಹೇಶ್ವರ ಅನುಭವಿಸಿ ತಿಳಿದುಕೊಂಡಿದ್ದ.

ಅವಳ ಆ ಎರಡು ಕಣ್ಣು ಅವನನ್ನು ಆಕರ್ಷಿಸಿ ಸೆಳೆಯುತ್ತಿದ್ದುವು.

ತಂದೆ ಹಳ್ಳಿಗೆ ಹೋದ ಸಂದರ್ಭಗಳಲ್ಲಿ, ಹೊಸದಾಗಿ ಕಟ್ಟುತ್ತಿದ್ದ ಆ ಮನೆಯ ಹತ್ತಿರ ಮಹೇಶ್ವರ ಹೋಗುತ್ತಿದ್ದಾಗ, ಲಕ್ಷಮ್ಮನಿಗೆ ಆ ಮನೆಯನ್ನು ಬಾಡಿಗೆಗೆ ಕೊಟ್ಟಾಗ, ತಂದೆ ಹೋದ ಮೇಲೆ, ಬಸಪ್ಪ ಸಾಯುವುದಕ್ಕೆ ಮುಂಚೆ, ಪೋಲೀಸ್ ಕಾನ್‌ಸ್ಟೇಬಲ್ ಕರಿಯಪ್ಪ ಬಂದು ' ನಿಮ್ಮ ಜವಾನ ಪೂಜಾರಿ ಇದ್ದ ಹಾಗೆ. ದೇವರು ಕೊಟ್ಟರೂ ಪೂಜಾರಿ ವರ ಕೊಡ. ದಯವಿಟ್ಟು ಇನ್ನು ಮೇಲೆ ಅವನನ್ನು ಕಳಿಸಬೇಡಿ. ನೀವೇ ಬನ್ನಿ, ಮನೆ ನೋಡಿದ ಹಾಗೂ ಆಗುತ್ತೆ. ಬಾಡಿಗೆ ಕೊಟ್ಟು ಬಿಡ್ತೇವೆ' ಎಂದಾಗ, ಮತ್ತೊಮ್ಮೆ ಬಂದು, ' ಕಾಸ್ಟಿಕ್ ಸೋಡಾ ರೇಟೇನು ? ನಮ್ಮ ಲಕ್ಷಮ್ಮನ ಮಗಳು ರತ್ನಮ್ಮ ಇನ್ನೂರು ಪೌಂಡು ತರಿಸಿದಾಳೆ. ನಿಮಗೆ ಬೇಕಾದರೆ ಹೇಳಿ. ಹಾಗೇ, ಸಿಲ್ಕ್ ಬೇಕಾದರೆ ಒಳ್ಳೆ ಸಿಲ್ಕ್ ಬಂದಿದೆ....ನೋಡಿ ' ಎಂದು ಹೇಳಿದಾಗ, ಬಾಡಿಗೆ ವಸೂಲಿಗೆಂದು ಎರಡು ಮೂರು ದಿನ ಆ ಮನೆಯ ಪಡಸಾಲೆಯನ್ನು ಪ್ರವೇಶಿಸಿದಾಗ, ಅವಳ ಆ ಎರಡು ಕಣ್ಣುಗಳೂ ಅವನನ್ನು ನೋಡುತ್ತಿದ್ದುವು.

ಮೊದಲಿನಿಂದಲೂ ಆ ದಾರಿಯಲ್ಲಿ ನಡೆಯದ ಮಹೇಶ್ವರ ಬಹಳ ಹುಷಾರಾಗಿದ್ದುಕೊಂಡರೂ ಒಳಗಿದ್ದ ದೌರ್ಬಲ್ಯ ಬಾಯಿಂದ ಒಂದು ಮಾತಾಡಿಸಿ ಒಳಗೊಂದು ಯೋಚನೆ ಮಾಡಿಸುತ್ತಿತ್ತು. ಹೃದಯ ಆ ಕಡೆ ನಾಲಗೆ ಚಾಚುತ್ತಿದ್ದರೂ, ಬಾಯಿ ಅಸಹ್ಯಗೊಂಡು ನುಡಿಯುತ್ತಿತ್ತು.

ನಡೆದ ಸಂಗತಿಯನ್ನೆಲ್ಲ ನಂಜುಂಡಪ್ಪನವರಿಗೆ ಹೇಳುತ್ತಿದ್ದ. ನಂಜುಂಡಪ್ಪನವರು "ಸೋಡ ಗೀಡ ತರಿಸಿಬಿಟ್ಟೇಯಪ್ಪೋ! ಈ ಬಿಸಿನೆಸ್ಸಿನ ನೆಪದಲ್ಲೇ ಎಂಥೆಂಥವರೋ ಆ ಬಲೆಗೆ ಬಿದ್ದುಬಿಟ್ಟದ್ದಾರೆ. ನೀನೂ ಬಿದ್ದೀಯೆ, ಹುಷಾರಾಗಿರಪ್ಪೋ ಆಮೇಲೆ! ಆ ನಾರಾಯಣಸ್ವಾಮೀನ ಯಾಕೆ ಕೊಪ್ಪಕ್ಕೆ ಎತ್ತಿ ಹಾಕಿದರು ಗೊತ್ತೆ? ಅವನು ಇವಳ ಜೊತೆ ಸೇರ್ಕೊಂಡು ಸಿಲ್ಕ್ ಬಿಸಿನೆಸ್ ಮಾಡ್ತಿದ್ದಾಂತ ಮಿನಿಸ್ಟರ ವರೆಗೂ ಕಂಪ್ಲೇಂಟ್ ಹೋಗಿತ್ತಂತೆ........ ಹುಷಾರಾಗಿರಪ್ಪೋ, ಆಮೇಲೆ!" ಎಂದು ಎಚ್ಚರಿಸಿದ್ದರು.

"ಛೆ ಛೆ, ನಾನ್ಯಾಕೆ ಸೋತೇನು!" ಎಂದು ಮಹೇಶ್ವರನ ಬಾಯಿ ಹೇಳುತ್ತಿತ್ತು. ಆದರೆ ಒಳಗೆ ಒಂದು ಮೂಲೆಯಲ್ಲಿ ಆ ಆಸೆ ಮೊಳೆಯುತ್ತಿತ್ತು.

ರತ್ನಳ ಆ ಎರಡು ಕಣ್ಣುಗಳನ್ನು ನೋಡಿದಾಗಲೆಲ್ಲ, ಅವುಗಳನ್ನು ನೆನಸಿಕೊಂಡಾಗಲೆಲ್ಲ ಆ ಆಸೆ ಕೊನರೊಡೆಯುತ್ತಿತ್ತು.

ಒಂದು ತಿಂಗಳ ಹಿಂದೆ ಹ್ಯಾಸಲಿನ್ ಸ್ನೋ ಬೇಕೆಂದು ಅಂಗಡಿಗೆ ಒಬ್ಬಳೇ ಬಂದಿದ್ದಾಗ, ಅಂಗಡಿಯಲ್ಲಿ ತಾನೊಬ್ಬನೇ ಇದ್ದ. ರೈಲ್ವೆ ಪಾರ್ಸಲೊಂದನ್ನು ಬಿಡಿಸಿಕೊಳ್ಳಲು ಆಳು ಪುಟ್ಟಮಾದ ಆಗತಾನೆ ಸ್ಟೇಷನ್ ಕಡೆಗೆ ಹೊರಟಿದ್ದ.

ಹರೆಯ ತುಂಬಿದ ಹತ್ತೊಂಭತ್ತು ವರುಷದ ರತ್ನ ಹಸುರು ರಿಬ್ಬನ್ ಹಾಕಿದ ಎರಡು ಜಡೆ ಹೆಣೆದುಕೊಂಡು, ಕೆಂಪು ಜಾರ್ಜೆಟ್ ಸೀರೆ ಉಟ್ಟು, ಹಳದಿಯ ಸಿಲ್ಕ್ ಕುಪ್ಪಸ ತೊಟ್ಟು, ಹೂ ಚಿತ್ರದ ಕ್ಯಾನ್ವಾಸ್ ಹೈಹೀಲ್ಡ್ ಷೂ ಮೆಟ್ಟಿಕೊಂಡು ಅಂಗಡಿಯ ಒಳಗೆ ಬಂದಾಗಲೇ ಮಹೇಶ್ವರನಿಗೆ ಮೈಯೆಲ್ಲ ಒಂದು ತೆರನಾಗಿತ್ತು. ತನಗೆ ಹ್ಯಾಸಲಿನ್ ಸ್ನೋ ಬೇಕೆಂದು ಬಂದಿದ್ದರೂ ಇಪ್ಪತ್ತೆಂಟು ಕಂಪನಿಗಳ ಸ್ನೋ ತೆಗೆಸಿ ನೋಡಿದಂತೆ ಮಾಡಿ, ಕೊನೆಗೆ ಹ್ಯಾಸಲಿನ್ ಸ್ನೋ, ಆಕಾಶ ಬಣ್ಣದ ರಿಬ್ಬನ್ ನಾಲ್ಕು ಗಜ, ಕೆಂಪು ಹರಳಿನ ಒಂದು ಬ್ರೋಚ್ ಕೊಂಡಳು. ಮಾಲೀಕ ಬರೆಯುತ್ತಿದ್ದ ಬಿಲ್ಲನ್ನೇ ನೋಡುತ್ತ,

ಗಲ್ಲದ ಮೇಜಿನ ಮೇಲೆ ಮೊಳಕೈ ಊರಿ ನಿಂತಿದ್ದ ವಾಯುಗಾತಿ ರತ್ನಳ ಮೋಹದ ಕಣ್ಣಿಗೆ ಮಹೇಶ್ವರನ ಹೃದಯ ಮಣಿದಿತ್ತು. ಎರಡು ಜೊತೆ ಚಿನ್ನದ ಬ್ರಿಡ್ಜ್ ಬಳೆ, ನಾಜೂಕಾದ ಆರು ಅಚ್ಚಕೆಂಪು ಪ್ಲಾಸ್ಟಿಕ್ ಬಳೆ, ನಾಲ್ಕು ಬೆರಳು ಗಳಲ್ಲಿಯೂ ಶೋಭಿಸುತ್ತಿದ್ದ ನಾಲ್ಕು ಉಂಗುರ, ಐದು ಉಗುರಿಗೂ ಹೊಸ ದಾಗಿ ಹಾಕಿದ ಕೆಂಪು, ಧರಿಸಿ ಶೋಭಿಸುತ್ತಿದ್ದ ಆ ಕೆಂಡಸಂಪಗೆ ಬಣ್ಣದ ದುಂಡು ಕೈಗೆ, ಮೈಗೆ ಮಹೇಶ್ವರನ ಕಣ್ಣು ಮೆಚ್ಚಿತ್ತು. ಕಾಮನ ಕಣ್ಣಿನಂತಿದ್ದ ಕಣ್ಣಿನ ಕೆಳಗೆ ಉಬ್ಬಿದ ಎದೆಯಂತಿದ್ದ ತುಂಬುಗೆನ್ನೆ ಕೆಂಪುಗೂಡಿತ್ತು. ನೀಳ ವಾದ ಮಾಟವಾದ ಮೂಗು, ದುಂಡು ಮುಖ, ಎಲ್ಲಕ್ಕೂ ಮಿಗಿಲಾಗಿ ಅವಳ ಆ ಕಪ್ಪುಗಣ್ಣು, ರಸಮಿಡಿನ ಕೆಂಪು ತುಟಿ, ಮುಖದ ಚೆಲುವಿಗೆ ಮೇರೆ ಇಟ್ಟ ಗುಂಗುರು ಮುಂಗುರುಳು, ದುಂಡು ಕತ್ತು, ಮಿಂಚುವ ಹರಳಿನ ಲೋಲಕ್ ಎಲ್ಲ ಮಹೇಶ್ವರನನ್ನು ಸೆರೆಹಿಡಿದುವು.

ಮಲಗಿ ಆಲೋಚಿಸುತ್ತಿದ್ದ ಮಹೇಶ್ವರನ ಮನಸ್ಸಿನ ಮುಂದೆ ಮೈ ತುಂಬಿದ ಗುಂಡು ಎದೆಯ ರತ್ನ ಬಂದು ನಿಂತಳು. ಅಂದು ಅವಳು ಅಂಗಡಿ ಬಿಡುವಾಗ ನಕ್ಕ ನಗು ಅವಳ ತುಟಿಯ ಮೇಲೆ ಇನ್ನೂ ಹಾಗೆಯೇ ಇತ್ತು.

ತಟ್ಟನೆ, ಪಡಸಾಲೆಗೆ ಹೋಗಿ ಜಮುಖಾನೆಯ ಮೇಲೆ ಕಂಬಳಿ ಹೊದ್ದು ಕೊಂಡು ಮಲಗಿದ ಗಂಗಮ್ಮನ ನೆನಪಾಯಿತು. ಅವಳ ಚಿತ್ರ, ಇವಳ ಚಿತ್ರ ಎರಡನ್ನೂ ಆ ದೇಹದ ದಾಹ ಪರೀಕ್ಷಿಸಿತು. ಸಾವಿರ-ಜನರಿಗೆ ಸುಖ ನೀಡುವ ರತ್ನಳೇ ಗಂಡನಿಗೂ ದೂರವಾಗಿರುವ ಗಂಗಮ್ಮನಿಗಿಂತ ಮೇಲು ಎಂದು ಬಹಳ ಬೇಗ ಅದರ ತೀರ್ಪು ಹೊರಬಿತ್ತು.

ಮದುವೆಯ ಮೂಲಕ ಗಂಡ ಹೆಂಡತಿ ಎಂದು ಗೊತ್ತುಮಾಡಿದ ಮೇಲೆ ಪರಸ್ಪರ ದೇಹಸುಖ ಅನುಭವಿಸುವುದು ಅವರ ಮುಖ್ಯ ಕರ್ತವ್ಯ; ಸಮಾಜ ಅವರಿಗೆ ನೀಡಿರುವ ಹಕ್ಕು.

ಮನುಷ್ಯ ಎಂದಮೇಲೆ ಆ ದೇಹಕ್ಕೆ ಆಹಾರ, ನಿದ್ದೆ, ವಿದ್ಯೆ ಹೇಗೋ ಹಾಗೆ ಗಂಡಿಗೆ ಹೆಣ್ಣಿನ ಸುಖವೂ ಹೆಣ್ಣಿಗೆ ಗಂಡಿನ ಸುಖವೂ ಅಗತ್ಯ. ಅದು ಒಂದು ಕ್ರಮಬದ್ಧವಾಗಿ ಮಾನವನ ಬುದ್ಧಿಗೆ ಯೋಗ್ಯವಾಗಿ ನಡೆಯಲಿ ಎಂದು ವಿವಾಹ ಪದ್ಧತಿಯನ್ನು ಜಾರಿಗೆ ತಂದಿರಬಹುದು. ಅದರಲ್ಲಿ ಹೆಣ್ಣು ತನ್ನ ಕರ್ತವ್ಯ ಸಲ್ಲಿಸದಿದ್ದರೆ, ಅಥವಾ ಗಂಡು ತನ್ನ ಕರ್ತವ್ಯ ಸಲ್ಲಿಸದಿದ್ದರೆ ನಿರಾಸೆ

ಗೊಂಡ ಜೀವಿಗೆ ಯಾವ ಪಾಡು? ಕರ್ತವ್ಯ ನಡಸದ ಜೀವಿಗೆ ಯಾವ ದಂಡನೆ ?

ಮನುಷ್ಯ ತನ್ನ ಎಲ್ಲ ಪ್ರಯತ್ನಗಳಲ್ಲಿಯೂ ಜಯಶಾಲಿಯಾಗುವುದಿಲ್ಲ ; ಅನೇಕ ವೇಳೆ ಸೋಲುತ್ತಾನೆ. ಬಾಯಾರಿಕೆಯಾದಾಗ ತನಗೆ ಪರಿಚಿತವಾದೆಡೆ ನೀರು ಸಿಕ್ಕದಿದ್ದರೆ, ಪರಿಚಯವಿಲ್ಲದ ಹಲವೆಡೆ ನೀರಿಗಾಗಿ ತಡಕುತ್ತಾನೆ, ಬೇಡುತ್ತಾನೆ. ಇದು ಮಾನವ ಸ್ವಭಾವ.

ಗಂಗಮ್ಮ ಹೆಣ್ಣಿನ ತಾಯಿಯಾಗಿ ಅನ್ಯರ ಬಾಯಿಮಾತು ಕೇಳಲಾರದೆ ಗಂಡನಿಂದ ದೂರವಾಗಲು ಬಯಸಿದಳು. ಹೆಣ್ಣಿನ ಸುಖಕ್ಕಾಗಿ ಹಾತೊರೆದ ಮಹೇಶ್ವರ—ಗಂಡು ಮಗನ ಆಸೆ ಹುಟ್ಟಿಸಿದರೂ—ದೂರ ಹೋದ ಹೆಂಡತಿಯಿಂದ ನಿರಾಸೆಗೊಂಡ.

ಅವನಿಗೂ ಗಂಡು ಮಗನ ತಂದೆಯಾಗಬೇಕೆಂಬ ಆಸೆ ಅನೇಕ ಬಾರಿ ಕಾಡಿತ್ತು. ಆದರೆ ಆ ಬಯಕೆ ಈಡೇರುವಂತಿರಲಿಲ್ಲ.

ಅಂದು ರಾತ್ರಿಯಾದಂಥ ಅನುಭವ ಅದುವರೆಗೆ ಎಂಟು ಹತ್ತು ಬಾರಿ ಆಗಿ ಮಹೇಶ್ವರನನ್ನು ಈ ತೆರನಾದ ಆಲೋಚನೆಗೆ ಈಡುಮಾಡಿತ್ತು.

ಗಂಡಿಗೆ ಹೆಣ್ಣನ್ನು ಕೊಟ್ಟು ಏಕೆ ಮದುವೆ ಮಾಡಬೇಕು ?

ಅದರಲ್ಲಿಯೂ ಹರೆಯ ತುಂಬಿದ ಮೇಲೆ ಏಕೆ ಹೆಣ್ಣು ಗಂಡನ ಮನೆಗೆ ಬರಬೇಕು ?

ಇಬ್ಬರೂ ಒಟ್ಟಿಗೆ ಏಕೆ ಮಲಗಿಕೊಳ್ಳಬೇಕು ?

ಈ ಒಂದು ಏರ್ಪಾಟಿದ್ದರೂ ಸೂಳೆಗಾರಿಕೆ ಏಕೆ ಹುಟ್ಟಿತು ?

ಮನುಷ್ಯನಿಗೆ ಅಗತ್ಯವಾದುದನ್ನು ಮಾರಲು ಹೊರಟರೆ ಅದೊಂದು ಕಸಬಾಗುತ್ತದೆ.

ಹಾಗೆಯೇ, ಮನೆಯಲ್ಲಿ ನಿರಾಸೆಗೊಂಡವರಿಗೆ, ಅತೃಪ್ತಿಗೊಂಡವರಿಗೆ ಸೂಳೆ ಸುಖವನ್ನು ಮಾರುತ್ತಾಳೆ.

—ಇದರಲ್ಲೇನು ತಪ್ಪು ?

ತನ್ನ ವಸ್ತು ದುಡ್ಡು ತೆತ್ತು, ಸುಖಕ್ಕಾಗಿ ಬೀದಿಯ ಹೆಣ್ಣಿನ ಹತ್ತಿರ ಹೋದಾಗ ತನಗೇಕೆ ಹೊಟ್ಟೆಕಿಚ್ಚು ಬರಬೇಕು ?

ಹೋಟಲಿಗೆ ಹೋಗಿ ತಿಂಡಿ ತಿನ್ನುವಂತೆ ಅಲ್ಲಿಗೆ ಹೋದರೆ, ಹೋಟಲ

ಕಡೆ ತೋರದಂಥ ಕೀಳುದೃಷ್ಟಿಯನ್ನು ಅದರ ಮೇಲೆ ಏಕೆ ಬೀರಬೇಕು ?

ತನ್ನ ತಂದೆ ಮಾದಪ್ಪನವರು, ಮನೆಯಲ್ಲಿ ರತಿಯಂಥ ಹೆಂಡತಿ ಇದ್ದರೂ ನಾಯಕಸಾನಿ ಕಿಟ್ಟಮ್ಮ, ಅಗ್ರಹಾರದ ಪುಟ್ಟಿ, ಮಾರಮ್ಮನ ಚೌಕದ ಲಕ್ಷಮ್ಮ ಇವರಲ್ಲಿಗೆ ಏಕೆ ಹೋಗುತ್ತಿದ್ದರು ?

—ಅದಕ್ಕೂ ಒಂದು ಕಾರಣ ಇರಬೇಕಲ್ಲವೆ ?

ತನಗೂ, ತನ್ನ ತಾಯಿಗಿಂತ ರೂಪವತಿಯಾದ ಹೆಂಡತಿ ಇದ್ದರೂ ತನ್ನ ಮನಸ್ಸಿನಲ್ಲಿ ಈ ಯೋಚನೆ ಏಕೆ ಮೂಡಿತು ?

—ಇದಕ್ಕೂ ಒಂದು ಬಲವಾದ ಕಾರಣ ಇಲ್ಲವೆ ?

ಮನೆಯಲ್ಲಿ ಸಿಕ್ಕದುದನ್ನು ಬೀದಿಯಲ್ಲಿ ಏಕೆ ಪಡೆಯಬಾರದು ?

ನಿರಾಸೆಗೊಂಡ ದುರ್ಬಲ ಮನಸ್ಸಿಗೆ ಈ ತರ್ಕ ಸರಿಯಾಗಿ ಕಂಡಿತು.

' ಲೈಂಗಿಕ ಸುಖ ದೇಹದ ಎಲ್ಲ ಸುಖಕ್ಕಿಂತಲೂ ಕೀಳಾದುದು. ಅನಗತ್ಯವಾದುದು. ಅದರ ಬಗ್ಗೆ ಹೆಚ್ಚು ಯೋಚನೆ ಮಾಡಬಾರದು. ಅದು ಅಶ್ಲೀಲ, ಅಸಹ್ಯ. ಅದನ್ನು ಒಂದು ವ್ಯಾಪಾರವಾಗಿ ಮಾಡಿಕೊಳ್ಳುವುದಂತೂ ದುರ್ಬಲ ಜೀವಿಯನ್ನು ಇನ್ನೂ ದುರ್ಬಲಗೊಳಿಸುವ ಏರ್ಪಾಟು. ಅದರಿಂದ ಸಮಾಜಕ್ಕೆ ಹಾನಿ. ವ್ಯಕ್ತಿ ಕಟ್ಟು ಹರಿದ ಪಂಜಾಗಬಾರದು ; ಅದರಿಂದ ತನಗೂ ಕಷ್ಟ, ಸಮಾಜಕ್ಕೂ ನಷ್ಟ ' ಎಂಬ ತತ್ತ್ವವನ್ನು ಕೇಳಿ, ಅದರಂತೆ ಹತ್ತು ಹದಿನೈದು ವರುಷ ಜೀವನ ನಡಸಿದ ಮಹೇಶ್ವರ ಆ ತತ್ತ್ವವನ್ನು ಕುರಿತು ತರ್ಕ ನಡಸಿದ್ದ. ಮೂರು ನಾಲ್ಕು ತಿಂಗಳಿಂದಲೂ ಈ ತರ್ಕ ನಡೆಯುತ್ತಿತ್ತು.

ತಂದೆಯ ರಕ್ತಕಣ ಇದ್ದುದರಿಂದಲೋ, ರಸಿಕ ಬುದ್ಧಿ ಬೆಳೆದುದರಿಂದಲೋ ಅವನ ಮನಸ್ಸು ಅನೇಕ ಬಣ್ಣದ ಬೀಸಣಿಕೆಗಳ ಕಡೆ ಆಗಾಗ ಒಲೆಯುತ್ತಿತ್ತು.

ಆದರೆ, ಮನೆಯೊಳಗೆ ರತಿ ಗಂಗಮ್ಮ ಇವರೆಲ್ಲರ ಮುಂದೆ ಬಂದು ನಿಲ್ಲುತ್ತಿದ್ದಳು. ಅವಳ ನಗುಮುಖ, ಆ ಮಾತು, ಬಿಗಿದಪ್ಪಿದ ನೀಳವಾದ ತೋಳು ಇವನ ಲಗಾಮು ಹಿಡಿದೆಳೆಯುತ್ತಿದ್ದುವು.

ಆದರೆ, ಆ ಸಾರಥಿ ರಥ ಬಿಟ್ಟು ದೂರ ಸರಿದಳು.

ಈ ರಥ ತನ್ನ ಮನಸ್ಸಿಗೆ ಬಂದಂತೆ ಓಡಿತು.

ತಾನೂ ತನ್ನ ತಂದೆಯಂತೆ ಏಕೆ ದುಡ್ಡು ಕೊಟ್ಟು ಸುಖ ಕೊಳ್ಳಬಾರದು;

ಸುಂದರಳಾದ ರತ್ನ ಸ್ವಾಗತಿಸುತ್ತಿದ್ದಾಳೆ. ಇದರಿಂದ ಹೆಂಡತಿಗೂ ತೊಂದರೆ ತಪ್ಪುತ್ತದೆ. ತನ್ನ ವಂಶಕ್ಕೆ ಅಪರಿಚಿತವಾದ ನಡತೆಯೇನಲ್ಲ ಅದು; ಹಾಗೇಕೆ ಮಾಡಬಾರದು ?

ಕರಿಯಪ್ಪ ಬಂದು ಆಗಾಗ ಕೀಲು ತಿರುಗಿಸುತ್ತಿದ್ದುದು, ರತ್ನ ಆಗಾಗ ನೆಪಮಾಡಿಕೊಂಡು ಅಂಗಡಿಗೆ ಬಂದು ಹೋಗುತ್ತಿದ್ದುದು, ಮನೆಗೆ ಹೋದಾಗ ಮುಖ ನೋಡಿ ನಗುತ್ತಿದ್ದುದು—ಎಲ್ಲ ತನ್ನ ಸುಖಕ್ಕಾಗಿಯೆ. ತಾನೇಕೆ ಆ ವಸ್ತುವನ್ನು ಸ್ವೀಕರಿಸಬಾರದು ?

'ಮನೆಯಲ್ಲಿ ತಿಂಡಿ ಮಾಡದಿದ್ದರೆ ಹೋಟಲಿಗೆ ಹೋಗುವುದಿಲ್ಲವೆ, ಹಾಗೆ'—ಎಂದು, ರತ್ನಳ ಬಯಕೆ ಪ್ರಶ್ನೆಗೆ ಉತ್ತರ ಹೇಳಿ ಬೆಂಬಲಕೊಟ್ಟಿತು.

ಮಂಚದ ಮೇಲೆ ಮಲಗಿದ್ದ ಲಲಿತ ಉರುಳಿ ದೊಪ್ಪನೆ ಹಾಸಿಗೆಯ ಮೇಲೆ ಬಿದ್ದಳು.

ಮಹೇಶ್ವರನಿಗೆ ಎಚ್ಚರವಾಯಿತು.

ತಂದೆಯ ಕರುಳು 'ಅಯ್ಯೋ' ಎಂದಿತು. ಯಾವ ಯೋಚನೆಯೂ ಇಲ್ಲವ ಎಳೆಯ ಹುಡುಗಿ ಲಲಿತಳಿಗೆ ಎಚ್ಚರವಾಗಲೇ ಇಲ್ಲ. ತಂದೆಯ ಕೈ ಮಗಳ ಮೈ ತಟ್ಟಿ, ಮಂಗಳೆಯ ಮೈ ಮೇಲಿದ್ದ ಹೊದಿಕೆಯನ್ನು ಎಳೆದು ಇಬ್ಬರಿಗೂ ಸರಿಮಾಡಿತು.

ಕೋಣೆಯ ದೊಡ್ಡ ದೀಪ ಉರಿಯುತ್ತಲೇ ಇತ್ತು.

ದೀಪ ಆರಿಸಿ, ಬೆಡ್‌ಲ್ಯಾಂಪ್ ಹೊತ್ತಿಸಿ ಹಾಸಿಗೆಯ ಮೇಲೆ ಉರುಳಿ ಕೊಂಡ.

ಮನಸ್ಸು ಮತ್ತೆ ಅದೇ ಯೋಚನೆಯ ಸುಳಿಗೆ ಸಿಕ್ಕಿತು.

## ೧೨

ಮಲಗುವ ಕೋಣೆಯಲ್ಲಿ 'ವಾಷ್ ಸ್ಟ್ಯಾಂಡ್' ಕಟ್ಟಿಸಿಕೊಳ್ಳುತ್ತಾರಂತೆ. ಸ್ವಲ್ಪ ದಯವಿಟ್ಟು ತಾವು ಬಂದು ಆ ಜಾಗ ನೋಡಿ ತಮ್ಮ ಒಪ್ಪಿಗೆ ಕೊಡಬೇಕಂತೆ, ಎಂದು ನಂಜುಂಡಿ ಬಂದು ಕರೆದಾಗ ಮಹೇಶ್ವರ ಏಕೊ "ಭಾನುವಾರ ಮಧ್ಯಾಹ್ನ ಬರುತ್ತೇನೆ" ಎಂದು ಹೇಳಿ ಕಳಿಸಿದ.

ಹೃದಯ ದೌರ್ಬಲ್ಯದಿಂದ ಆ ಮಾತು ಹೊರಬಿದ್ದಿತ್ತು.

ಅದಕ್ಕಾಗಿಯೇ ಬಲೆ ಬೀಸಿ ಹಲವಾರು ಸಲ ಸೋತ ರತ್ನಳ ಆ ಪ್ರಯತ್ನಕ್ಕೆ ಈ ಉತ್ತರ ಬಂದು ಕಾಕತಾಳ ನ್ಯಾಯವಾದಂತಾಯಿತು.

ಭಾನುವಾರ ಮಧ್ಯಾಹ್ನ, ತಾನು ಮಲಗುವ ಕೋಣೆಯ ಗೋಡೆಯ ಒಂದು ಮೂಲೆಯಲ್ಲಿ ಸೀಸದ ಕಡ್ಡಿಯಿಂದ ಗೆರೆ ಎಳೆದು ಗುರುತು ಮಾಡಿದ್ದಳು. ಆದರೆ, ಅದಕ್ಕಿಂತ ಹೆಚ್ಚಾಗಿ ಆಸಕ್ತಿವಹಿಸಿ ಮಹೇಶ್ವರನನ್ನು ಸ್ವಾಗತಿಸಲು ಸಿದ್ಧತೆ ಮಾಡಿದ್ದಳು.

ಮಂಚದ ಹಾಸಿಗೆಯ ಮೇಲಿದ್ದ, ಹಿಂದಿನ ದಿನ ಮುಡಿದ ಮಲ್ಲಿಗೆ ಹೂವನ್ನು ತೆಗೆದು ಕಸದ ಬುಟ್ಟಿಗೆ ಹಾಕಿದ್ದಳು. ಹಾಗೆಯೇ ಹಲವಾರು ಮಂದಿಯನ್ನು ಮುಡಿದು ಆನಂದಿಸಿದ ಹೃದಯ ಎಲ್ಲ ಬಿಸುಟು, ಈ ಹೊಸ ಹೂವಿಗಾಗಿ ಮನಸಾರ ಹಾತೊರೆಯುತ್ತಿತ್ತು.

ಮಹೇಶ್ವರ ನಿಜವಾಗಿಯೂ ಎಲ್ಲರಿಗಿಂತ ಚೆಲುವ. ತನ್ನ ಮನೆಗೆ ಬರುತ್ತಿದ್ದವರ ಪೈಕಿ ಎಲ್ಲರಿಗಿಂತಲೂ ವಾಸಿ ಅನ್ನುವ ಹಾಗಿದ್ದ ನರಸಿಂಹಮೂರ್ತಿಗಿಂತ ಮಹೇಶ್ವರ ಕೆಂಪು. ಅವನ ದುಂಡು ಮುಖ, ಗೆರೆಮೀಸೆ, ಆ ಗುಂಗುರು ಕೂದಲು, ನೀಳವಾದರೂ ಕಟ್ಟುಮಸ್ತಾದ ದೇಹಕ್ಕೆ ಬಹಳ ಚೆನ್ನಾಗಿ ಒಪ್ಪುವ ಸಿಲ್ಕ್ ಜುಬ್ಬ, ಬಿಳಿಯ ಪಾಯಿಜಾಮ, ಆ ಕೆಂಪು ಮಿಶ್ರ ಹಳದಿ ಬಣ್ಣದ ಕಾಲಿಗೆ ಬಿಗಿದಪ್ಪಿರುವ ಕಪ್ಪು ಚಪ್ಪಲಿ ಅವಳ ಹೃದಯವನ್ನು ಸೆಳೆದಿದ್ದುವು.

ಲಕ್ಷಮ್ಮ ಸೂಚಿಸಿದಂತೆ, ಆಸ್ತಿಯ ಬೇಟೆಗೆ ಹೊರಟಿದ್ದರೂ ಹೃದಯದ ಬೇಟೆಯೂ ನಡೆದಿತ್ತು. ಇದು ಆಕೆಗೆ ತಿಳಿದಿತ್ತೊ, ಇಲ್ಲವೊ!

ಮಹೇಶ್ವರನನ್ನು ನೋಡಿದಾಗಲೆಲ್ಲ ಅವಳ ಮನಸ್ಸಿಗೆ ಒಂದು ರೀತಿಯ ಆನಂದವಾಗುತ್ತಿತ್ತು; ಅದರ ಜೊತೆಯಲ್ಲಿಯೇ ವಿಚಿತ್ರ ದಾಹ ಉಂಟಾಗುತ್ತಿತ್ತು.

ನರಸಿಂಹಮೂರ್ತಿ ಧಾರವಾಡದ ಹೆಣ್ಣನ್ನು ಮದುವೆ ಮಾಡಿಕೊಂಡು, ಹುಬ್ಬಳ್ಳಿಗೆ ಆರ್ಗನೈಸರ್ ಆಗಿ ವರ್ಗವಾದಮೇಲಂತೂ ರತ್ನಳ ಈ ದಾಹ ಹೆಚ್ಚುತ್ತಿತ್ತು. ಅವನು ಊರು ಬಿಟ್ಟ ಮೇಲೆ ಅವಳಿಗೆ ಗಂಡಿನ ಸುಖ ದೊರೆತಿರಲಿಲ್ಲ.

ನಾಗರಾಜ, ರಾಜಪ್ಪಶೆಟ್ಟಿ, ಅನಂತಯ್ಯ, ನಾರಾಯಣಸ್ವಾಮಿ, ವಿಷಕಂಠು ಇವರ ಪಶುಪ್ರೇಮಕ್ಕೆ ಆಕೆ ಹೆಚ್ಚು ಬಲಿಯಾಗದೆ, ಚಮತ್ಕಾರವಾಗಿ

ಅವರನ್ನು ರಮಿಸಿ ಕಳಿಸುತ್ತಿದ್ದಳು. 'ಧೀರವಾಣಿ' ಪತ್ರಿಕೆಯ ಕರೆಸ್ಪಾಂಡೆಂಟ್ ಕೇಶವಮೂರ್ತಿ ರಸಿಕ ಪ್ರೇಮದ ಸುಖವನ್ನು ಒಂದೆರಡು ಬಾರಿ ಮಾತ್ರ ನೀಡಿದ್ದ. ಆದರೆ, ಅದು ಬರಿಯ ಜೇಬಿನ ಸುಖವಾಗಿತ್ತು.

ಅವನು ಅವಳಿಗಾಗಿ ಹಾತೊರೆದು ಬಂದಾಗ, "ರತ್ನದ ಚೆಲುವು ಕಾಣಬೇಕಾದರೆ ಚಿನ್ನ ಇರಬೇಕು. ಬರಿಯ ಕೈಯಲ್ಲಿ ಬಂದರೆ ರತ್ನ ಒಂದು ಕಲ್ಲು" ಎಂದು ಚಮತ್ಕಾರವಾಗಿ ಹೇಳುತ್ತಿದ್ದಳು.

ನಿಜ, ಚಿನ್ನ ತರುವವರಿಗೆಲ್ಲ ರತ್ನ ರತ್ನವಾಗಿದ್ದಳು. ಚಿನ್ನ ತರದೆ, ಕೇಶವಮೂರ್ತಿಯಂತೆ ಬರಿಗೈಯಲ್ಲಿ ಬರುವವರಿಗೆ, ಎಲ್ಲ ಚಿನ್ನವನ್ನೂ ತೆತ್ತು ಬರಿಗೈ ಮಾಡಿಕೊಂಡು ಬರುವವರಿಗೆ ರತ್ನ ಕರಗದ ಕಲ್ಲಾಗಿಯೇ ಕಾಣುತ್ತಿದ್ದಳು. ರತ್ನ ರತ್ನವಾದರೂ ವಜ್ರದಷ್ಟು ಕಠಿಣವಾಗುತ್ತಿದ್ದಳು.

ನಾಗರಾಜ ಅವಳೊಡನೆ ನಿಭಾಯಿಸುವುದೇ ಕಷ್ಟವಾಗಿತ್ತು. ಕೇವಲ ಎರಡು ವರುಷಗಳಲ್ಲಿ ಹತ್ತು, ಇಪ್ಪತ್ತು, ನೂರು, ಐನೂರು, ಸಾವಿರ ಎಂದು ಕೊಳ್ಳುತ್ತ ಸುಮಾರು ಆರು ಸಾವಿರ ರೂಪಾಯಿ ತೆತ್ತಿದ್ದ. ಲೆಕ್ಕಕ್ಕೆ 'ನಾಲ್ಕು ಸಾವಿರ ರೂಪಾಯಿ ಬಿಸಿನೆಸ್ಸಿಗೆ, ಮುಂದೆ ಅದನ್ನು ಲಾಭದೊಡನೆ ವಾಪಸು ಕೊಡುತ್ತೇನೆ' ಎಂದು ಹೇಳುತ್ತಿದ್ದಳು. ಅಷ್ಟು ಹಣ ತೆತ್ತು, ಆಗಾಗ ಬಂದು ಬೇಡುತ್ತಿದ್ದರೂ ಅವನಷ್ಟು ನಿರ್ಭಾಗ್ಯ ಪುರುಷ ಇನ್ನೊಬ್ಬನಿರಲಿಲ್ಲ. ಕಾಮದ ಪಶುವಿನಂತೆ ಬಂದ ಈ ದೇಹದಿಂದ ದುಡ್ಡು ಹೀರಿ ತನ್ನ ಆಸೆ ತೀರಿಸಿಕೊಂಡು ಮರಳುಮಾಡಿ ಮನೆಗೆ ಅಟ್ಟುತ್ತಿದ್ದಳು. ಯಾವುದೋ ಒಂದು ವಿಧದಲ್ಲಿ ತೃಪ್ತಿಗೊಂಡ ಆ ದೇಹ ಅಷ್ಟಕ್ಕೇ ಸಮಾಧಾನಗೊಂಡು ಹೊರಟುಹೋಗುತ್ತಿತ್ತು. ಇಷ್ಟೆಲ್ಲಕ್ಕೂ ಅವಳ ಆ ಕಣ್ಣು ಕಾರಣ. ಅದನ್ನು ದಿಟ್ಟಿಸಿ ನೋಡಿದರೇ ಸಾಕು ನಾಗರಾಜನಿಗೆ ವಿಚಿತ್ರ ಆನಂದವುಂಟಾಗುತ್ತಿತ್ತು. ಅವನು ಆ ಕಣ್ಣಿನ ಪ್ರೇಮದ ನೋಟಕ್ಕೆ ಬಲಿಯಾಗಿ, ಅವಳ ಆಟದ ಬೊಂಬೆಯಂತಾಗಿಬಿಡುತ್ತಿದ್ದ.

ಜೊತೆಗೆ, 'ಅವಳಿಗೆ ಬಿಸಿನೆಸ್ ಹುಚ್ಚು ಬಿಟ್ಟಿಲ್ಲ. ಇನ್ನೂ ಸ್ವಲ್ಪ ದಿನ ಹೋಗಬೇಕು, ನೋಡೋಣ ತಡಿ' ಎಂಬ ಕರಿಯಪ್ಪನ ಮಾತು ನಿರಾಸೆಗೊಂಡ ಮನಸ್ಸಿಗೆ 'ನಾಳೆ' ಎಂದು ಸಮಾಧಾನ ಹೇಳುತ್ತಿತ್ತು.

ಆದರೆ, ಅವನ ಈ ಆಟಕ್ಕೆ ಮುಕ್ತಾಯ ಹತ್ತಿರವಾಗುತ್ತಿತ್ತು. ತಂದೆಯ ರೋಗ ಮಿತಿಮೀರಿ, ಇಂದೊ ನಾಳೆಯೊ ಎನ್ನುವ ಸ್ಥಿತಿಯಲ್ಲಿತ್ತು. ಅವರು

ಸಂಜೆ ನಾರಾಯಣರಾಯರನ್ನು ಕೂಡಿಸಿಕೊಂಡು ದುಡ್ಡು ಕಾಸಿನ ಲೆಕ್ಕಾಚಾರ ಹಾಕಿದಾಗ, ನಾಗರಾಜನಿಗೆ ಕೊಟ್ಟ ಹತ್ತು ಸಾವಿರ ರೂಪಾಯಿಯ ರಸೀದಿಗಳನ್ನು ನಾರಾಯಣರಾಯರು ತೋರಿಸಿಬಿಟ್ಟಿದ್ದರು. ಶಿವನಂಜಪ್ಪನವರು "ತಿಳಿದೂ ತಿಳಿದೂ ನೀವೇಕೆ ನನಗೆ ಹೇಳದೆ ಹೀಗೆ ಮಾಡಿದಿರಿ?" ಎಂದು ತುಂಬ ಅಸಮಾಧಾನಗೊಂಡು ಮಾತಾಡಿದಾಗ, ನಾರಾಯಣರಾಯರು ತಮ್ಮ ಸ್ಥಾನ ಭದ್ರತೆಗಾಗಿ ಗುಟ್ಟು ರಟ್ಟು ಮಾಡಿ ಜೊತೆಯಲ್ಲಿ ಒಂದು ದೊಡ್ಡ ಸುಳ್ಳನ್ನೂ ಸೇರಿಸಿಬಿಟ್ಟಿದ್ದರು. ಪಾಪ, ನಾರಾಯಣರಾಯರು, ತನಗೆ ಬೇಕಾದಾಗ ದುಡ್ಡು ಕೊಡದೇ ಹೋದರೆ ನಾಗರಾಜ ಅವರ ಪ್ರಾಣಕ್ಕೇ ತಂದುಬಿಡುತ್ತಿದ್ದನಂತೆ! ಆ ಪ್ರಯತ್ನ ನಡೆದಾಗಲೇ ಅವರು ಹೆದರಿ, ಆ ಗುಟ್ಟು ರಟ್ಟಾಗಬಾರದೆಂಬ ಒಪ್ಪಂದಕ್ಕೂ ಒಪ್ಪಿಕೊಂಡು ಸಾಹುಕಾರನ ಮಗನ ಇಷ್ಟ ನೆರವೇರಿಸಿದ್ದರಂತೆ. ನಂಜಪ್ಪನವರೂ "ನೀವು ನನಗೆ ಹೇಳದಿದ್ದರೂ ಚಿಂತೆಯಿರುತ್ತಿರಲಿಲ್ಲ. ಈ ವಿಷಯವನ್ನು ಪೋಲೀಸಿಗಾದರೂ ತಿಳಿಸಿದ್ದರೆ ಅವನಿಗೆ ತಕ್ಕ ಪ್ರಾಯಶ್ಚಿತ್ತ ಆಗುತ್ತಿತ್ತು. ಇನ್ನು ನನಗೆ ಅವನ ಮೇಲೆ ಸ್ವಲ್ಪವೂ ಕರುಣೆ ಇಲ್ಲ. ಅವನು ನನ್ನ ಮಗನೇ ಅಲ್ಲ?....ಚಂಡಾಲ, ಚಂಡಾಲ" ಎಂದರು. ನಾರಾಯಣರಾಯರು "ಛೆ ಛೆ, ಬೇಜಾರುಮಾಡಿಕೊಳ್ಳಬೇಡಿ....ನಾನು ಪೋಲಿಸಿಗೆ ತಿಳಿಸೋಣಾಂತಿದ್ದೆ. ಆದರೆ, ಆಮೇಲೆ ಯೋಚನೆ ಮಾಡಿದೆ....ನನಗೆ ಅದರಿಂದ ಅನನುಕೂಲವೇ ಉಂಟಾಗುತ್ತಿತ್ತು. ಇಲ್ಲಿ ಇರೋ ಸಬ್ ಇನ್‌ಸ್ಪೆಕ್ಟರುಗಳು, ಕಾನ್‌ಸ್ಟೇಬಲ್‌ಗಳು ಎಲ್ಲರೂ ಅವನ ಸ್ನೇಹಿತರೇ. ಅಮೂ .ಅಲ್ಲದೆ ಈ ವಿಷಯವನ್ನು ನರಳುತ್ತಿರೋ ತಮ್ಮ ಕಿವಿಗೆ ಹಾಕಿ, ತಮಗೆ ನೋವು ಮಾಡೋದಕ್ಕಿಂತ ಇನ್ನೂ ಸುಲಭವಾಗಿ ಮುಂದೆ ಸರಿಪಡಿಸಿಕೊಳ್ಳಬಹುದಲ್ಲಾಂತ ಸುಮ್ಮನಿದ್ದೆ....ಹೇಗಿದ್ದರೂ ತಾವು ವಿಲ್ ಬರೆಯೋವಾಗ ಅವನ ಆಸ್ತಿ ಕಾಣಿಸ್ತೀರಿ....ಆಸ್ತಿ ಹಂಚಿಕೆ ಆಗೋವಾಗ ಈ ರಸೀದಿಯ ಮಾತು ಬರುತ್ತಿತ್ತು. ಆಗ ನಾನು ಸರಿಯಾದ ಏರ್ಪಾಡು ಮಾಡುತ್ತಿದ್ದೆ....ಆದ್ದರಿಂದ ತಮಗೆ ತಿಳಿಸಿರಲಿಲ್ಲ........ಆದರೆ ಈಗ ತಾವು ತುಂಬ ಬಲವಂತ ಮಾಡಿದಿರಿ. ಹೇಳಬೇಕಾಯಿತು....ದಯವಿಟ್ಟು ಕ್ಷಮಿಸಿ, ತಮಗೆ ತುಂಬ ಬೇಜಾರಾಯಿತೇನೋ! ನಾಗರಾಜನಿಗೆ ನಾನು ಎಷ್ಟೆಷ್ಟೋ ಹೇಳಿದೆ....ಕೇಳಲಿಲ್ಲ. ಅವನು ಒಳ್ಳೇ ಹುಡುಗ, ಆದರೆ ಸಹವಾಸ ಚೆನ್ನಾಗಿಲ್ಲ....ಅದರಲ್ಲೂ ಆಕೆ ಅಂತೂ ಈ ವಯ

ಸ್ಸಿಗೇ ಊರಿಗೆಲ್ಲ ಪ್ರಸಿದ್ಧಳಾಗಿಬಿಟ್ಟಿದ್ದಾಳೆ........ಅವನ ದುರದೃಷ್ಟ. ಗಂಟು ಬಿದ್ಬಿಟ್ಟಿದಾಳೆ........ಏನ್ಮಾಡೋದು," ಎಂದು ಪೇಚಾಡಿದಂತೆ ನಟಿಸಿದರು.

ಮಂಚಕ್ಕೆ ಕಟ್ಟಿದ ಸೊಳ್ಳೆ ಪರದೆಯ ಚಾವಣಿಯನ್ನೇ ನೋಡುತ್ತಿದ್ದ ನಂಜಪ್ಪಶೆಟ್ಟರ ಕಣ್ಣು ತುಂಬ ಕಂಬನಿ ತುಂಬಿತ್ತು. ತುಟಿ ಅದುರುತ್ತಿತ್ತು. ಉಕ್ಕಿ ಬಂದ ದುಃಖ ಗುಟುಕಾಗಿ ಗಂಟಲಲ್ಲಿಯೇ ಇಳಿಯಿತು.

ಹೃದಯವನ್ನು ಕಲ್ಲುಮಾಡಿಕೊಂಡ ನಂಜಪ್ಪಶೆಟ್ಟರು ನಾರಾಯಣರಾಯರನ್ನು ಕುರಿತು "ಇನ್ನು ಆಯ್ತು ನಾರಾಯಣರಾಯ್ರೆ. ಅವನಿಗೆ ಮೂರು ಕಾಸೂ ಕೊಡಬೇಡಿ....ಈ ಬಾಗಿಲು ಸ್ವಲ್ಪ ಮುಂದಕ್ಕೆ ಹಾಕಿ....ಇನ್ನೂ ಸ್ವಲ್ಪ ಇತ್ತತ್ತ ಬನ್ನಿ....ನಾನು ಒಂದು ಕೆಲಸ ಮಾಡ್ಬೇಕೂಂತಿದೀನಿ....ಇದು ಹೀಗೇ ಬಿಟ್ಟರೆ ಎಲ್ಲ ಹಾಳಾಗಿಬಿಡುತ್ತೆ. ನೀವು ಬಹಳ ಗುಟ್ಟಾಗಿ ಒಂದು ಕೆಲಸ ಮಾಡಬೇಕು....ಯಾರಿಗೂ ತಿಳೀಕೂಡದು...."

"ಅಯ್ಯೊ ಅಯ್ಯೊ, ಆಗಲಿ ಸ್ವಾಮಿ, ಮಾಡೋಣ. ತಾವು ಅಪ್ಪಣೆ ಮಾಡಿ."

"ನಾಳೇನೇ ನಮ್ಮ ಹುಡುಗಿಗೆ....ಶಿವಮೊಗ್ಗಾಕ್ಕೆ—ಒಂದು ಕಾಗದ ಹಾಕಿ. ಅವಳು ಇಲ್ಲಿಗೆ ಬಂದುಬಿಡಲಿ....ಆಮೇಲೆ, ನಾ ಹೇಳ್ತೀನಿ, ಹಾಗೆ ಒಂದು ತೀರ್ಮಾನ ಮಾಡಿಬಿಡೋಣ...."

"....ಏನು ಮಾಡಬೇಕೂಂತ ತಮ್ಮ ಅಭಿಪ್ರಾಯ ಸ್ವಾಮಿ?"

"ಮಾಡೋದೇನು........ನಂದ್ಯಾವ ಲೆಕ್ಕ. ಈಗೋ ಇನ್ನೊಂದು ಗಳಿಗೆಗೋ! ಆಗಲೆ ಹೋದ್ಹಾಗಿದೀನಿ. ದೇವರು ಸದ್ಯ, ಇಂಥ ಅವ್ಯವಸ್ಥೇಲಿ ನಾಲಗೆ ಕಸಿದುಕೊಳ್ಳಲಿಲ್ಲ. ಏನು ಪುಣ್ಯ ಮಾಡಿದ್ದೆನೊ!....ನೀವು ಅವಳನ್ನ ಗುಟ್ಟಾಗಿ ಕರಸಿಬಿಡಿ. ಅವಳು ಇಲ್ಲಿ ಇಳಿದುಕೊಳ್ಳೋದು ಬ್ಯಾಡ. ನಿಮ್ಮ ನೇಲೇ ಇಳೀಲಿ....ಸಮಯ ನೋಡಿ ಅವಳನ್ನ ಇಲ್ಲಿಗೆ ಕರೆದುಕೊಂಡು ಬನ್ನಿ. ಅದಕ್ಕೆ ಮುಂಚೇನೇ ನಾನು ಬರಸೋದೆಲ್ಲ ಬರಸಿಬಿಡ್ತೀನಿ....ನಮ್ಮಪ್ಪನಾಸ್ತೀಂತನ್ನೋದು ಒಂದು ಬಿಡಿ ಕಾಸೂ ಇಲ್ಲ; ಎಲ್ಲ ನಂದು. ನನಗೆ ಇಷ್ಟ ಬಂದ್ಹಾಗ್ ಮಾಡ್ಕೊತೀನಿ. ಎಲ್ಲ ಅವಳಿಗೆ ಬರೆದ್ಬಿಡ್ತೀನಿ........ಒಂದು ವಿಲ್ ಬರೆದ್ಬಿಡ್ತೀನಿ....ಆ ಹಾಸ್ಟೆಲ್ ಕಟ್ಟಿಸೋದಂತೂ ಖಂಡಿತ; ನಾನು ಸೋಗೇಮನೆ ಶಿವಲಿಂಗಪ್ಪನೋರಿಗೆ ಕಾಗದ ಕೂಡ ಬರೆದ್ಬಿಟ್ಟಿದೀನಿ....ಇಪ್ಪತ್ತೈದು ಸಾವಿರ

ರೂಪಾಯಿ ಅದಕ್ಕೆ ಮೀಸಲಾಗಿಟ್ಟಿದ್ದೀನಿ........ಈ ಮನೇನ್ನ ಅಂಗಡೀನ, ಕುಂಬಾರಕೇರಿ ಮನೇನ್ನ, ತೋಟಾನ್ನ, ಜಮೀನನ್ನ ಎಲ್ಲ ನನ್ನ ಮೊಮ್ಮಗನ ಹೆಸರಿಗೆ—ರಾಜಮ್ಮನ ಮಗ ಇದಾನಲ್ಲ ಚಂದ್ರೂ–ಅವನ ಹೆಸರಿಗೆ ಮಾಡಿ ಬಿಡ್ತೀನಿ....ಕ್ಯಾಷೂ ಅಷ್ಟೆ. ನಾಗರಾಜನ ಕೈಗೆ ನಾಲ್ಕು ಕಾಸೂ ಸಿಕ್ಕ ಬಾರದು—"

"ಛೆ ಛೆ, ತೀರ ಹಾಗೆ ಮಾಡಿದರೆ...."

"ಛೆ ಛೆ ಏನು ಬಂತು. ಅವನ ಮುಖ ಕಂಡರೆ ನನಗಾಗೊಲ್ಲ...." ಅಯೋಗ್ಯ!"

"ಆದರೆ ಮುಂದೆ ತಲೆ ತಾಕಬಹುದು....ತೀರ ಬರೀ ಕೈ ಮಾಡಿಬಿಟ್ಟರೆ ಅವನಿಗೂ ಕಷ್ಟ ಆಗೋದಲ್ದೆ, ಅಕ್ಕ ತಮ್ಮನಿಗೆ ತಂದು ಹಾಕಿದ ಹಾಗಾಗುತ್ತೆ...."

"ಈಗೇನು ಮಹಾ ಚೆನ್ನಾಗಿರೋದು....ಒಂದು ಹೊಟ್ಟೇಲಿ ಹುಟ್ಟಿರೋರೆ ಒಬ್ಬರಿಗೊಬ್ಬರು ಕಿತ್ತಾಡ್ತಾರೆ, ಇನ್ನು ಬೇರೆ ಬೇರೆ ಹೊಟ್ಟೇಲಿ ಹುಟ್ಟಿದ ಇವರು ಎಂದು ತಾನೇ ಚೆನ್ನಾಗಿದಾರೆ, ಇರ್ತಾರೆ!"

"ಇಲ್ಲ....ಆದರೆ ನನಗೊಂದು ತೋರುತ್ತೆ. ತಾವು ಅಪ್ಪಣೆಕೊಟ್ಟರೆ ಹೇಳೋಣಾಂತ....ಅಂಗಡೀನ ವಹಿಸಿದ್ರೆ ಅಷ್ಟು ದೂರ ಇರೋ ರಾಜಮ್ಮನೋರು ಇಲ್ಲಿರೋರ ಮೇಲೆ ಬಿಟ್ಟು, ಅದನ್ನ ನೋಡ್ಕೊಳ್ಳೋಕಾಗೊಲ್ಲ.... ಮಾರಿಬಿಡಬೇಕಾಗುತ್ತೆ........ತಾವು ನಂಬಿದೀರಂತ ನಮ್ಮನ್ನ ಮುಂದೆ, ಎಲ್ಲಾರೂ ನಂಬ್ತಾರ್ಯೇ!........ತಮ್ಮಂಥೋರ ಕೈಯಲ್ಲಿ ಬಾಳೋ ಅದೃಷ್ಟ ಮುಂದೆ ನಾನು ಪಡಕೊಂಡು ಬಂದಿಲ್ಲ....ಆದ್ರಿಂದ ನನಗೆ ತೋರೋದು ತಾವು ಆ ಅಂಗಡೀನ, ಬ್ಯಾಂಕಿನಲ್ಲಿ ಅಂಗಡೀ ಲೆಕ್ಕದಲ್ಲಿರೋ ಕ್ಯಾಷ್‌ನ ಮಾತ್ರ ನಾಗರಾಜಪ್ಪನ ಹೆಸರಿಗೆ ಮಾಡಿಬಿಟ್ಟರೆ, ನಾಲ್ಕು ಜನರ ಬಾಯ್ನೂ ಮುಚ್ಚಿಸಿದ ಹಾಗಾಗುತ್ತೆ. ತಲೇ ತಾಕಿದ ಮೇಲೆ, ದೇವರು ಸರಿಯಾದ ಬುದ್ಧಿಕೊಟ್ರೆ, ಅವನಿಗೆ ಮುಂದೆ ಚೇತರಿಸ್ಕೊಳ್ಳೋಕೆ ದಾರೀನೂ ಮಾಡ್ಕೊಟ್ಟ್ಹಾಗಾಗುತ್ತೆ. ತಮ್ಮ ಸೇವೆ ಮಾಡಿದಂತೆ ತಮ್ಮ ಮಗನ ಸೇವೇನ, ಅವರಾಗಿ ನನ್ನನ್ನ ಕತ್ತು ಹಿಡಿದು ನೂಕೋವರ್ಗೂ ಮಾಡ್ತೀನಿ....ತಮಗೆ ಈ ವಿಷಯದಲ್ಲೇನೂ ಸಂಶಯ ಬ್ಯಾಡ....ತಾವು ಮಾಡೋದ್ಮಾಡಿಬಿಡಿ....ಮುಂದಿನ ಪಾಡು ಅವನ್ದು. ಅದೃಷ್ಟ

ಇದ್ದರೆ ಇಟ್ಕೊಳ್ತಾನೆ, ಇಲ್ಲದಿದ್ದರೆ ಕಳ್ಕೊಳ್ತಾನೆ....ಈ ಅಂಗಡೀ ಒಂದಾದರೂ ತಮ್ಮ ವಂಶದ ಹೆಸರಿನಲ್ಲಿ ನಡೀಲೀಂತ ಈ ಬಡವನಾಸೆ...."

ಮತ್ತೊಮ್ಮೆ ಉಕ್ಕಿ ಬಂದ ದುಃಖವನ್ನು ನುಂಗಿಕೊಂಡು, ನಂಜಪ್ಪ ಶೆಟ್ಟರು "ನನಗೂ ಆ ಯೋಚನೆ ಬಂದಿತ್ತು........ಆದರೆ ನನಗೇಕೊ ಮನಸ್ಸೇ ಇಲ್ಲ....ಹೋಗಲಿ....ಇನ್ನೂ ವಯಸ್ಸಾಗಿಲ್ಲ....ನೋಡೋಣ, ದೇವರು ಇಷ್ಟ ಪಟ್ಟರೆ ಹಾಗೇ ಆಗಲಿ....ಆ ದೇವರು ಅವನಿಗೆ ಬೇಗ ಬುದ್ಧಿ ಕೊಟ್ಟರೆ ಸಾಕು ....ಆಗಲಿ ನಾರಾಯಣರಾಯ್ರೆ,....ನೀವು ರಾಜಮ್ಮಂಗೆ ಕಾಗದ ಬರೀರಿ.... ಅವಳು, ಅವಳ ಗಂಡ ಬಂದ್ಬಿಡ್ಲಿ....ಇಲ್ಲಿ ಅವರು ಒಂದೇ ದಿನ ಇರಬೇಕು.... ಎಲ್ಲ ಬಹಳ ಗುಟ್ಟಾಗಿ....ಬೇಗ...."

"ತಿಳೀತು ಸ್ವಾಮಿ....ಎಲ್ಲ ತಮ್ಮ ಅಪ್ಪಣೇಂತೆ...."

"ಅವನಿಗೆ ತಿಳಿದ್ಬಿಟ್ಟರೆ!...."

"ಛೆ ಛೆ, ನನಗ್ಗೊತ್ತಿಲ್ವೆ!...."

"ಹ್ಞ,....ವಿಲ್ಲೊಂದಾಗಿ ಬಿಡ್ಲಿ. ರಿಜಿಸ್ಟರ್ ಈಗಲೇ ಮಾಡಿಸೋದು ಬ್ಯಾಡ. ಪಬ್ಲಿಕ್ ಆಗಿ ಬಿಡುತ್ತೆ. ಆಮೇಲೆ ಅವಳು ಅದಕ್ಕೇನು ಕೊಡ ಬೇಕೊ ಸ್ಟ್ಯಾಂಪುಖರ್ಚು ಕೊಟ್ಟು ರಿಜಿಸ್ಟರ್ ಮಾಡಿಸಿಕೊಳ್ಳಲಿ....ಅಂತೂ ಯಾರಿಗೂ ತಿಳೀದ್ಹಾಗೆ ಎಲ್ಲ ಆಗಬೇಕು....ದಯವಿಟ್ಟು ಅಷ್ಟು ನಡಸ್ಕೊಡಿ...."

"ಛೆಛೆ, ಇದೇನು ಸ್ವಾಮಿ....ಹಾಗ್ಹೇಳ್ತೀರ....ತಮ್ಮ ಸೇವೆ. ಅದರಲ್ಲಿ 'ದಯವಿಟ್ಟು' ಏನ್ಬಂತು."

ಮೂವತ್ತು ವರುಷ ಉಪ್ಪುತಿಂದ ನಾರಾಯಣರಾಯರು ದಣಿ ಹೇಳಿದಂ ತೆಯೇ ಎಲ್ಲ ಕೆಲಸವನ್ನೂ ಮಾಡಿ ಮುಗಿಸಿದರು. ಬರೆದು, ನಂಜಪ್ಪಶೆಟ್ಟರ ರುಜು, ನಾರಾಯಣರಾಯರ ಮತ್ತು ರಾಜಮ್ಮನ ಗಂಡನ ಸಾಕ್ಷ್ಯ ಹಾಕಿದ ವಿಲ್ಲನ್ನು ರಾಜಮ್ಮ ಶಿವಮೊಗ್ಗಿಗೆ ಗುಟ್ಟಾಗಿ ಒಯ್ದು ಬಿಟ್ಟಳು.

ಇದಾದ ಎರಡು ತಿಂಗಳ ಮೇಲೆ, ನಂಜಪ್ಪಶೆಟ್ಟರ ಕಾಯಿಲೆ ಸ್ವಲ್ಪ ಹೆಚ್ಚಾಯಿತು.

ಒಂದು ಭಾನುವಾರ, ನಾರಾಯಣರಾಯರು ಲಕ್ಷಮ್ಮನ ಜೊತೆ ಹರಟೆ ಕೊಚ್ಚುತ್ತಿದ್ದಾಗ ನಂಜಪ್ಪಶೆಟ್ಟರ ಆಸ್ತಿಯ ಮುಂದಿನ ವಿಚಾರ ಪ್ರಸ್ತಾಪಕ್ಕೆ ಬಂತು. ಆಗ ಲಕ್ಷಮ್ಮ, "ನಂಜಪ್ಪಶೆಟ್ಟರು ಆಸ್ತೀನೆಲ್ಲ ಮಗನಿಗೆ ಮಾಡೊ

ಲ್ವಂತೆ ಹೌದೆ?" ಎಂದು ಕೇಳಿದಳು.

"ಹೌದು....ಎಲ್ಲ ಮಗಳಿಗೆ ಮಾಡ್ತೀನೀಂತಾರಂತೆ."

"ಈ ಮಗ ಸುಮ್ನಿರ್‍ತಾನ್ಯೇ?"

"ಸುಮ್ನಿರ್ದೆ ಏನ್ಮಾಡ್ತಾನೇ........ಅಜ್ಜನಾಸ್ತಿ ಅಲ್ಲ ಏನಲ್ಲ. ಎಲ್ಲ ಸ್ವಯಾರ್ಜಿತ. ತನಗಿಷ್ಟ ಬಂದ್ಹಾಗ್ ಮಾಡ್ಕೊತೀನಿ ಅನ್ನುತ್ತೆ ಮುದ್ಕ."

"ಓ........ಹಾಗಾದರೆ ಎಲ್ಲ ಮಗಳಿಗೇ ಮಾಡಿಬಿಡ್ತಾರಾ?........ಅದೇನೋ ಛತ್ರ ಕಟ್ಟಿಸ್ತಾರಂತೆ?"

"ಛತ್ರ ಅಲ್ಲ, ಹಾಸ್ಟಲು....ಸ್ಟೂಡೆಂಟ್ಸ್‌ಗೆ."

"ಅದು ಕಟ್ಸೋದು ನಿಜವಾ?"

"ನಿಜ. ಆದರೆ ಅದಕ್ಕೆಲ್ಲ ಏನು ಖರ್ಚಾಗುತ್ತೆ. ಮೂರು ಲಕ್ಷ ರೂಪಾಯ್ನಲ್ಲಿ ಇವತ್ತೆಲ್ಲ ಇಪ್ಪತ್ತು ಮೂವತ್ತು ಸಾವಿರ ರೂಪಾಯಿ ಹೋದೀತು."

"ಉಳಿದದ್ದೆಲ್ಲ ಮಗಳಿಗೇನ?...."

"ಮಗಳಿಗೂ ಅಲ್ಲ........ಅದು ಘಾಟಿ ಮುದುಕ........ಮೊಮ್ಮಗನ ಹೆಸರಿಗೆ ಮಾಡುತ್ತಂತೆ...."

"ಯಾರು, ಮಗಳ ಮಗನಿಗಾ?"

"ಹ್ಣಾ."

"ಎಷ್ಟು ವರ್ಷಾನೋ ಆ ಹುಡುಗನ್ಗೆ?"

"ಅಯ್ಯೊ, ಇನ್ನೂ ಚಿಕ್ದು, ಈಗ ಆರು ವರ್ಷಾನೊ ಏನೊ."

"ಹಾಗಾದರೆ ಇವನ್ಗೇನಿಲ್ಲಾನ್ನಿ."

"ಏನೂ ಕಾಣ್ಸೋ ಹಾಗಿಲ್ಲ...."

"ಅಂಗಡಿ?"

"ಅಂಗಡೀನೂ ಅವರ್ಗೇ ಬರೆಯೋ ಹಾಗೆ ಕಾಣುತ್ತೆ."

"ಓ....ಈವಾಗ ಇವನೇನೂ ಮಾಡೋಕಾಗೊಲ್ಲ?........ಅಪ್ಪನಿಗೆ ಹೇಳಿ........"

"ಅವನ ಮುಖ ಕಂಡರೆ ಆಗೊಲ್ಲ ಆ ಮುದುಕನ್ಗೆ....ಅದರಲ್ಲೂ, ಅವನು ಇಲ್ಲಿಗೆ ಬರೋದು ಹ್ಯಾಗೋ ಗೊತ್ತಾಗ್ಬಿಟ್ಟದೆ!....ಕೆಂಡ ಕೆಂಡ ಆಗ್ಬಿಟ್ಟದೆ ಮುದುಕ."

“ ಓ....ಹಾಗಾದರೆ ಇದು ಪಾಪರ್ರ್‍ರ್ರಾನ್ನಿ! ”

“ ಇಲ್ಲ ಇವನು ಬುದ್ಧಿವಂತ ಆದ್ರೆ ಒಂದು ಉಪಾಯ ಮಾಡ್ಬಹ್ದು.... ಎಲ್ಲ ಇವನಿಗೆ ಬೇಕಾದೋರಿರೋದರಿಂದ.”

“ ಏನ್ಮಾಡ್ಬಹುದೂಂತೀರ ? ”—ಲಕ್ಷಮ್ಮ ಕುತೂಹಲದಿಂದ ಹತ್ತಿರಕ್ಕೆ ಸರಿದು ಕೇಳಿದಳು.

“ ಏನೂ ಇಲ್ಲ. ಹ್ಯಾಗಿದ್ರು ಸಬ್‌ರಿಜಿಸ್ಟ್ರಾರ್ರು, ಮುಖ್ಯವಾದ ಕಾನ್ ಸ್ಟೇಬಲ್‌ಗಳು ಎಲ್ಲ ಗೊತ್ತಿರೋದ್ರಿಂದ ಒಂದು ಕೆಲಸ ಮಾಡಬಹುದು.... ಮುದುಕ, ಜೀವ ಇರೋವರ್ಗೂ ಇವನು ಹೇಳಿದ ಹಾಗೆ ವಿಲ್ ಬರೆಯೊಲ್ಲ. ಇವನಿಗೆ ಅದನ್ನ ಕೇಳೋ ಧೈರ್ಯ ಕೂಡ ಇಲ್ಲ. ಆದ್ದರಿಂದ ಮುದುಕ ಸತ್ತ ಕೂಡಲೆ, ಗುಟ್ಟುಗುಟ್ಟಾಗಿ ಹ್ಯಾಗೆ ಬೇಕೋ ಹಾಗೆ ವಿಲ್ ಬರಸಿ, ಮುದುಕನ ಬಾಯಿ ಹೋಗಿರೋದ್ರಿಂದ ಹೆಬ್ಬಟ್ಟಿನ ಋಜೂಂತ ಹಾಕಿಸಿ, ಎಲ್ಲರಿಗೂ ನಾಲ್ಕು ಕಾಸು ಕೊಟ್ಟು ರಿಜಿಸ್ಟರ್ ಮಾಡಿಸಿಬಿಟ್ಟರೆ....ಆಮೇಲೆ ಏನ್ಮಾಡೋಹಾಗಿದೆ ?”

“ ಪ್ಲ್ಯಾನೇನೋ ಸರಿ....ಆದರೆ ಸಾಯೋ ಮುದುಕ ಸಾಯೋವರ್ಗೂ ಸುಮ್ನೇನೇ ಇದ್ದು ಬಿಡುತ್ತೇ....ಮುಂಚೇನೆ ಸಮಯ ನೋಡಿ ತನಗೆ ತೋರಿ ದ್ಹಾಗೆ ವಿಲ್ ಬರೆದ್ಬಿಟ್ಟದ್ರೆ ? ”

“ ಇದೂವರ್ಗೂ ಹಾಗೇನೂ ಆದ್ಹಾಗ್ ಕಾಣಿಸೊಲ್ಲ....ನೋಡ್ಲಿ ಬೇಕಾದ್ರೆ ....ಸತ್ತಮೇಲೆ, ಹ್ಯಾಗಿದ್ರೂ ಬೀಗದ ಕೈ ಸಿಕ್ಕುತ್ತೆ. ಎಲ್ಲ ಕಡೆಯೂ ಹುಡುಕಲಿ ....ಹಾಗೇನಾದ್ರೂ ಮುಂಚೇನೇ ವಿಲ್ ಆಗಿದ್ರೆ, ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲಿ ದಾಖಲೆ ಸಿಕ್ಕುತ್ತಲ್ವೆ !....ಅಲ್ಲಿ ಅದು ರಿಜಿಸ್ಟ್ರಾಗ್ಲೇಬೇಕಲ್ಲ....ಹಾಗೇನಾದರೂ ಆಗಿದ್ರೆ—ನಂಗ್ಯಾಕೆ—ಇಡೀ ಜಗತ್ತಿಗೇ ತಿಳೀತಿತ್ತು. ಸಬ್‌ರಿಜಿಸ್ಟ್ರಾರ್ ರಂಗ ಸ್ವಾಮಿಗಳೇ ನಾಗರಾಜನಿಗೆ ತಿಳಿಸಿಬಿಡ್ತಿದ್ರು....ಇನ್ನೂ ಏನೂ ಆದಹಾಗೆ ಕಾಣೊಲ್ಲ....ಆಗಿಲ್ಲ.”

“ ಸರಿ.”

ಈ ಉಪಾಯವನ್ನು ಕೇಳಿದ ಲಕ್ಷಮ್ಮನ ಮನಸ್ಸಿನಲ್ಲಿ ಒಂದು ವಿಚಿತ್ರ ಆಸೆ ಮೂಡಿತ್ತು. ಇದು ಇನ್ಯಾರ ಕಿವಿಗೂ ಬೀಳದಿರಲೆಂದು ನಾರಾಯಣ ರಾಯರನ್ನು ಕುರಿತು “ ನಮ್ಮೆದುರಿಗಾಯ್ತು, ಇನ್ಯಾರೆದುರಿಗೂ ದಯವಿಟ್ಟು ಇದನ್ನು ಹೇಳಿಬಿಡಬೇಡಿ....ಬಹಳ ಗುಟ್ಟಾಗಿರಲಿ ” ಎಂದು ಕೇಳಿಕೊಂಡಳು.

ಇಂಥ ಉಪಾಯ ತೋರಿಸಿಕೊಟ್ಟ ನಾರಾಯಣರಾಯರಿಗೆ ಅಂದು ಮಿತಿಮೀರಿ ಸೇವೆ ಸಲ್ಲಿಸಿದಳು.

ಈ ಅಮೂಲ್ಯವಾದ ಸಲಹೆಯನ್ನು ನಾಗರಾಜನಿಗೆ ತಿಳಿಸಿ, ಅವನ ಕೈಯಲ್ಲಿ ಈ ಕೆಲಸ ಮಾಡಿಸಿಬಿಟ್ಟರೆ, ತಮ್ಮ ಸ್ಥಿತಿ ಇನ್ನೂ ಉತ್ತಮವಾಗುತ್ತದೆ. ಬೇಕಾದರೆ, ನಾಗರಾಜನಿಗೂ ರತ್ನಳಿಗೂ ಮದುವೆಯೇ ಆಗಿದೆ, ಎಂದು ಸುದ್ದಿ ಹುಟ್ಟಿಸಿಬಿಡೋಣ. ಈ ವ್ಯಾಪಾರ, ನೂರಾರು ಜನರ ಕಾಟ ತಪ್ಪುತ್ತೆ........ ನಿಶ್ಚಿಂತೆಯಿಂದ ಇರಬಹುದು, ಎಂದು ಯೋಚಿಸುತ್ತ ಲಕ್ಷಮ್ಮ ಬಹಳ ದೂರ ಹೋಗಿಬಿಟ್ಟಳು.

'ಆ ಉಪಾಯ ಗೆದ್ದರೆ ಪರವಾಯಿಲ್ಲ... ಸೋತರೆ? ....ಸೋತು ಸರಕಾರದ ಕೈಗೆ ಸಿಕ್ಕಿಬಿದ್ದರೆ? ಆಮೇಲೆ ಪಾರ್ಟಿಯಾಗುವ ನಮ್ಮ ಗತಿ ಏನು?' ಎಂಬುದು, ದೊಡ್ಡಮ್ಮನ ಬಾಯಿಂದ ಈ ಮಾತು ಕೇಳಿದ ಬುದ್ಧಿವಂತೆ ರತ್ನಳಿಗೆ ಹೊಳೆಯಿತು.

ಅವಳು ಹೇಳಿಬಿಟ್ಟಳು: "ದೊಡ್ಡಮ್ಮಾ, ಇದು ಒಳ್ಳೆ ಉಪಾಯ ಆದರೂ ತುಂಬ ಹುಷಾರಾಗಿ ನಡೀಬೇಕು.........ಬಂದರೆ ಲಕ್ಷ ರೂಪಾಯಿ ಬರಬಹುದು........ಹೋದರೆ ಎಲ್ಲರ ತಲೇನೂ ಹೋಗುತ್ತೆ. ಆದ್ದರಿಂದ ನಮಗೆ ಈ ತಂಟೇನೇ ಬೇಡ....ನಾ ಹೇಳೋದು ಇಷ್ಟು. ನಾಗರಾಜ್ ಬಂದಾಗ ಈ ಉಪಾಯಾನೆಲ್ಲ ವಿವರಿಸಿ ಹೀಗೆ ಹೇಳ್ತೀನಿ:—ಇದು ನನಗೆ ತೋರೋ ವಿಷಯ ....ನಿಮಗೆ ಇಷ್ಟ ಇದ್ರೆ ಹೀಗೆ ಮಾಡಿ....ಆದರೆ ಈ ಕೆಲಸಕ್ಕೆ ನಾವ್ಯಾರೂ ಬರೊಲ್ಲ. ಬಂದರೆ ನಿಮಗೊಳ್ಳೆದಾಗೊಲ್ಲ. ನಿಮಗೆ ತುಂಬ ಬೇಕಾದ ಒಂದಿಬ್ಬರು ಸ್ನೇಹಿತರ್ನ ಗೊತ್ಮಾಡ್ಕೊಂಡು ಅವರ ಸಹಾಯದಿಂದ, ಸಮಯಕ್ಕೆ ಸರಿಯಾಗಿ ಈ ಕೆಲಸ ಮಾಡಿಬಿಡಿ. ಸಬ್‌ರಿಜಿಸ್ಟ್ರಾರ್ ಹ್ಯಾಗಿದ್ರೂ ಗುರುತಾಗಿದಾರೆ........ಅವರಿಗೆ ಕೈತುಂಬ ಕೊಟ್ರೆ........ಮನೇಗೆ ಬಂದು ರಿಜಿಸ್ಟರ್ ಮಾಡಿಸಿಬಿಡ್ತಾರೆ. ಎಲ್ಲ ಆಗ್ಹೋಗುತ್ತೇಂತ."

"ಏನೋಮ್ಮ, ನನಗೇನ್ ಅಷ್ಟು ಅಪಾಯಾಂತ ತೋರಲಿಲ್ಲ....ಎಷ್ಟಾದರೂ ಹೊಟ್ಟೇಲಿ ಹುಟ್ಟಿದ ಮಗ. ಸಾಲದ್ದಕ್ಕೆ ಒಬ್ನೇ ಮಗ....ಏನಡ್ಡಿ ಬರುತ್ತೇಂತ....ಹಾಗವರಕ್ಕ ಬಂದ್ರೆ, ಹೀಗಿದೆ ನೋಡು ವಿಲ್ಲೂಂತ ತೋರಿಸಿಬಿಡೋದು....ನಾಗರಾಜಪ್ಪನಿಗೆ ಹೇಳಿಬಿಟ್ಟರೋದು....ತಂದೆಗೆ ಖಾಯಿಲೆ

ಜೋರಾದ ಕೂಡಲೆ, ಸದಾ ಅವರ ಹತ್ತಿರವೇ ಸಮಯ ಕಾಯ್ತಾ ಇದ್ದುಬಿಡು, ಅವರ ಅಕ್ಕನೂರಿಗೆ ಕಾಗದ ಹೋಗದ ಹಾಗೂ ನೋಡ್ಕೋಂತ, ಅವರಕ್ಕನಿಗೆ ಈ ಮುದುಕ ಸತ್ತಿದ್ದೇ ತಿಳೀಬಾರ್ದು.... ಬೇಕಾದ್ರೆ, ಎಲ್ಲ ಆದ ಮೇಲೆ ಹಿಂದಿನ ತಾರೀಕು ಹಾಕಿ, ಒಂದು ಕಾಗದ ಬರೆದು ಪೋಸ್ಟ್ ಮಾಡಿಬಿಡೋದು...."

"ಸರಿ. ಆದರೂ ನನಗೇನೋ ಇಷ್ಟವಿಲ್ಲ. ಅದರಿಂದ ಏನೇನು ತೊಂದರೆ ಬರುತ್ತೋ ಯಾರು ಕಂಡಿರೋರು....ಯಾಕೇಂದ್ರೆ ಹೆಣದ ಕೈಲಿ ಹೆಬ್ಬೆಟ್ಟೊತ್ತಿಸೋದು....ಬ್ಯಾಡಮ್ಮ, ಎಲ್ಲ ಅವನಿಗೇ ಬಿಟ್ಟುಬಿಡೋಣ" ಎಂದು ರತ್ನ ಖಚಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

ನಾಗರಾಜ ಮನೆಗೆ ಬಂದಾಗ ಈ ಉಪಾಯ ಹೇಳಿದಾಗ, ಅವನು "ನೀನೂ ಜೊತೆಯಲ್ಲಿರು,....ಇಲ್ಲದಿದ್ದರೆ ಕರಯಪ್ಪನಿಗಾದರೂ ಹೇಳು...." ಎಂದು ರತ್ನಳ ಮುಂದೆ ಗೋಗರೆದ.

ಆದರೆ, ರತ್ನ "ಅದು ಸಾಧ್ಯವಿಲ್ಲ, ಕರಿಯಪ್ಪಣ್ಣನಿಗೆ ನಾನು ಹೇಳ ಲಾರೆ....ನೀವು ಅವನಿಗೆ ತಿಳಿಸುವುದೂ ಸರಿಯಲ್ಲ....ನಿಮಗೆ ಬೇಕಾದ — ನಂಬಿಕಸ್ಥರಾದ ಒಬ್ಬಿಬ್ಬರು ಗೆಳೆಯರಿಗೆ ಹೇಳಿ ಈ ಏರ್ಪಾಟು ಮಾಡಿಕೊಳ್ಳಿ. ಸಬ್‌ರಿಜಿಸ್ಟ್ರಾರ್ರ ಸಹಾಯ ಒಂದಿದ್ರೆ ಎಲ್ಲ ಸುಲಭವಾಗಿ ನಡೆದ್ಹೋಗುತ್ತೆ.... ಇದರಲ್ಲಿ ನನ್ನ ಹೆಸರು ಇರಲೇಕೂಡದು....ನಿಮ್ಮ ಒಳ್ಳೆಯದಕ್ಕೇ ಹೇಳ್ತಿದೀನಿ.... ಯೋಚನೆ ಮಾಡಿ......ನಿಮಗೆ ಹ್ಯಾಗೆ ತೋರುತ್ತೋ ಹಾಗೆ ಮಾಡಿ. ನಾನಂತೂ ಇದರಲ್ಲಿ ಕೈಹಾಕೊಲ್ಲ" ಎಂದು ಹೇಳಿಬಿಟ್ಟಳು.

"ನಾರಾಯಣರಾಯರಿಗೆ ಈ ವಿಷಯ ತಿಳಿಸಿದರೆ?" ಎಂದು ನಾಗರಾಜ ತನಗೆ ಹೊಳೆದುದನ್ನು ಹೇಳಿದ.

"ಛೆ ಛೆ, ಎಲ್ಲಾದರೂ ಉಂಟೆ!....ಅವರು ಎಷ್ಟಾದರೂ ನಿಮ್ಮ ಆಳು.... ಅವರನ್ನು ಇಂಥ ವಿಷಯಕ್ಕೆ ಸೇರಿಸಿಕೊಂಡರೆ ಆಮೇಲೆ ನಿಮ್ತುಲೇಗೆ ತಂದ್ಬಿಡ್ತಾರೆ. ಅದೆಲ್ಲ ಸರಿಯಲ್ಲ" ಎಂದು ರತ್ನ ಬುದ್ಧಿವಂತಿಕೆಯ ಉತ್ತರ ಕೊಟ್ಟುಬಿಟ್ಟಳು.

ನಾಗರಾಜ "ಸರಿ....ದೇವರಿದಾನೆ, ನೋಡೋಣ" ಎಂದುಕೊಂಡು ಹೊರಟುಹೋದ.

ಅಂದು ಹೋದವನು, ಮೂರು ದಿನವಾದರೂ ಮನೆಯ ಕಡೆ ಬರಲಿಲ್ಲ.

ಏನು ಕಾರಣವೊ ತಿಳಿಯಲಿಲ್ಲ.

ನಂಜಪ್ಪಶೆಟ್ಟರಿಗೆ ಖಾಯಿಲೆ ಜಾಸ್ತಿಯಾಗಿದೆಯೊ, ಏನೊ !

ಏನಾಯಿತೊ, ತಿಳಿಯಲಿಲ್ಲವಲ್ಲ !

ಲಕ್ಷ್ಮಮ್ಮ "ನಂಜುಂಡಿಯನ್ನು ಅವರ ಮನೆಯ ಹತ್ತಿರ ಕಳಿಸೋಣ, ಹೊರಗೆ ನಿಂತು ಸುಳುವು ನೋಡಿಕೊಂಡು ಬರಲಿ" ಎಂದಳು.

ರತ್ನ "ಥು, ಬೇಡ. ನಮ್ಮ ಕಡೆಯೋರು ತಲೆ ಹಾಕೋದೇ ಬೇಡ.... ಪಂಚಾಯಿತಿ. ನಾವು ಸುಮ್ನೆ ನೋಡ್ತಿರೋಣ. ಅದೇನಾಗುತ್ತೊ !" ಎಂದು ಸಲಹೆ ಮಾಡಿದಳು.

ಭಾನುವಾರಕ್ಕೆ, ನಾಗರಾಜನ ಮುಖ ನೋಡಿ ಮೂರು ದಿನವಾಗುತ್ತದೆ. ಅಂದಾದರೂ ಅವನು ಬಂದಾನು, ಎಂದುಕೊಂಡಿದ್ದಳು.

ಆದರೆ, ಮಹೇಶ್ವರನಿಗೆ ಸ್ವಾಗತದ ಏರ್ಪಾಟಾದ ಮೇಲೆ, ನಾಗರಾಜ ಇಂದೂ ಬಾರದಿದ್ದರೆ ಚೆನ್ನ, ಎಂದುಕೊಂಡಿದ್ದಳು.

ಮಹೇಶ್ವರ ಮನೆಗೆ ಬರುವುದು ಮಧ್ಯಾಹ್ನ ಎಂಬುದು ಮಾತ್ರ ತಿಳಿದಿತ್ತು. 'ಎಷ್ಟು ಗಂಟೆಗೆ ಬರುತ್ತಾನೆ, ಒಬ್ಬನೇ ಬರುತ್ತಾನೆಯೊ ಅಥವಾ ಇನ್ನಾರನ್ನಾದರೂ ಜೊತೆಗೆ ಕರೆದುಕೊಂಡು ಬಂದು ಬಿಡುತ್ತಾನೆಯೊ' ಎಂಬುದು ಬಗೆಹರಿಯದಿದ್ದರೂ ರತ್ನ 'ಚಿತ್ರವಾಣಿ' ಓದುತ್ತ, ಮಹೇಶ್ವರನಿಗಾಗಿ ಹಾಸಿಗೆಯ ಮೇಲೆ ಮಲಗಿಕೊಂಡಿದ್ದಳು.

ಲಕ್ಷ್ಮಮ್ಮ ಕೆಳಗಿನ ತನ್ನ ಕೋಣೆಯಲ್ಲಿ ಮಲಗಿ ನಿದ್ರಿಸುತ್ತಿದ್ದಳು. ಮದುವೆಯಾದ ಒಂದು ತಿಂಗಳಲ್ಲಿಯೇ ಗಂಡನೊಡನೆ ಕಮಲ ಹೊರಟು ಹೋದ ಮೇಲೆ ಮನೆಯಲ್ಲಿ ಹೆಚ್ಚು ಕಾಲ ಶಾಂತಿ ನೆಲಸಿರುತ್ತಿತ್ತು. ಜಗಳದ ಗಾಳಿಯಂತೂ ಬೀಸುತ್ತಲೇ ಇರಲಿಲ್ಲ.

ಮನೆ ಮೌನವಾಗಿತ್ತು.

ಬೀದಿಯ ಬಾಗಿಲ ಚಿಲಕದ ಸದ್ದಾಯಿತು.

ರತ್ನಳ ಕೋಣೆ ಮಹಡಿಯ ಮೇಲಿದ್ದರೂ ಬೀದಿಯ ಬಾಗಿಲಿಗೆ ಹತ್ತಿರವಾಗಿರುವುದರಿಂದ ಆ ಸದ್ದು ಅವಳಿಗೆ ಕೇಳಿಸಿತು.

ದೇಹ ಹಾಸಿಗೆಯ ಮೇಲಿದ್ದರೂ, ಮನಸ್ಸು ಬೀದಿಯ ಬಾಗಿಲ ಹತ್ತಿರವಿದ್ದ ಅವಳಿಗೆ ಎದ್ದು ನೋಡಬೇಕೆನಿಸಿತು. ಆದರೆ, ನಾಗರಾಜನ ನೆನಪಾಗಿ,

ತಾನು ಬಾಗಿಲು ತೆರೆಯಬಾರದೆಂದುಕೊಂಡು, ಮಹಡಿಯಿಂದಿಳಿದು ಹಿತ್ತಲ ಕಡೆ ಹೋದಳು. ನಂಜುಂಡಿ ಮುಸುರೆ ತಿಕ್ಕುತ್ತಿದ್ದ.

"ನಂಜುಂಡಿ, ಹೊರಗೆ ಯಾರೋ ಬಂದಿದಾರೆ. ಬಾಗಿಲು ತೆಗೆದು ನೋಡು, ನಾಗರಾಜಪ್ಪನೋರಾದ್ರೆ ಕೆಳಗಡೆ ರೂಮಿನಲ್ಲಿ ಕೂಡಿಸಿ ನನಗೆ ಹೇಳು....ಮಹೇಶ್ವರಪ್ಪನೋರಾದ್ರೆ.........ನಾನು ಮಹಡೀ ಮೇಲಿರ್‍ತೀನಿ, ಅಲ್ಲಿಗೆ ಕಳಿಸು........" ಎಂದು ತಿಳಿಸಿ, ಬೇಗ ಬೇಗ ಮಹಡಿಯ ಮೆಟ್ಟಲು ಹತ್ತಿದಳು.

ನಂಜುಂಡಿ ಕೈ ತೊಳೆದುಕೊಂಡು ಬಾಗಿಲು ತೆರೆದ.

ಗುಂಗುರು ತಲೆಗೂದಲನ್ನು ಚೆನ್ನಾಗಿ ಬಾಚಿ, ಅಗಸನ ಮಡಿಕೆ ಅಳಿಸದ ಸಿಲ್ಕ್ ಜುಬ್ಬ, ಹಾಲು ಬಿಳುಪಿನ ಪಾಯಿಜಾಮ, ಕಾಲಿಗೆ ಕರಿಯ ಚಪ್ಪಲಿ ಹಾಕಿಕೊಂಡು, ಅಂದು ಬೆಳಿಗ್ಗೆ ಕ್ಷೌರ ಮಾಡಿಕೊಂಡ ನುಣುಪಾದ ಮುಖವನ್ನು ಬಿಳಿಯ ಕರವಸ್ತ್ರದಿಂದ ಒರಸಿಕೊಳ್ಳುತ್ತಿದ್ದ ಮಹೇಶ್ವರ ಬಾಗಿಲ ಹತ್ತಿರವೇ ನಿಂತಿದ್ದ. ಕೈಬೆರಳಿನಲ್ಲಿದ್ದ ಉಂಗುರ ಕರವಸ್ತ್ರದ ಮರೆಯಲ್ಲಿ ಬಾಗಿ ಮಿಂಚಿತು.

ನಂಜುಂಡಿ "ಬನ್ನಿ....ಮೇಲಕ್ಕೊ್ಹೋಗಿ" ಎಂದ.

ಅನೇಕ ಮಹನೀಯರಿಗೆ ತೋರಿಸಿದಂತೆ, ಅವನ ಕೈಮೆಟ್ಟಲಿನ ಕಡೆಗೆ ಕೆಳಗಿನಿಂದ ಮೇಲಕ್ಕೆ ಆಡಿತು.

ಮಹೇಶ್ವರ ಬಾಗಿಲ ಒಳಗೆ ಚಪ್ಪಲಿಯನ್ನು ಬಿಡುವುದರಲ್ಲಿದ್ದ.

ನಂಜುಂಡಿ "ಪರವಾಯಿಲ್ಲ....ಹಾಕ್ಕೊಂಡ್ಹೋಗಿ" ಎಂದ.

ಮಹೇಶ್ವರ ಮಹಡಿಯ ಮೆಟ್ಟಲು ಹತ್ತುತ್ತಿದ್ದಾಗ ರತ್ನ, ಮಹಡಿಯ ಮೇಲೆ ಎದುರಿಗಿದ್ದ ತನ್ನ ಕೋಣೆಯಲ್ಲಿದ್ದಳು. ಕೋಣೆಯ ಬಾಗಿಲಿಗೆ ಹಸುರು ತೆರೆ ಇಳಿಬಿದ್ದಿತ್ತು. ಮಹೇಶ್ವರ ಮೆಟ್ಟಲು ಹತ್ತಿ ಮುಗಿಸಿ ಮೇಲೆ ಬಂದ ಕೂಡಲೆ, ತೆರೆ ಗಾಳಿಗೆ ಒಳಗೆ ಹಾರಿ ಸ್ವಾಗತಿಸಿತು.

ತೆರೆಯ ಮರೆಯಲ್ಲಿದ್ದ ದೃಶ್ಯ ನೋಡಿ ಮಹೇಶ್ವರ ಅಲ್ಲಿಯೇ ನಿಂತ. ತೆರೆ ಬಾಗಿದಾಗ ಕೋಣೆಯೊಳಗೆ ಎದುರಿಗಿದ್ದ ದೊಡ್ಡ ಮಂಚ ಕಾಣಿಸಿತು. ಸೊಳ್ಳೆಯ ಪರದೆಯನ್ನು ಮೇಲಕ್ಕೆ ಸಿಕ್ಕಿಸಿ, ಮಂಚದ ಮೇಲೆ ಹಾಸಿದ್ದ ಬಿಳಿಯ ಹಾಸಿಗೆಯ ಮೇಲೆ, ಸುಂದರಿ ರತ್ನ ಯಾವುದೋ ಪತ್ರಿಕೆ ಓದುತ್ತ ಮಲಗಿದ್ದಳು.

ಒಂದು ಕಾಲನ್ನು ಅರ್ಧ ಚಾಚಿ, ಇನ್ನೊಂದು ಕಾಲನ್ನು ಅರ್ಧ ಮಡಿಸಿ ಬಾಗಿಲ ಕಡೆಗೆ ಅರೆಮುಗ್ಗುಲಾಗಿದ್ದ ರತ್ನ ಚಪ್ಪಲಿಯ ಸದ್ದು ಕೇಳಿ, ಮುಖದ ಮೇಲಿದ್ದ ಪುಸ್ತಕವನ್ನು ಅರ್ಧ ಸರಿಸಿದ್ದಳು. ನಿದ್ದೆ ಮಾಡಿ ಎದ್ದಂತಿದ್ದ ಅವಳ ಒಂದು ಕಣ್ಣು ಕಾಮದ ಕಣ್ಣಾಗಿ, ಕೋರುವ ಕಣ್ಣಾಗಿ ತೆರೆಯ ಕಡೆ ನೋಡಿತು. ತೆರೆ ಹಾರಿಹೋಗಿತ್ತು. ಸುಂದರ ಮಹೇಶ್ವರ ಕೋಣೆಯ ಬಾಗಿಲ ಚೌಕಟ್ಟಿನೊಳಗಿನ ಚಿತ್ರದ ಮೂರುತಿಯಂತೆ ನಿಂತಿದ್ದ. ಅವಳನ್ನೊಮ್ಮೆ ನೋಡಿದ ಅವನ ಮುಖ ಕೆಳಗೆ ಬಾಗಿತ್ತು. ಕೈ ಬಿಳಿಯ ಕರವಸ್ತ್ರದಿಂದ ಬಾಯಿ ಮುಚ್ಚಿಕೊಂಡಿತ್ತು.

ರತ್ನ ಎದ್ದು, ಪುಸ್ತಕವನ್ನು ತೆಗೆದು ಮಂಚದ ಪಕ್ಕದಲ್ಲಿದ್ದ ಪುಟ್ಟ ಮೇಜಿನ ಮೇಲಿಟ್ಟು "ಬನ್ನಿ, ಪರವಾಯಿಲ್ಲ" ಎಂದಳು.

ಮಹೇಶ್ವರ ಅಂಥ ಸ್ವಾಗತಕ್ಕೆ ಹೊಸಬ; ಆದರೆ, ರತ್ನ ಪಳಗಿಬಿಟ್ಟಿದ್ದಳು.

ಅವಳು ಎದ್ದು ನಿಂತಾಗ ಸೀರೆಯ ನೆರಿಗೆ ಅಸ್ತವ್ಯಸ್ತವಾಗಿತ್ತು. ಎದೆಗೆ ಅಂಟಿದಂತೆ ಧರಿಸಿದ್ದ ತಿಳಿ ನೇರಳೆ ಬಣ್ಣದ ಕುಪ್ಪಸ ಮೈಹೊಂಬಣ್ಣಕ್ಕೆ ಪೊರೆಯ ತೆರೆ ಹಾಕಿದಂತಿತ್ತು. ಜಾರಿದ ಸೆರಗಿನ ಮೇಲೆ ಉಬ್ಬಿ ಕಾಣುತ್ತಿದ್ದ ಅವಳ ಎದೆ ಅವನ ಕಣ್ಣನ್ನಾಕರ್ಷಿಸಿತು. ಸ್ವಲ್ಪ ಹೊತ್ತಿಗೆ ಮುಂಚೆ ಬಾಚಿಕೊಂಡಿದ್ದರೂ, ಕಿಟಕಿಯಿಂದ ಬೀಸಿದ ಗಾಳಿಗೆ ಕೆದರಿದ ಮುಂಗುರುಳು ಹಣೆಯ ಮೇಲೆ ಆಡುತ್ತಿತ್ತು. ಅರೆಮುಚ್ಚಿದ ಅವಳ ಕಣ್ಣು, ಕಾಮನ ಬಿಲ್ಲಿನಂತಿದ್ದ ಆ ಹುಬ್ಬಿನ ಕೆಳಗೆ ನಿಂತು ತುಂಬು ಪ್ರೇಮದಿಂದ ನೋಡಿತು. ಒಂದು ಗಂಟೆಗೆ ಮುಂಚೆ ಎಲೆಅಡಕೆ ಹಾಕಿಕೊಂಡ ತುಟಿ ರತ್ನವಾಗಿ, ರಾಗವಾಗಿತ್ತು. ಕಿವಿಯಲ್ಲಿದ್ದ ಅಗಲವಾದ ಬಿಳಿಹರಳಿನ ಲೋಲಕ್, ಮೂಗಿನಲ್ಲಿದ್ದ ವಜ್ರದ ಮೂಗುಬೊಟ್ಟು ನಕ್ಷತ್ರದಂತೆ ಮಿನುಗುತ್ತಿದ್ದುವು.

ಮಹೇಶ್ವರ ಒಮ್ಮೆ ತಲೆಯೆತ್ತಿ ನೋಡಿ ಮತ್ತೆ ಅಲ್ಲಿಯೇ ನಿಂತುಬಿಟ್ಟ. ಅವನ ಮನಸ್ಸು ಎಲ್ಲಿತ್ತೊ!

"ಬನ್ನಿ ಒಳಗೆ; ಪರವಾಯಿಲ್ಲ—ಯಾರೂ ಇಲ್ಲ" ಎಂಬ ಮಾತು ಅವನನ್ನು ಎಚ್ಚರಿಸಿತು.

ಮಹೇಶ್ವರ ಗಟ್ಟಿಮನಸ್ಸು ಮಾಡಿದ.

ಚಪ್ಪಲಿಯನ್ನು ಕಳಚುವುದರಲ್ಲಿದ್ದ ಅವನ ಕಾಲು ನೋಡಿ ರತ್ನ "ಪರವಾಯಿಲ್ಲ....ಒಳಗೆ ಬಿಡಿ" ಎಂದಳು.

ಚಪ್ಪಲಿ ಹಾಕಿಕೊಂಡೇ ಒಳಗೆ ಪ್ರವೇಶಿಸುತ್ತ ಮಹೇಶ್ವರ "ಅದೇನೋ 'ವಾಷ್ ಸ್ಟ್ಯಾಂಡ್' ಕಟ್ಟಿಸಿಕೊಡ್ಬೇಕೂಂತ ನಿಮ್ಮ ಆಳು...."

"ನೀವೇನು ಕಟ್ಟಿಸಿಕೊಡ್ಬೇಕಾದ್ದಿಲ್ಲ....ನಾನೇ ಕಟ್ಟಿಸಿಕೊಳ್ತೀನಿ.... ಅದಕ್ಕೆ ಜಾಗ ತೋರಿಸಿ, ತಮ್ಮ ಒಪ್ಪಿಗೆ ತೆಗೆದುಕೊಂಡ್ಬಿಡೋಣಾಂತ ಹೇಳಿ ಕಳಿಸಿದ್ದೆ. ಅವನು ಹಾಗೆ ಹೇಳಿಬಿಟ್ನೋ."

"ಇಲ್ಲ....ಸರಿಯಾಗೇ ಹೇಳಿದ....ಕಟ್ಟಿಸ್ಕೊಳ್ತಾರೆ....ನೀವು ಬಂದು ಸ್ವಲ್ಪ ಜಾಗ ನೋಡ್ಬೇಕಂತೇಂತ....ಹೇಳಿದ....ಮರೆತ್ಹೋಯ್ತು...."

"ಇದೇ ಇಲ್ಲೇ, ಈ ಮೂಲೇಲಿ, ಮಾರ್ಕ್ ಮಾಡಿದೀನಿ" ಎಂದು ರತ್ನ ಮಂಚದ ಎದುರಿನ ಒಂದು ಮೂಲೆಯ ಹತ್ತಿರ ಹೋಗಿ, ಗೋಡೆಯ ಮೇಲೆ ಕೈಯಿಟ್ಟು "ಇದೇ, ಇಲ್ಲಿ ಮಾರ್ಕ್ ಮಾಡಿದೀನಿ!" ಎಂದು ಬಾಗಿ ತೋರಿಸಿದಳು. ಆ ಗುರುತು ನೋಡುವುದಕ್ಕಾಗಿ ಮಹೇಶ್ವರ ಮೂಲೆಯ ಹತ್ತಿರ— ಇಲ್ಲ, ರತ್ನಳ ಹತ್ತಿರ ಹೋದ.

ಅವಳ ಎಡಗೈ, ಗೋಡೆಯ ಮೇಲಿನ ಅಡ್ಡಗೀರೊಂದನ್ನು ತೋರಿಸುತ್ತಿತ್ತು.

ಆದರೆ, ಬಾಗಿದ ಬಳ್ಳಿಯಂತಿದ್ದ ಅವಳ ದೇಹದಿಂದ ಅರಳಿದ ಹೂವಿನಂತಿದ್ದ ಮುಖದ ಆ ಎರಡು ಕಣ್ಣುಗಳು ರಸ ತುಂಬಿ ಈ ಮುಖವನ್ನೇ ನೋಡುತ್ತಿದ್ದುವು. ಆ ಹೃದಯದ ಪ್ರೇಮ ಕಾಮವಾಗಿ ಕಣ್ಣಿನಲ್ಲಿ ಮಿಡಿಯುತ್ತಿತ್ತು. ಈ ಕಣ್ಣು ಆ ಕಣ್ಣು ನೋಡಿದಾಗ ಅವಳ ತುಟಿ 'ಹ್ಞು' ಎಂದು ಕಿರುನಗೆ ನಕ್ಕಿತು.

ರೆಪ್ಪೆ ಮಿಟುಕಿಸುವುದರೊಳಗಾಗಿ ರತ್ನ ಮಹೇಶ್ವರನ ತೋಳಿನಲ್ಲಿದ್ದಳು....

ಎಷ್ಟೋ ದಿನಗಳ ಹಿಂದೆ ಅನುಭವಿಸಿದ ಮುತ್ತು ರತ್ನದಿಂದ ದೊರೆಯಿತು. ಧರ್ಮಪತ್ನಿ ನೀಡಿದ ಆ ಸುಖ ಮರೆತು ಬಹಳ ಕಾಲವಾಗಿತ್ತು.

ಈಗ, ಕಟ್ಟುಪಾಡಿಲ್ಲದ ಈ ಹೆಣ್ಣು ಅದೇ ಸುಖವನ್ನು ಮತ್ತೆ ನೀಡಿದಳು.

ಅದಕ್ಕಾಗಿ ಹಾತೊರೆದು, ಇವಳಿಗಾಗಿ ಕಾಮಿಸಿದ ಆ ಗಂಡುದೇಹ, ಹೆಂಡತಿಯೊಡನಿದ್ದುದಕ್ಕಿಂತ ಹೆಚ್ಚು ಆನಂದಪಟ್ಟಿತು.

ಎರಡು ದೇಹಗಳನ್ನು ಒಂದು ಮಾಡಿದ ಆ ಬಿಗಿಯ ಆನಂದವನ್ನು ರತ್ನ ಅದುವರೆಗೆ ಎಂದೂ ಅನುಭವಿಸಿರಲಿಲ್ಲ.

ಇಬ್ಬರ ಹೃದಯ ಒಂದಾಗಿ ಎಲ್ಲೋ ದೂರದಲ್ಲಿ, ದಿಗಂತದಲ್ಲಿ ಹಾರಾಡುತ್ತಿದ್ದುವು.

ಅವುಗಳಿಗೆ ತಿಳಿಯದಂತೆ ಆ ಎರಡು ದೇಹ, ಮಲ್ಲಿಗೆಯಂತಿದ್ದ ಹಾಸಿಗೆಯ ಮೇಲೆ ಬಿದ್ದಿದ್ದುವು.

“ಅಮ್ಮಣ್ಣೀ! ಅಮ್ಮಣ್ಣೀ!” ಎಂಬ ಕೂಗು ರತ್ನಳನ್ನು ಎಚ್ಚರಿಸಿತು.

ನಂಜುಂಡಿ ಮಹಡಿಯ ಮೆಟ್ಟಲು ಹತ್ತಿ ಮುಗಿಸಿ, ಕೋಣೆಯ ಬಾಗಿಲ ಹತ್ತಿರ ಬರುವವರೆಗೆ ನಾಲ್ಕು ಬಾರಿ ಹೀಗೆ ಕೂಗಿದ್ದ.

ರತ್ನ ಮಹೇಶ್ವರನ ತೋಳ ಬಲೆಯಿಂದ ಹೊರಗೆ ಬಂದಳು.

ಮಹೇಶ್ವರ ಗಾಬರಿಗೊಂಡು ಎದ್ದು ನಿಂತುಕೊಂಡ.

ಅವನ ಕಿವಿಗಳೆರಡೂ ಹೊರಗಿದ್ದುವು.

ನಂಜುಂಡಿ “ನಾಗರಾಜಪ್ನೋರು ಬಂದವ್ರೆ........ನಂಜಪ್ಪಶೆಟ್ರು ಹೋಗ್ಬಿಟ್ರಂತೆ ರಾತ್ರಿ!....ರೂಮ್ನಲ್ಲಿ ಕುಂತ್ಕೊಂಡವ್ರೆ....ಬರಬೇಕಂತೆ” ಎಂದು, ಸರಸರನೆ ಮೆಟ್ಟಲಿಳಿದು ಹೊರಟುಹೋದ.

ರತ್ನ ಬೇಗ ಕೋಣೆಗೆ ಬಂದಳು.

ಅವಳ ಮುಖ ಬದಲಾಯಿಸಿಬಿಟ್ಟಿತ್ತು.

“ಸ್ವಲ್ಪ ಇಲ್ಲೇ ಇರಿ, ಬರ್ತೀನಿ....ಈಗ ಬಂದ್ಬಿಟ್ಟೆ” ಎಂದು ಹೇಳಿ, ಕೋಣೆ ಬಿಟ್ಟು ಕೆಳಗೆ ಹೊರಟುಹೋದಳು.

ಕೆದರಿದ ಕ್ರಾಪು ಬಿಟ್ಟುಕೊಂಡ, ಮಾಸಲು ಪಂಚೆ ಉಟ್ಟುಕೊಂಡ, ಕೊಳೆಯ ಅಂಗಿ ಸಿಕ್ಕಿಸಿಕೊಂಡ ನಾಗರಾಜ ಕೆಳಗಿನ ಕೋಣೆಯಲ್ಲಿ ಕುಳಿತು ಆಗಲೇ ಐದು ನಿಮಿಷ ಕಳೆದಿತ್ತು.

ಕೋಣೆಯನ್ನು ಪ್ರವೇಶಿಸುತ್ತಲೇ ರತ್ನ “ಮಲಗಿಬಿಟ್ಟಿದ್ದೆ ಕಂಡ್ರಿ....ತುಂಬ ನಿದ್ದೆ ಬಂದುಬಿಟ್ಟಿತ್ತು........ವಿಷಯ ಕೇಳ್ದೆ” ಎಂದು ಅಲ್ಲಿಯೇ ಇದ್ದ ಬೆತ್ತದ ಕುರ್ಚಿಯ ಮೇಲೆ ಕುಳಿತುಕೊಂಡಳು.

“ಹ್ಞು....ಆಗ್ಹೋಯ್ತು....”—ಹೆತ್ತ ಕರುಳನ್ನು ಕಳೆದುಕೊಂಡ ಆ ಮಾತಿನಲ್ಲಿ ತಬ್ಬಲಿಯಾದ ನೋವೂ ಕಾಣಿಸಿಕೊಂಡಿತು.

"ಯಾವಾಗ ಹೋಗಿದ್ದು ?"

"ನಿನ್ನೆ ಮಧ್ಯಾಹ್ನ."

"ನಂಜುಂಡಿ ರಾತ್ರೀಂತಂದ ?"

"ಹೌದು, ರಾತ್ರೀಂತ್ಲೆ ಹೇಳಿದೆ.... ನಿನ್ನೆ ಸಾಯಂಕಾಲವೆಲ್ಲ ಈ ಕೆಲಸವೆ ಆಗ್ಹೋಯ್ತು. ಹೊರಗೆ ತಿಳಿಸಿದ್ದು ರಾತ್ರೀಂತ್ಲೆ."

"ಹಾಗಾದ್ರೆ ಅದೆಲ್ಲ ಸರಿಯಾಗಿ ನಡೀತೂನ್ನಿ."

"ಓಹೋ ಎಲ್ಲ ಆಗ್ಹೋಯ್ತು. ಆನಂದಿ ಸಹಾಯ ಮಾಡಿದ. ನಾನು ಅವನೊಬ್ಬನನ್ನೇ ನಂಬಿಕೊಂಡಿದ್ದು....ಅವನು ತುಂಬ ಸಹಾಯ ಮಾಡಿದ. ಸಬ್‌ರಿಜಿಸ್ಟ್ರಾರ್ರು ಮನೆಗೆ ಬಂದು ರಿಜಿಸ್ಟರ್ ಮಾಡಿಕೊಟ್ಟರು. ಅವರೇ ಅದ್ಯಾರಾರ್ದ್ದೋ ರುಜು ಕೂಡ ಹಾಕಿಸಿ ತಂದುಕೊಟ್ಟರು. ದೇವರ ದಯೆಯಿಂದ ನಾರಾಯಣರಾಯರು ಯಾಕೊ ಮನೇ ಕಡೇನೇ ಸುಳೀಲಿಲ್ಲ. ರಾತ್ರಿ ಒಂಭತ್ತು ಗಂಟೆಗೆ ಅಂಗಡಿ ಮುಚ್ಕೊಂಡು ಬಂದ್ರು. ಅಷ್ಟು ಹೊತ್ತಿಗೇ ಎಲ್ಲ ಆಗ್ಹೋಗಿತ್ತು ...ಆವಾಗತಾನೆ ಹೋಗ್ಬಿಟ್ರು ಅಂತ ಹೇಳಿಬಿಟ್ಟೆವು. ಲಚ್ಮ, ಬಸಪ್ಪ ಇವರಿಗೆ ಕೂಡ ತಿಳೀದ್ಹಾಗೆ ನಡೆದ್ಹೋಯ್ತು. ರಾತ್ರಿಯೇ ಅವರಿಗೆಲ್ಲ ಗೊತ್ತಾಗಿದ್ದು....ಆನಂದಿ ಎಲ್ಲ ಮಾಡಿಸಿಕೊಟ್ಬಟ್ಟ."

"ಏನಂತ ವಿಲ್ ಬರ್ಸಿದಾರೆ ?"

"ಇಷ್ಟೆ....ಎಲ್ಲ ಆಸ್ತೀನೂ ನನ್ನ ಒಬ್ಬನೇ ಮಗನಾದ ಇಂಥವನಿಗೆ ನನ್ನ ತರುವಾಯ ಸೇರತಕ್ಕದ್ದು. ಇದಕ್ಕೆ ಇನ್ಯಾರೂ ಹಕ್ಕುದಾರರಿಲ್ಲ—ನನ್ನ ದುರದೃಷ್ಟದಿಂದ ನಾನು ಬಾಯಿ ಕಳೆದುಕೊಂಡುಬಿಟ್ಟೆ. ಕೈಯ ಸ್ವಾಧೀನ ತಪ್ಪಿ ಹೋಯಿತು... ಆದ್ದರಿಂದ ನನ್ನ ಎಡಗೈ ಹೆಬ್ಬೆಟ್ಟಿನ ರುಜು ಮೂಲಕ ಈ ಮರಣ ಶಾಸನವನ್ನು ಈ ದಿನ ಬರೆದು, ರಿಜಿಸ್ಟರ್ ಮಾಡಿಸಿದೀನೀಂತ."

"ಸರಿ....ಮನೆಯಲ್ಲಿ ಕ್ಯಾಷ್ ಎಷ್ಟಿತ್ತು ?"

"ಇತ್ತು. ಅದು ನನಗೆ ಮೊದಲೇ ಗೊತ್ತಿತ್ತು. ಅದಿಲ್ದೇ ಇದ್ದಿದ್ರೆ ಈ ಕೆಲಸಾನೇ ಜರುಗುತ್ತಿರಲಿಲ್ಲ.....ಸಬ್‌ರಿಜಿಸ್ಟ್ರಾರ್‌ಗೆ ಆನಂದಿ ಮೂಲಕ ಅದರಲ್ಲೇ ಮೂರು ಸಾವಿರ ಕೊಟ್ಟಿದ್ದು....ಆನಂದಿಗೆ ನೂರು ರೂಪಾಯಿ ಕೊಟ್ಬಿಟ್ಟೆ ....ಉಳಿದ ಮೂರು ಸಾವಿರ ರೂಪಾಯಿಯನ್ನು ಸೇಫ್‌ನಲ್ಲೇ ಇಟ್ಟು ಬೀಗ ಹಾಕಿದೀನಿ....ಮನೇಲಿ ಲಚ್ಮ ಒಬ್ಬನನ್ನೇ ಬಿಟ್ಬಂದಿದೀನಿ....ನಾನು ಹೋಗ್ತೀನಿ

....ಕೆಲಸ ಮುಗಿದ ಕೂಡಲೆ ತಿಳಿಸು ಅಂತ ಹೇಳಿದ್ದಿ. ಆದ್ದರಿಂದ ಬಂದೆ...."

"ಇನ್ನು ಮುಂದಿನ ಕೆಲಸ ಎಲ್ಲ ಆಯ್ತು ?"

"ಎಲ್ಲ ಆಗ್ಹೋಯ್ತು. ಬೆಳಗಿನ ಜಾವವೇ ಮಣ್ಣುಮಾಡಿಬಿಟ್ಟೆವು. ಸಬ್‌ರಿಜಿಸ್ಟ್ರಾರ್ರು ಅದಕ್ಕೂ ಒಂದು ಉಪಾಯ ಹೇಳಿಕೊಟ್ಟದ್ರು........ನಮ್ಮಪ್ಪನ ಕೈಲಿ ಒಂದು ಕಾಗದಾನೂ ಬರಸ್ಕೊಂಡ್ಬಾಗ್ಮಾಡಿದೀವಿ. 'ನನ್ನ ದೇಹವನ್ನು ಸುಮ್ಮನೆ ಒಣಗಿಸಬೇಡಿ........ಕೂಡಲೆ, ಆದಷ್ಟು ಜಾಗ್ರತೆ ಮಣ್ಣುಮಾಡಿ. ಯಾವ ರೀತಿಯ ಮೆರವಣಿಗೆ, ಆಡಂಬರ ಇಲ್ಲದೆ ಈ ಕೆಲಸ ನಡೆದರೆ ನನ್ನ ಆತ್ಮಕ್ಕೆ ಶಾಂತಿ' ಅಂತ ಒಂದು ಬೇರೆ ಕಾಗದ ಬರಸಿ ಅದಕ್ಕೂ ಹೆಬ್ಬೆಟ್ಟಿನ ರುಜು, ಸಾಕ್ಷಿ ಹಾಕಿಸಿದಾರೆ........ನಾನು, ಆನಂದಿ, —ಎಲ್ಲ ಆದ ಮೇಲೆ ನಾರಾಯಣರಾಯ್ರು,ಅಂಗಡಿ ಆಳುಗಳಿಬ್ಬರು—ಇಷ್ಟೇ ಮಂದಿ ಇದ್ದೋರು...."

"ಓ....ಸರಿ. ಹಾಗಾದರೆ ಇದೆಲ್ಲ ಬಹಳ ಗುಟ್ಟಾಗಿರಲಿ....ಯಾರಿಗೂ ತಿಳಿಸಬೇಡಿ."

"ಛೆ ಛೆ, ನಂಗೊತ್ತಿಲ್ಲವೆ....ಯಾರಿಗೆ ಹೇಳ್ಬೇಕೊ ಅವರಿಗೆ ಹೇಳ್ತಾರೆ. ಸಿಕ್ಕೋರಿಗೆಲ್ಲ ಹೇಳ್ತಾರ್ಯೇ....ನಾ ಹೋಗ್ತೀನಿ....ನಮ್ಮಕ್ಕನಿಗೆ ಕಾಗದ ಬರೀಲಿಲ್ಲ ನಾನು. ನಾರಾಯಣರಾಯರೇ, ಚೆನ್ನಾಗಿರೊಲ್ಲ ಬರೀಬೇಕೂಂತ ಬರೆದು ಹಾಕಿದರು. ನಾಳೆ ನಾಡಿದ್ದರಲ್ಲಿ ಅವಳು ಬಂದುಬಿಡಬಹುದು.

"ಸರಿ...."

ನಾಗರಾಜ ಎದ್ದು ನಿಂತ. ರತ್ನ ಅವನಿಗಿಂತ ಮುಂಚೆ ಕೋಣೆಯಿಂದ ಹೊರಗೆ ಬಂದಳು.

ನಾಗರಾಜ, ಬಾಗಿಲಲ್ಲಿ ಬಿಟ್ಟಿದ್ದ ಚಪ್ಪಲಿ ಹಾಕಿಕೊಂಡು ವ್ಹೆರಾಂಡದ ಮೆಟ್ಟಲಿಳಿದ.

ರತ್ನ ಪಡಸಾಲೆಯಲ್ಲಿ ನಿಂತಿದ್ದ ನಂಜುಂಡಿಯನ್ನು ಕುರಿತು "ದೊಡ್ಡಮ್ಮ ಎದ್ದ ಕೂಡಲೆ ಈ ವಿಷಯ ತಿಳಿಸು ನಂಜುಂಡಿ. ನಾನು ಮಹಡಿ ಮೇಲಿರ್ತೀನಿ." ಎಂದು ಬೇಗ ಬೇಗ ಮಹಡಿಯ ಮೆಟ್ಟಲು ಹತ್ತಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು.

ಮಹೇಶ್ವರ ಮಂಚದ ಮೇಲೆ ಸುಮ್ಮನೆ ಕುಳಿತಿದ್ದ.

ರತ್ನ ಒಳಗೆ ಬಂದ ಕೂಡಲೆ "ಯಾರು ಹೋದದ್ದು ?" ಎಂದು ಕೇಳಿದ.

" ನಂಜಪ್ಪಶೆಟ್ಟರು—ದಿನಸಿ ಅಂಗಡಿ ನಂಜಪ್ಪಶೆಟ್ಟರು."

" ಬಹಳ ದಿವಸದಿಂದಲೂ ಖಾಯಿಲೆ ಇತ್ತು"

" ಹೌದು."

" ಓ........ಪಾಪ, ಅವರ ಮಗ ಅಷ್ಟೇನೂ ಬುದ್ಧಿವಂತನಲ್ಲ........ಬೇಕಾದಷ್ಟು ಆಸ್ತಿ ಇದೆ. ಅನುಭವಿಸೋಕೆ ದೇವರು ಶಕ್ತಿ ಕೊಟ್ಟಿಲ್ಲ."

" ನಿಜ........ಹೋಗಲಿ, ಅವರ ವಿಷಯ ನಮಗ್ಯಾಕೆ ಈವಾಗ. ಒಂದೆರಡು ಗಂಟೆ ಸುಖವಾಗಿ ಕಳೆಯೋಣ. ಇವತ್ತು ನಿಮಗೆ ಭಾನುವಾರ....ನಾಳೆಯಿಂದ ಬಿಡುವೇ ಇರುವುದಿಲ್ಲ, ಅಲ್ಲವೆ ? " ಎನ್ನುತ್ತ ರತ್ನ ಬಂದು ಪಕ್ಕದಲ್ಲಿ ಕುಳಿತು ಮಹೇಶ್ವರನ ಗುಂಗುರು ಕ್ರಾಪಿನ ಕೂದಲೆಳೆ ಬಿಡಿಸತೊಡಗಿದಳು. ವಿಶಾಲವಾದ ಅವಳ ಕಣ್ಣು ಕೈಗೆ ಸಿಕ್ಕಿದ ಒಂದು ಕೂದಲೆಳೆಯನ್ನೇ ದಿಟ್ಟಿಸಿ ನೋಡುತ್ತಿತ್ತು.

ಮಹೇಶ್ವರ ಅವಳ ಕಣ್ಣುಗಳನ್ನೇ ಎವೆಯಿಕ್ಕದೆ ನೋಡಿದ.

ಯೋಚನೆಗಳೆಲ್ಲ ದೂರ ಹೋದುವು.

ಎರಡು ದೇಹ ಒಂದಾದುವು.

*  *  *  *

ಇಬ್ಬರಿಗೂ ಎಚ್ಚರವಾದಾಗ ಕೋಣೆಯಲ್ಲಿ ನಸುಗತ್ತಲು ಕವಿದಿತ್ತು.

ನಂಜುಂಡಿ ಕೋಣೆಯ ಬಾಗಿಲು ಬಡಿಯುತ್ತಿದ್ದ.

ರತ್ನ ದಿಗ್ಗನೆದ್ದು, ಕಣ್ಣುಜ್ಜಿಕೊಂಡು ದೀಪ ಹೊತ್ತಿಸಿದಳು.

ನಂಜುಂಡಿ ಮತ್ತೆ " ಅಮ್ಮಣ್ಣೀ, ಅಮಣ್ಮೀ " ಎಂದು ಕೂಗಿದ.

" ಬಂದೆ ನಂಜುಂಡಿ ತಡಿ."

—ಮಹೇಶ್ವರ ಬೆಚ್ಚಿ ಕಣ್ಣುಬಿಟ್ಟ.

" ಓ, ಎಷ್ಟು ಹೊತ್ತಾಯ್ತೊ ! ನಾನು ಹೋಗ್ತೀನಿ ಇನ್ನು," ಎಂದು ಎದ್ದು ನಿಂತ. "ರತ್ನ ತಡೀರಿ....ಅಷ್ಟು ಸಲೀಸಾಗಿ ಹೋಗೋಕೆ ನಾ ಬಿಡೊಲ್ಲ....ಹೊರಗಡೆ ಯಾರೋ ಬಂದಿದಾರಂತೆ !........ಆಮೇಲೆ ಯಾರಾದರೂ ನಿಮ್ಮ ಗುರುತಿರೋರು ಬಂದುಬಿಟ್ಟಿದ್ದರೆ,—ನಿಮ್ಮನ್ನೇ ಹುಡುಕಿಕೊಂಡು ? " ಎಂದು ನಕ್ಕಳು.

" ಹೇಳ್ತೀನಿ........ಹೀಗೇ ಯಾವುದೋ ಒಂದು ಕೆಲಸ ಮಾಡಿಸಬೇಕಾ

ಗಿತ್ತು....ನೋಡೋಕೆ ಬಂದಿದ್ದೇಂತ."

" ಸರಿ....ಆಗಲಿ. ನಾನು ಸ್ವಲ್ಪ ಕೆಳಗೆ ಹೋಗ್ಬಿಟ್ಟು ಬರ್ತೀನಿ."

" ಹ್ಞ, ಬೇಗ."

ರತ್ನ ಪಡಸಾಲೆಗೆ ಬಂದಾಗ, ಕರಿಯಪ್ಪ ಪಡಸಾಲೆಯಲ್ಲಿದ್ದ ಕುರ್ಚಿಯ ಮೇಲೆ ಕುಳಿತು, ತನ್ನ ರುಮಾಲು ಹಿಡಿದುಕೊಂಡು ಅದರ ನೆರಿಗೆ ಸರಿಮಾಡುತ್ತಿದ್ದ.

ಲಕ್ಷಮ್ಮ ಅವನೆದುರಿಗಿದ್ದ ಕುರ್ಚಿಯ ಮೇಲೆ ಕುಳಿತಿದ್ದಳು.

ರತ್ನ ಮಹಡಿಯ ಮೆಟ್ಟಲಿಳಿದ ಕೂಡಲೆ, ಲಕ್ಷಮ್ಮ " ಆಗ್ಹೋಯ್ತಂತೆ—ಎಲ್ಲ ನೀನು ಊಹಿಸಿದಹಾಗೆ ! "

" ಏನು........ನಂಜಪ್ಪಶೆಟ್ಟರು ಹೋಗಿದ್ದು ?........ನಾ ಗ ರಾ ಜ ಪ್ಪ ಬಂದಿದ್ರು" ಎಂದಳು.

ಕರಿಯಪ್ಪ " ಬಂದಿದ್ದೂ ಆಯಿತು, ಹೋದದ್ದೂ ಆಯಿತು " ಎಂದ.

" ಎಲ್ಲಿಗೆ ? "

" ಜೈಲಿಗೆ."

" ಯಾಕೆ ? "

" ಗೊತ್ತೇ ಇದೆಯಲ್ಲ—ಹೆಣದ ಕೈಲಿ ಹೆಬ್ಬೆಟ್ಟೊತ್ತಿಸಿದ್ದಕ್ಕೆ ! "....ಪಾಪ, ಆ ಸಬ್‌ರಿಜಿಸ್ಟ್ರಾರ್ನ್, ಆನಂದೀನ್ನ ಕೂಡ ಅರೆಸ್ಟ್ ಮಾಡಿದಾರೆ ! "

" ನಿಂಗೆ ಯಾವಾಗ ಗೊತ್ತಾಯ್ತು ಕರಿಯಪ್ಪಣ್ಣ ? "

" ನನಗೆ ಇವತ್ತು ಟೇಷನ್ ಡ್ಯೂಟಿ ಬಿದ್ದಿತ್ತು. ಎರಡು ಗಂಟೆ ಹೊತ್ತಿಗೆ ಡೆಪ್ಯುಟಿ ಕಮಿಷನರಿಂದ ಆರ್ಡರ್ ಬಂತು. ಈಗ ಒಂದು ಗಂಟೆ ಆಯ್ತು, ಎಲ್ಲಾರನ್ನೂ ಅರೆಸ್ಟ್ ಮಾಡಿ. ಎಲ್ಲ ತಂತೀ ಮೇಲೆ ನಡೆದ್ಹೋಯ್ತು. ಈವಾಗ ಡೆಪ್ಯುಟಿ ಕಮಿಷಿನರು ಬರ್ತಾರೆ....ಹೆಣ ತೆಗಸಿ ಪರೀಕ್ಷೆ ಮಾಡ್ತಾರಂತೆ. ಆ ಜಾಗಕ್ಕಾಗಲೆ ಕಾವಲು ಹಾಕ್ಬಿಟ್ಟಿದಾರೆ."

" ಯಾರು ಕಂಪ್ಲೇಂಟ್ ಕೊಟ್ಟರೂ ? "

" ಇಲ್ಲಿಂದ ಯಾರೋ ಶಿವಮೊಗ್ಗಾಕ್ಕೆ ವೈರ್ ಮಾಡಿದಾರಂತೆ. ಶಿವಮೊಗ್ಗಾದಿಂದ, ನಂಜಪ್ಪಶೆಟ್ಟರ ಮಗಳು ಡೆಪ್ಯುಟಿ ಕಮಿಷನರಿಗೆ ಖೂನೀಂತ ಕಂಪ್ಲೇಂಟ್ ಕೊಟ್ಟಿದಾಳಂತೆ. ಗುಮಾಸ್ತೆ ಮೇಲೆ ತಿಳಿಸಿರೋ ಮೂರು ಜನನ್ನೂ

ಅರೆಸ್ಟ್ ಮಾಡಿದರು. ಸಬ್‌ರಿಜಿಸ್ಟ್ರಾರ್ ಏನೋ ಜಾಮೀನು ಕೊಟ್ಟಿದಾರಂತೆ ....ನಾಗರಾಜನ್ನ, ಆನಂದೀನ ಟೇಷನ್ನಿಗೆ ತಂದೀದಾರೆ."

"ನಾಗರಾಜಪ್ಪ ಏನಂತಾರೆ?."

"ಏನನ್ನೋದು! ಪೋಲೀಸ್ ಮುಖ ಕಂಡ ಕೂಡಲೆ ಅವನ ಬುದ್ಧಿ ಕೆಟ್ಟುಹೋಗಿಬಿಟ್ಟಿದೆ. ಹುಚ್ಚುಹುಚ್ಚಾಗಿ ಹರಟ್ತಾ ಇದಾನೆ........ಅದರಲ್ಲೂ ಇನ್‌ಸ್ಪೆಕ್ಟರು ಕಬ್ಬಿಣದ ಪೆಟ್ಟಿಗೆ ತೆಗಿಸಿ ವಿಲ್ ಕಿತ್ಕೊಂಡ್ಮೇಲೆ ಅವನು ಹುಚ್ಚನೇ ಆಗಿಬಿಟ್ಟಿದಾನೆ."

"ಏನಂತಾರೊ!"

"ಟೇಷನ್ ಎಲ್ಲ ಅವಂದೇ ಗಲಾಟೆ ಆಗಿಬಿಟ್ಟಿದೆ. ನಮ್ಮಪ್ಪನ ಆಸ್ತಿಗೆ ನೀವೆಲ್ಲ ಯಾರ್ರಿ ಹಕ್ಕುದಾರ್ರು?....ಅದ್ಯಾಕ್ರಿ ನನ್ನ ಅರೆಸ್ಟ್ ಮಾಡಿದ್ದು?.... ನಮ್ಮಪ್ಪ ವಿಲ್ ಮಾಡಿದಾನೆ, ವಿಲ್ಲು........ನೋಡ್ಕೊಳ್ಳಿ ಬೇಕಾದರೆ........ ಕೊಡ್ರಿ, ನನ್ನ ವಿಲ್ ಕೊಡ್ರಿ, ಅಂತ ಕಿರಿಚ್ತಾ ಇದಾನೆ....ಬಹುಶಃ, ನಾಳೆ ಬೆಳಗ್ಗೇ ಹೊತ್ತಿಗೆ ಶಿವಮೊಗ್ಗದಿಂದ ಅವರಕ್ಕ ಬರಬಹುದು. ಅಷ್ಟು ಹೊತ್ತಿಗೆ ಡೆಪ್ಯುಟಿ ಕಮಿಷನರೂ ಬರ್ತಾರೆ...."

"ಹಾಗಾದರೆ ಈ ಆಸ್ತಿಗೆಲ್ಲ ಯಾರಂತೆ ಹಕ್ಕುದಾರ್ರು?"

"ಅದೆಲ್ಲ ತೀರ್ಮಾನ ಆಗಿ ಎಷ್ಟೋ ದಿನ ಆಗಿಬಿಟ್ಟಿದೆಯಂತೆ. ಆ ಮುದುಕ ಜೀವಿಸಿರೋವಾಗ್ಲೆ ಒಂದು ವಿಲ್ ಮಾಡಿ ಅದಕ್ಕೆಲ್ಲ ಸರಿಯಾದವರ ರುಜು ಹಾಕಿಸಿ ಮುಗಿಸಿಬಿಟ್ಟಿತ್ತಂತೆ. ಈ ಬೆಪ್ಪಿಗೆ ಅದು ತಿಳೀದೆ ಏನೇನೋ ಹುಚ್ಚುಚ್ಚಾಗಿ ಮಾಡಿ ಸಿಕ್ಕಿಹಾಕ್ಕೊಂಡ್ಬಿಟ್ಟಿದೆ....ಸಧ್ಯ ನಾನು ಬಚಾವಾದೆ... ನನ್ನನ್ನೂ ಕರೆದಿದ್ದ. ನಾನು ಹೇಳಿಬಿಟ್ಟೆ. ನನ್ನ ಕೈಲಾಗೊಲ್ಲಪ್ಪ, ನಾನು ಬರೊಲ್ಲಾಂತ."

"ಸಧ್ಯ, ನಾವೂ ಬಚಾವಾದೆವು........ನಮ್ಮ ರತ್ನ ಸೂಚನೆ ಕೊಡದೇ ಹೋಗಿದ್ರೆ, ನಾವೂ ಕೋರ್ಟಿಗೆ ಹೋಗ್ಬೇಕಾಗಿತ್ತು........" ಲಕ್ಷಮ್ಮ ಮಗಳ ಬುದ್ಧಿಪ್ರಶಂಸೆಯ ಮಾತಾಡಿದಳು.

ರತ್ನ "ಪಾಪ, ನಾಗರಾಜಪ್ಪನೋರಿಗೆ ಬುದ್ಧಿ ಕೆಟ್ಟಿದೆಯಂತೆ?" ಎಂದಳು.

"ಬುದ್ಧಿ ಕೆಟ್ಟಿರೋದೇನು....ಹುಚ್ಚು ಹಿಡಿದಿದೆ. ನೋಡ್ಬೇಕು, ಅದೇನು

ಹೇಳಿಕೆ ಕೊಡ್ತಾನೋ ! " ಕರಿಯಪ್ಪ ಉತ್ತರ ಕೊಟ್ಟ.

" ಸರಿಯಪ್ಪ....ಹೋಗಲಿ ಒಂದು ಕತೆ ಮುಗಿಯಿತೊ ! "

" ಏನು ಕತೆ ? "

" ಪಾಪ ! "—ಸ್ಟೇಷನ್ನಿನಲ್ಲಿ ಹುಚ್ಚು ಹುಚ್ಚಾಗಿ ಹರಟುತ್ತಿದ್ದವನನ್ನು ನೋಡಿ ಬಂದಿದ್ದ ಕರಿಯಪ್ಪನ ಬಾಯಿ ಕನಿಕರದಿಂದ ಈ ಮಾತು ನುಡಿಯಿತು.

" ಸರಿ, ನಾನಿನ್ನು ಹೋಗ್ತೀನಿ....ಆಗಲೇ ಏಳೂವರೆ ಗಂಟೆ....ಇನ್ನೂ ಡ್ಯೂಟಿ ಮುಗಿದಿಲ್ಲ " ಎಂದು ಕರಿಯಪ್ಪ ರುಮಾಲನ್ನು ತಲೆಯ ಮೇಲಿಟ್ಟು ಕೊಳ್ಳುತ್ತ ಎದ್ದು ನಿಂತ.

ರತ್ನ ಮನಸ್ಸಿನಲ್ಲಿಯೇ " ಟೋಪಿ ಹೋಯ್ತು, ಟೋಪಿ ಬಂತು ಡುಂ ಡುಂ " ಎಂದುಕೊಳ್ಳುತ್ತ ಮಹಡಿಯ ಮೆಟ್ಟಲು ಹತ್ತಿದಳು.

ಮಹೇಶ್ವರ ಎದ್ದು ನಿಂತು ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿದ್ದ. ರತ್ನ ಒಳಗೆ ಬಂದ ಕೂಡಲೆ " ಯಾರು ಬಂದಿದ್ದೋರು ? " ಎಂದು ಕುತೂಹಲ ದಿಂದ ಕೇಳಿದ.

" ಯಾರೂ ಇಲ್ಲ ಕರಿಯಪ್ಪಣ್ಣ....ನಿಮಗ್ಗೊತ್ತಿಲ್ಲವೆ ? "

" ಗೊತ್ತು. ಏನಂತೆ ? "

" ಏನೂ ಇಲ್ಲ."

" ರತ್ನ ಬಾಚಣಿಗೆ ಕೊಡು. ಸ್ವಲ್ಪ ತಲೆ ಬಾಚ್ಕೋಳ್ತೀನಿ."

' ರತ್ನ ' ಎಂದು ಮೊದಲ ಬಾರಿ ಕರೆದ ಆ ತುಟಿಯನ್ನೇ, ಕಣ್ಣನ್ನೇ ದಿಟ್ಟಿಸಿನೋಡಿ ನಸುನಕ್ಕು ರತ್ನ " ಆ ಗೂಡಿನಲ್ಲಿದೆ. ಎಣ್ಣೇನೂ ಅಲ್ಲೇ ಇದೆ ಬೇಕಾದ್ರೆ " ಎಂದಳು.

ಮಹೇಶ್ವರ ಗೂಡಿನ ಬಾಗಿಲು ತೆರೆದು, ಎಣ್ಣೆ ಹಚ್ಚಿಕೊಂಡು, ಸೀಸೆ ಯನ್ನು ಅಲ್ಲಿಯೇ ಇಟ್ಟು ಬಾಚಣಿಗೆಯನ್ನು ಕೈಗೆ ತೆಗೆದುಕೊಂಡ.

ದೊಡ್ಡ ನಿಲುವುಗನ್ನಡಿಯ ಮುಂದೆ ನಿಂತು ತಲೆ ಬಾಚಿಕೊಳ್ಳುತ್ತಿದ್ದ ಅವನನ್ನು, ಹಾಸಿದ ಹಾಸಿಗೆಯ ಮೇಲೆ ದಿಂಬಿಗೆ ಒರಗಿ ಕುಳಿತಿದ್ದ ರತ್ನ, ನೋಡುತ್ತಿದ್ದಳು. ಮಹೇಶ್ವರನ ಬೆನ್ನು ಅವಳ ಕಡೆ ತಿರುಗಿದ್ದರೂ ಕನ್ನಡಿ ಯಲ್ಲಿ ಅವನ ಮುಖ ಕಾಣುತ್ತಿತ್ತು. ರತ್ನ ತನ್ನ ಹಿಂದಿದ್ದರೂ, ಕನ್ನಡಿಯಲ್ಲಿ ಅವಳು ಅವನ ಮುಂದಿದ್ದಳು. ತಲೆ ಬಾಚಿಕೊಳ್ಳುತ್ತಿದ್ದ ಮಹೇಶ್ವರ, ದಿಂಬಿಗೆ

ಮೊಳಕೈ ಊರಿ ಕುಳಿತಿದ್ದ ರತ್ನಳನ್ನು ಕನ್ನಡಿಯಲ್ಲಿ ನೋಡಿದ.

ರತ್ನ ಕೆಂಪು ಹರಳಿನ ತನ್ನ ಉಂಗುರವನ್ನು ಬೆರಳಿನ ಸುತ್ತ ಸುತ್ತುತ್ತ ಏನೋ ಯೋಚಿಸುತ್ತಿದ್ದಳು.

ಏನೋ ನೆನಪು ಮಾಡಿಕೊಂಡು, ತಲೆಯೆತ್ತಿ ಕನ್ನಡಿಯ ಕಡೆ ನೋಡಿದಳು. ಕನ್ನಡಿಯಲ್ಲಿದ್ದ ಮಹೇಶ್ವರ ಈ ಮುಖವನ್ನೇ ನೋಡುತ್ತಿದ್ದ.

ರತ್ನ ನಸುನಕ್ಕು ಎದ್ದು ಬಂದಳು.

'ನಾನು ಇಲ್ಲಿಗೆ ಬಂದು, ಹೀಗೆ ವರ್ತಿಸಿದ್ದು ತಪ್ಪು, ಅಸಹ್ಯ' ಎಂದು ಯಾವುದೋ ಒಂದು ವಿವೇಕ ಎರಡು ಬಾರಿ ಅವನನ್ನು ಎಚ್ಚರಿಸಿತ್ತು. ಆಗ ರತ್ನ ಕೋಣೆಯಲ್ಲಿರಲಿಲ್ಲ. ಆದರೆ, ಈ ಮಾಯಗಾತಿಯ ಕಣ್ಣಿನ ನೋಟ, ತುಟಿಯ ನಗು ಅಲೆಅಲೆಯಾಗಿ ಬಂದು ಆ ವಿವೇಕವನ್ನು ದೂರ ದೂರ ಒಯ್ದು ಬಿಟ್ಟಿತ್ತು.

ಅವಳ ದೇಹದ ಬಿಗಿತವನ್ನು ಅನುಭವಿಸಿ, ಅದೇ ಕನಸು ಕಾಣುತ್ತಿದ್ದ ಮಹೇಶ್ವರನ ತೋಳುಗಳು ಮತ್ತೆ ಅದೇ ಸುಖವನ್ನನುಭವಿಸಿದುವು.

ಎದೆಗೆ ಒತ್ತಿದ ಮುಖ ನಿಧಾನವಾಗಿ ಮೇಲಕ್ಕೆ ಸರಿಯಿತು. ಅರೆ ಮುಚ್ಚಿದ ಅವಳ ಕಣ್ಣು ರೆಪ್ಪೆಗೂದಲ ತೆರೆಯಿಂದ ಇವನ ಕಣ್ಣನ್ನೇ ನೋಡುತ್ತಿತ್ತು. ಅವಳ ಎಸಳಾದ ಆ ಕೆಂದುಟಿ 'ಬಾ, ಇದೊ ನಿನ್ನ ಪೀಠ' ಎಂದು ಈ ತುಟಿಯನ್ನು ಸ್ವಾಗತಿಸುತ್ತಿತ್ತು.

ಒಂದು, ಎರಡು, ಮೂರು—ಮೂರು ಬಾರಿ ಎರಡು ಮುಖಗಳೂ ಒಂದಾದುವು.

ಮಹೇಶ್ವರನ ತೋಳಿನಲ್ಲಿದ್ದ ರತ್ನಳ ಹೃದಯಕ್ಕೆ ರೆಕ್ಕೆ ಬಂದುಬಿಟ್ಟಿತ್ತು. ಅದೆಲ್ಲೋ ದೂರದಲ್ಲಿ ನಕ್ಷತ್ರಗಳ ಮಧ್ಯೆ ಮೈಮರೆತು ಹಾರಾಡುತ್ತಿತ್ತು. ಆ ಸುಂದರ ದೇಹ, ಅಪ್ಪಿದ ಗಂಡಿನ ಭೋಗವಸ್ತುವಾಗಿ ಬಿಟ್ಟಿತ್ತು.

ತನ್ನ ಮೃದುವಾದ ಕೆನ್ನೆಯನ್ನು ಎದೆಗೊತ್ತಿ ನಿಂತಿದ್ದ ರತ್ನಳನ್ನು ಕುರಿತು ಮಹೇಶ್ವರ 'ರತ್ನ' ಎಂದ.

ರತ್ನ ಎಚ್ಚೆತ್ತಳು.

"ನೀನು ನನಗೆ ತುಂಬ ಉಪಕಾರಮಾಡಿದಿ."

"ನೀವೂ ನನಗೆ ತುಂಬ ಉಪಕಾರ ಮಾಡಿದಿರಿ."

" ನಿನಗಾಗಿ ನಾನು ಹಾತೊರೆಯುತ್ತಿದ್ದೆ."

" ಈ ದೇಹವೂ ಅಷ್ಟೆ."

' ಓ ! ' ಎಂದು ಮಹೇಶ್ವರ, ಉಕ್ಕಿ ಬಂದ ಕಾಮದಿಂದ ಆ ದೇಹವನ್ನು ಬಿಗಿದಪ್ಪಿಕೊಂಡ.

" ರತ್ನಾ........ನಿನ್ನನ್ನು ಮದುವೆ ಆಗುವ ಯೋಗ ನನಗೆ ದೊರೆಯಲಿಲ್ಲ.

" ಯಾಕೆ ಇಲ್ಲ !........ಈಗ ? "

" ನನಗೆ ಮದುವೆ ಆಗಿದೆ ರತ್ನ."

" ಆದರೇನು ? ನಿಮ್ಮ ತಂದೆಗೂ ಮದುವೆ ಆಗಿರಲಿಲ್ಲವೆ ? "

" ಆಗಿತ್ತು. ಆದರೆ ನಿನ್ನನ್ನು ಹೆಂಡತಿ ಮಾಡಿಕೊಂಡಿದ್ದರೆ ಎನ್ನಿಸಿತು ........ಅದಕ್ಕೆ ಹಾಗಂದೆ."

" ಈಗೇನು........ನಾನು ತಮ್ಮ ದಾಸಿ........ಇದಕ್ಕಾಗಿ ಎಷ್ಟೋ ದಿನಗಳಿಂದ ತಪಸ್ಸು ಮಾಡುತ್ತಿದ್ದೆ. ನಾನು ಇಂದೇ ಈ ಸುಖ ಕಂಡಿದ್ದು."

' ಓ, ರತ್ನ! 'ಎಂದು ಆ ದುರ್ಬಲ ಹೃದಯದ ಮಹೇಶ್ವರ ಆ ಮಾಟಗಾತಿಯನ್ನು ಮೆಚ್ಚಿ ಮಣಿದ.

ಅವಳ ತೋಳ ತೆಕ್ಕೆಯಲ್ಲಿದ್ದ ರತ್ನ " ನಾವಿಬ್ಬರೂ....ನನಗೆ ಇನ್ನೂ ಮದುವೆ ಆಗಿಲ್ಲ....ನಾನು ಈ ಹೃದಯಕ್ಕೆ ಮಾತ್ರ ಮೀಸಲು....ಇದು ಎಷ್ಟೋ ದಿನದ ಕನಸು " ಎಂದಳು.

ಆ ಮಾತಿಗೆ ಮರುಳಾದ ಮಹೇಶ್ವರನ ಹೃದಯ ಆನಂದದಿಂದ ಉಬ್ಬಿ ಹೋಗಿತ್ತು.

ರತ್ನ ಅದೇಕೊ, ಮಹೇಶ್ವರನ ಎಡ ತೋಳನ್ನು ಬಿಡಿಸಿಕೊಂಡು ಅವನ ಅಂಗೈಯನ್ನು ತನ್ನ ಕೈಯಲ್ಲಿಟ್ಟುಕೊಂಡಳು.

ಅವಳೇನು ಮಾಡಬಹುದೆಂದು ಅವನ ಊಹೆಗೆ ಸಿಕ್ಕಲಿಲ್ಲ.

ರತ್ನ ತನ್ನ ಬೆರಳಿನಲ್ಲಿದ್ದ ಕೆಂಪು ಹರಳಿನ ಉಂಗುರವನ್ನು ತೆಗೆದು ಮಹೇಶ್ವರನ ಕಿರುಬೆರಳಿಗೆ ಹಾಕಿದಳು.

ಮಹೇಶ್ವರನಲ್ಲಿ ಮಿಂಚು ಹರಿಯಿತು.

ತಕ್ಷಣವೆ " ರತ್ನ, ತಡಿ " ಎಂದು ತನ್ನ ಬಿಳಿ ಹರಳಿನ ಉಂಗುರವನ್ನು

ಹೊರಗೆ ತೆಗೆಯುವಷ್ಟರಲ್ಲಿ, ರತ್ನಳ ಕೆಂಪು ಹರಳಿನ ಉಂಗುರ ಅವನ ಬೆರಳಿನಲ್ಲಿತ್ತು.

"ಇದೊ, ಇದು ಅದಕ್ಕೆ ಉತ್ತರ," ಎಂದು ಮಹೇಶ್ವರ ತನ್ನ ಉಂಗುರವನ್ನು ರತ್ನಳ ಎಡಗೈ ಬೆರಳಿಗೆ ಹಾಕಿದ.

ಅವಳು, ಸ್ವಲ್ಪ ದೊಡ್ಡದಾಗಿದ್ದ ಆ ಉಂಗುರವನ್ನು ತೆಗೆದು ಮಧ್ಯದ ಬೆರಳಿಗೆ ಧರಿಸಿಕೊಂಡಳು.

ಇಬ್ಬರ ಇಚ್ಛೆಯೂ ನೆರವೇರಿತು.

ಕೆಳಗೆ, ಪಡಸಾಲೆಯಲ್ಲಿದ್ದ ಗಡಿಯಾರ ಎಂಟು ಗಂಟೆ ಬಡಿಯಿತು.

"ರತ್ನ, ಇನ್ನು ನಾನು ಬರಲಾ?"—ಗಂಡ ಹೆಂಡತಿಗೆ ಹಾಕಿದ ಪ್ರಶ್ನೆಯಂತಿತ್ತು.

ಸರಿದು ನಿಂತು, ಸುಕ್ಕುಸುಕ್ಕಾದ ಜುಬ್ಬವನ್ನು ಸರಿಪಡಿಸಿಕೊಳ್ಳುತ್ತಿದ್ದ ಮಹೇಶ್ವರನನ್ನು ಕುರಿತು ರತ್ನ "ಮತ್ತೆ ಯಾವಾಗ?" ಎಂದಳು.

"ನೀನು ಕರೆಸಿಕೊಂಡಾಗ—ಅಲ್ಲ, ಕರೆದಾಗ."

"ಹಾಗೆಂದರೆ?"

"ನಿನ್ನನ್ನು ನೋಡಿದಾಗಲೆಲ್ಲ."

"ಅದೂ ನನಗೆ ಅರ್ಥವಾಗೊಲ್ಲ."

"ನನ್ನ ಕೈಯಲ್ಲೇ ಇದ್ದೀಯಲ್ಲ! ಯಾವಾಗ ಬಾ ಅಂದರೆ ಆವಾಗ ಬರ್ತೀನಿ...."

"ಓ....ಅರ್ಥವಾಯಿತು....ನಾನೂ ಹಾಗೆಯೇ, ನಿಮ್ಮನ್ನು ನೋಡಿದಾಗಲೆಲ್ಲ ನಿಮಗಾಗಿ ಸಿದ್ಧ."

"ಸರಿ, ಹೊತ್ತಾಯ್ತು, ನಾನು ಬರ್ತೀನಿ."

"ಎಂದು ಬರೋದು?"

"..........."

ಯೋಚನೆ ಮಾಡುತ್ತಿದ್ದವನನ್ನು ಹೊಡದೆಬ್ಬಿಸಿದಂತೆ "ದ್ವಿತೀಯ ವಿಘ್ನೆ ಮಾಡಬೇಡಿ" ಎಂಬ ಮಾತು ಬಂತು.

ಮಹೇಶ್ವರ ನಕ್ಕು ಒಪ್ಪಿದ.

ತನ್ನ ಜೀವನದಲ್ಲಿ ಮೊಟ್ಟಮೊದಲು ಅಂಥ ವಿಚಿತ್ರ ಅನುಭವ ಪಡೆದ ಆ

ದೇಹ ಮನೆಯ ಕಡೆ ಹೊರಟಿತು.

* * * *

ಮಹೇಶ್ವರ ಮನೆಯ ಪಡಸಾಲೆಯಲ್ಲಿ ಕಾಲಿಟ್ಟಾಗ, ಮಗು ಮಂಗಳ ಚಾಪೆಯ ಮೇಲೆ ಕುಳಿತು ಬೊಂಬೆಯೊಡನೆ ಆಟವಾಡುತ್ತಿದ್ದಳು.

ಗಂಗಮ್ಮ ಒಳಗಿದ್ದಳು.

ತಂದೆ ಬಂದುದನ್ನು ಕಂಡು ಮಗು "ಅಣ್ಣ" ಎಂದು ನಕ್ಕಿತು.

ಮಹೇಶ್ವರ ಕೋಣೆಯೊಳಗೆ ಹೋಗುತ್ತ "ಏನು ಮರೀ" ಎಂದುದು ಊಟದ ಮನೆಯಲ್ಲಿ ಮಕ್ಕಳಿಗೆ ತಟ್ಟಿ ಹಾಕುತ್ತಿದ್ದ ಗಂಗಮ್ಮನನ್ನು ಗಂಡ ಬಂದನೆಂದು ಎಚ್ಚರಿಸಿತು.

ಗಂಗಮ್ಮ ಕೋಣೆಗೆ ಬಂದಾಗ ಮಹೇಶ್ವರ ಜುಬ್ಬವನ್ನು ಬಿಚ್ಚಿ ಸ್ಟ್ಯಾಂಡಿನ ಮೇಲೆ ಹಾಕುತ್ತಿದ್ದ.

ಮಧ್ಯಾಹ್ನ ಅಂಗಡಿ ಇಲ್ಲದಿದ್ದರೂ ಭಾನುವಾರದ ದಿನ ಒಂದು ಗಂಟೆಗೇ ಮನೆಬಿಟ್ಟು, ರಾತ್ರಿ ಒಂಬತ್ತು ಗಂಟೆಗೆ ವಾಪಸು ಬಂದುದು ಅಪರೂಪವಾದುದರಿಂದ ಗಂಗಮ್ಮ,

"ಇದೇನು ಇಷ್ಟು ಹೊತ್ತು! ಸಿನಿಮಾಕ್ಕೆ ಹೋಗಿದ್ದಿರಾ?" ಎಂದು ಕೇಳಿದಳು.

"ಇಲ್ಲ....ಇಲ್ಲೇ ಯಾರೋ ಸ್ನೇಹಿತರ ಜೊತೆ........ ಮರಿ ಯಾಕೆ ಮಲಕ್ಕೊಂಡಿಲ್ಲ, ಇಷ್ಟೊತ್ತಾದ್ರೂ ಎದ್ದು ಕೂತಿದೆ?....ಅಮ್ಮ ಬಂದಳಾ ಹಳ್ಳಿಯಿಂದ?" ಎಂದು ಮಾತು ಮರೆಸಿ, ಪಡಸಾಲೆಯಲ್ಲಿ ನಡೆದು ಬರುತ್ತಿದ್ದ ಮಂಗಳೆಯನ್ನು ಎತ್ತಿಕೊಂಡ.

"ಐದು ಗಂಟೆವರೆಗೂ ಮಲಗಿಬಿಟ್ಟಿದ್ದಳು........ನಾನೂ ಮಲಗಿಬಿಟ್ಟಿದ್ದೆ ........ನಿದ್ದೆ ಬಂದಿಲ್ಲ........ಇನ್ನೂ ಊಟಾನೂ ಮಾಡಿಲ್ಲ ಅದು; ಗೊತ್ತೇ ಇದೆ, ರಾತ್ರಿ ಹನ್ನೊಂದು ಗಂಟೆ ಆದರೂ ಬಿದ್ಕೊಳಲ್ಲ........ಇಲ್ಲಿ ಕೊಡಿ, ತಟ್ಟೆ ಹಾಕಿದೀನಿ, ಶಿವಣ್ಣ ನೀಡ್ತಾನೆ....ಮಕ್ಕಳದೆಲ್ಲ ಮುಗಿದು ಬಿಡಲಿ. ನೀವೂ ಕೂತ್ಕೊಳ್ತೀರೇನು? ಬೆಳಗ್ಗೆ ಊಟಮಾಡ್ದೋರು!....."

"ಬೇಡ....ಹುಡುಗರ್ದೆಲ್ಲ ಆಗಲಿ....ಆಮೇಲೆ ಕೂತ್ಕೊಳ್ಳೋಣ....ಅಮ್ಮ ಬರಲಿಲ್ಲವಾ?"

" ಇಲ್ಲ........ನೋಡಬೇಕು, ನಾಳೆ ಬೆಳಗ್ಗೆ ಏನಾದರೂ ಬರ್ತ್ತಾರೋ ಏನೊ !........ಪಾಪ, ಅವರಿಗೆ ಮೈಯಲ್ಲಿ ಸರಿಯಾಗಿರಲಿಲ್ಲ ; ಹ್ಯಾಗಿದ್ದರೂ ಭಾನುವಾರ ಆಗಿತ್ತು, ನೀವೇ ಹೋಗಿದ್ದರೆ ?........

" ಸರಿ........ನಾನೆಲ್ಲಿ ಹೋಗಲಿ ! "

* * * *

ಗಂಗಮ್ಮ ಹುಡುಗರಿಗೆ ಊಟಮಾಡಿಸುತ್ತಿದ್ದಾಗ, ಮಹೇಶ್ವರ ಕೋಣೆಯಲ್ಲಿ ತನಗಾಗಿ ಮಂಚದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಮಲಗಿದ್ದ....

ಮನಸ್ಸು ಯೋಚನೆ ಮಾಡುತ್ತಿತ್ತು.

ಅಂದಿನ ಅನುಭವ ಅವನಿಗೆ ತುಂಬ ವಿಚಿತ್ರವಾಗಿತ್ತು.

" ಇಂಥ ಹೆಣ್ಣೂ ಉಂಟೆ ! " ಎನ್ನಿಸಿತು.

ಅನೇಕ ದಿನಗಳಿಂದ ಒಂದು ಹೃದಯಕ್ಕಾಗಿ ಹಾತೊರೆದ ಆ ಹೃದಯ ತನಗೆ ಬೇಕಾದುದು ಸಿಕ್ಕಿದ ಕೂಡಲೆ ಬಲವಾಗಿ ಅಪ್ಪಿಕೊಂಡಿತು.

ಇದರಲ್ಲಿ ವಿಚಿತ್ರವೇನಿದೆ ?

ಮನಸ್ಸು ಒಂದನ್ನು ಕಾಮಿಸಿದಾಗಲೆಲ್ಲ ಆ ವಸ್ತುವಿನೊಡನೆ ವ್ಯವಹಾರ ಮಾಡಿದಂತೆ, ಸ್ನೇಹಮಾಡಿದಂತೆ.

ಆ ದೇಹ ಈ ದೇಹವನ್ನು ಇಂದು ಮಾತ್ರ ಮುಟ್ಟಿದ್ದರೂ ಈ ಹೃದಯವನ್ನು ಆ ಹೃದಯ ನೂರಾರು ಬಾರಿ ಅಪ್ಪಿದೆ.

ಇದೂ ಹಾಗೆಯೆ, ಆ ಹೃದಯಕ್ಕಾಗಿ ಹಾತೊರೆದು ಅದನ್ನು ನೂರಾರು ಬಾರಿ ಆಲಿಂಗಿಸಿದೆ.

ಆದರೆ, ಇಂದು ಆ ಕನಸು ನನಸಾಯಿತು ; ತಪಸ್ಸು ಫಲ ಕೊಟ್ಟಿತು.

ರತ್ನ ನಿಜವಾಗಿಯೂ ಅತ್ಯಂತ ಸುಂದರಿ.

ಹೆಣ್ಣಿನ ಸುಖಕ್ಕಾಗಿ ಕಾಡಿ ಬೇಡಿ ನಿರಾಸೆಗೊಂಡಿದ್ದ ಈ ಗಂಡು ದೇಹ ಅತ್ಯಂತ ಸುಂದರ ಹೆಣ್ಣಿನೊಡನೆ ಮನದಣಿಯ ಆನಂದಿಸಿತ್ತು.

ವಿಚಿತ್ರವೊ, ಗಿಚಿತ್ರವೊ ! ಒಟ್ಟಿನ ಮೇಲೆ ಆಸೆ ಈಡೇರಿತು.

ತುಟಿಯ ಹತ್ತಿರ ಹಾರಿಬಂದ ಕಣಜದ ಹುಳು ಯೋಚನೆಯಲ್ಲಿದ್ದ ಮಹೇಶ್ವರನನ್ನು ಹೊಡೆದೆಬ್ಬಿಸಿತು.

ಎಡಗೈ ಬೀಸಿದಾಗ ಆ ಹುಳು, ಕೆಳಗೆ ಹಾಸಿದ್ದ ಗಂಗಮ್ಮನ ಹಾಸಿಗೆಯ

ಮೇಲೆ ಬಿದ್ದು ಮತ್ತೆ ಎಲ್ಲೋ ಹಾರಿಹೋಯಿತು.

ಈ ಯೋಚನೆ ಆ ಹಾಸಿಗೆಯ ಕಡೆ ಹರಿಯಿತು.

ಗಂಗೂ ಬಹಳ ಒಳ್ಳೆಯ ಹುಡುಗಿ ; ನೋಡುವುದಕ್ಕೂ ಚೆನ್ನಾಗಿದ್ದಾಳೆ, ಐದಾರು ವರುಷಗಳಿಂದ ತನ್ನ ಹೃದಯವನ್ನೂ, ದೇಹವನ್ನೂ ತನ್ನ ಗಂಡನಿಗೆ ಮೀಸಲಾಗಿಟ್ಟು ಅವನ ಸೇವೆ ಮಾಡುತ್ತಿದ್ದಾಳೆ.

ಇಂದು ನಡೆದ ಈ ಘಟನೆಯಿಂದ ಅವಳಿಗೆ ಅನ್ಯಾಯವಾಗಲಿಲ್ಲವೆ ?

—ಒಂದು ವಿವೇಕ ಈ ಪ್ರಶ್ನೆ ಹಾಕಿತು.

ಆದರೆ, ಇನ್ನೊಂದು ವಿವೇಕ ಅದಕ್ಕೆ ಉತ್ತರ ಹೇಳಿತು.

— ಇದು ಯಾರ ತಪ್ಪು ?

ನಿಜ. ಗಂಗೂ ಮದುವೆ ಮಾಡಿಕೊಂಡ ಹೆಂಡತಿ, ಸುಂದರಿ. ಗಂಡನ ಸೇವೆ ಮಾಡಿದ್ದಾಳೆ, ಮಕ್ಕಳ ತಾಯಿ ಆಗಿದ್ದಾಳೆ.

ಆದರೆ, ಅವಳು ಮಧ್ಯದಲ್ಲಿ ಸೋತುಬಿಟ್ಟಿದಾಳಲ್ಲ !

—ಮನೆ ಬಯಸಿದ ಗಂಡುಮಗನ ತಾಯಿಯಾಗಲಿಲ್ಲ.

ದೇಹಸುಖದ ದಾಹದಿಂದ ಬರುವ ಗಂಡನಿಗೆ ಹೆಂಡತಿಯಾಗಲಿಲ್ಲ.

ಹೀಗಾದರೆ, ಈ ದೇಹಕ್ಕೆ ಅನ್ಯಾಯವಾಗಲಿಲ್ಲವೆ ?

ಇಲ್ಲಿ ಯಾರು ತಪ್ಪಿತಸ್ಥರು ?

ಈ ಯೋಚನೆಯಲ್ಲಿ ಲೀನನಾಗಿ, ಮೇಲ್ಛಾವಣಿಯನ್ನೇ ನೋಡುತ್ತ ಮಲಗಿದ್ದ ಗಂಡನನ್ನು ಕುರಿತು ಗಂಗಮ್ಮ " ಇದೇನು ನೀವು ಈ ದಿನ ಆಕಾಶ ನೋಡ್ತಿದೀರಿ ? " ಎಂದಳು,

ಮಹೇಶ್ವರ ಎಚ್ಚೆತ್ತು ತಿರುಗಿ ನೋಡಿದ.

ಊಟಮಾಡಿಸಿ, ಆಗತಾನೆ ಕೈ ಬಾಯಿ ತೊಳಸಿದ ಮಗುವನ್ನೆತ್ತಿಕೊಂಡು ಗಂಗಮ್ಮ ಬಾಗಿಲಲ್ಲಿ ನಿಂತಿದ್ದಳು.

" ಇದೇನು ಆಕಾಶ ನೋಡ್ತಿದ್ರಲ್ಲಾಂದೆ ? "

" ನಾನೂ ನಿನ್ನ ಹಾಗೇ ಹಲಿಗೆ ನೋಡ್ತಿದ್ದೆ, ಆಕಾಶ ಅಲ್ಲ" ಎಂದು ಮಹೇಶ್ವರ ಹೆಂಡತಿ ಕೊಟ್ಟಿದ್ದ ಹಳೆಯ ಉತ್ತರವನ್ನೇ ಹೇಳಿದ.

" ಏಳ್ತೀರ, ಶಿವಣ್ಣಿ ನೀಡಿಬಿಡ್ತಾನೆ........ಇಬ್ಬರೂ ಒಟ್ಟಿಗೆ ಕೂತ್ಕೊಳ್ಳೋಣ. ಗೌರ ಮರೀನ್ನ ಮಲಗಿಸ್ತಾಳೆ....ಲಲಿತೂ, ನೀನೂ ಮಲಕ್ಕೊಮ್ಮಾ.

....ಬಾ, ಇಲ್ಲಿ. ಗೌರಾ, ಬಾಮ್ಮ; ಮರೀನ್ಮಲಗಿಸಿ ಹಾಡ್ಹೇಳ್ತ!" ಎಂದು ಮುಂದಿನ ಕೆಲಸವನ್ನು ಮಕ್ಕಳಿಗೊಪ್ಪಿಸಿ, ಗಂಗಮ್ಮ ಅಪರೂಪಕ್ಕೆ ಗಂಡ ನೊಡನೆ ಕುಳಿತು ಊಟಮಾಡಲು ಹವಣಿಸಿಕೊಂಡಳು.

ಮಹೇಶ್ವರನಿಗೆ ಏಕೊ, ಇದೂ ಸ್ವಲ್ಪ ವಿಚಿತ್ರವಾಗಿಯೇ ಕಂಡಿತು.

ಗಂಗಮ್ಮ ಅಷ್ಟು ರಸರಸವಾಗಿ ಈಚೆಗೆ ಮಾತಾಡುತ್ತಿರಲಿಲ್ಲ, ನಡೆಯು ತ್ತಿರಲಿಲ್ಲ. ಒಂದು ತಿಂಗಳಿಂದಂತೂ ಅವಳ ನಡತೆಯೇ ಬದಲಾಯಿಸಿ ಬಿಟ್ಟಿತ್ತು.

ಆದರೆ, ಈ ದಿನವೇಕೆ ಹಿಂದಿನ ಗಂಗಮ್ಮ ಆಗಿಬಿಟ್ಟಂತಿದೆ, ಎಂದು ಕೊಂಡ.

ಇಬ್ಬರೂ ಪಕ್ಕದಲ್ಲಿ ಕುಳಿತು ಊಟಮಾಡಿದರು.

ಗಂಗಮ್ಮ ಹಿಂದಿನ ಗಂಗೂ ಆಗಿದ್ದರೂ ಮಹೇಶ್ವರ ಹೊಸ ಮಹೇಶ್ವರ ನಾಗಿಬಿಟ್ಟಿದ್ದ.

ಅವನೇಕೊ ಹೆಚ್ಚು ಮಾತಾಡಲಿಲ್ಲ.

ಗಂಗಮ್ಮನೇ ಕೇಳಿದ ಹೇಳಿದ ಒಂದೆರಡು ಮಾತಿಗೆ ಹ್ಞು, ಉಂಟು, ಎಂಬ ಉತ್ತರ ಕೊಟ್ಟ.

ಊಟ ಮುಗಿಸಿ ಕೈತೊಳೆದುಕೊಂಡು ಮಹೇಶ್ವರ ಕೋಣೆಗೆ ಬಂದಾಗ ಪಡಸಾಲೆಯ ಗಡಿಯಾರ ಹತ್ತುಗಂಟೆ ಹೊಡೆಯುತ್ತಿತ್ತು.

ಒಳಗಿನ ಕೆಲಸವನ್ನೆಲ್ಲ ಮಾಡಿಕೊಂಡು, ಸರಿಯಾಗಿ ಬಾಗಿಲು ಹಾಕಿ ಕೊಳ್ಳುವಂತೆ ಶಿವಣ್ಣಿಗೆ ಹೇಳಿ, ಗಂಗಮ್ಮ ಎರಡು ಬಟ್ಟಲು ಹಾಲಿನೊಡನೆ ಕೋಣೆಯನ್ನು ಪ್ರವೇಶಿಸಿದಳು.

ಬಾಗಿಲ ತೆರೆಯನ್ನು ಓರೆಮಾಡಿ ನೋಡಿದಾಗ, ಮಹೇಶ್ವರ ಮಂಚದ ಮೇಲೆ ಮಲಗಿಕೊಂಡು ಏನೋ ಯೋಚಿಸುತ್ತಿದ್ದಂತೆ ಕಂಡಿತು.

ಕೆಳಗೆ ಹಾಸಿದ್ದ ತನ್ನ ಹಾಸಿಗೆಯ ಮೇಲೆ ಮೂವರು ಮಕ್ಕಳೂ ಮಲಗಿ ಬಿಟ್ಟಿದ್ದುವು. ಮಧ್ಯೆ ಮಲಗಿದ್ದ ಪುಟ್ಟ ಮಂಗಳೆಯ ಮೇಲೆ ತಮ್ಮ ಎಳೆಯ ತೋಳುಗಳನ್ನು ಹಾಕಿಕೊಂಡು ಗೌರ, ಲಲಿತ ಆ ಕಡೆ ಈ ಕಡೆ ಮಲಗಿ ನಿದ್ರಿಸುತ್ತಿದ್ದರು.

ಗಂಗಮ್ಮ ಹಾಲಿನ ಬಟ್ಟಲುಗಳನ್ನು ಮೂಲೆಯಲ್ಲಿದ್ದ ಮೇಜಿನ ಮೇಲಿಟ್ಟು

ಹೊರಗಿನ ದೀಪಗಳನ್ನಾರಿಸಿ, ಬಾಗಿಲು ಹಾಕಿಕೊಂಡು ಬರಲು ಹೋದಳು.

ಗಂಗಮ್ಮನ ಅಂದಿನ ನಡತೆಯನ್ನು ನೋಡಿದ ಮಹೇಶ್ವರನ ಮನಸ್ಸು ಎರಡು ಬಾರಿ ಪೇಚಾಡಿಕೊಂಡಿತು.

‘ ನೀನು ಅವಳಿಗೆ ದ್ರೋಹಮಾಡಿದೀಯೆ........ಅಸಹ್ಯದ ಕೆಲಸ ಮಾಡಿ ಬಿಟ್ಟಿದೀಯೆ........ಇನ್ನು ಅಂಥ ಕೆಲಸ ಮಾಡಬೇಡ, ಇವತ್ತಿಗೆ ಆಯಿತು. ಬೇರೆ ಹೆಣ್ಣಿನ ಚಿಂತೆ ಬಿಟ್ಟುಬಿಡು....ನಿನ್ನ ರತ್ನ ಇಲ್ಲಿದಾಳೆ ’ ಎಂದು ಬುದ್ಧಿ ಹೇಳಿತು.

ಆದರೆ, ಕೈ ತೊಳೆದುಕೊಂಡು ಟವಲಿನಿಂದ ಮುಖ ಒರಸಿಕೊಳ್ಳುತ್ತಿದ್ದಾಗ ದೀಪದ ಬೆಳಕಿನಲ್ಲಿ ಮಿಂಚಿದ ರತ್ನದ ಉಂಗುರ “ ನಾನೂ ನಿನಗಾಗಿ ಇದ್ದೇನೆ ........ನನಗೇಕೆ ದ್ರೋಹ ಮಾಡುತ್ತೀಯೆ ? ನಿನ್ನ ನ್ಯಾಯ ಎರಡು ಕಡೆಗೂ ಇರಲಿ ” ಎಂದು ಹೇಳಿತು.

ಮಹೇಶ್ವರ ಅದೇ ಯೋಚನೆಯಲ್ಲಿದ್ದ.

“ ಛೆ ! ಇದೇನು ಮಹಾ ಸಮಸ್ಯೆ. ಗಂಗೂ ಮನೆಯ ಹೆಂಡತಿ. ಈ ಮನೆಗಾಗಿ........ರತ್ನ ಹೊರಗಿನ ಹೆಂಡತಿ—ಈ ದೇಹದ ಸುಖಕ್ಕಾಗಿ. ಇವೆರಡೂ ಒಂದೇ ಹೆಣ್ಣಿನ ಎರಡು ರೂಪ ಎಂದು ಏಕೆ ಕಾಣಬಾರದು, ಗಂಗುವಿಗೂ ಸುಖ, ರತ್ನಳಿಗೂ ಸುಖ, ಈ ದೇಹಕ್ಕೂ ಸುಖ. ನಡೆಯಲಿ ನೋಡೋಣ, ಎಂದು ಸಮಾಧಾನ ತಂದುಕೊಂಡ.

ಗಂಗಮ್ಮ ಕೋಣೆಗೆ ಬಂದು, ಹಾಲು ಸರಿಮಾಡುತ್ತಿದ್ದಳು.

“ ತೊಗೊಳ್ಳಿ........ಏನು, ಬಹಳ ಯೋಜನೆ ಮಾಡ್ತಿದೀರಿ ಭಾನ್ವಾರಾನೂ ”

ಹಾಲಿನ ಬಟ್ಟಲನ್ನು ಹಿಡಿದು ಹತ್ತಿರ ನಿಂತಿದ್ದ ಗಂಗಮ್ಮನನ್ನು ನೋಡಿ, ಮಹೇಶ್ವರ “ ಏನಿಲ್ಲ........ಯೋಚನೆ ಇಲ್ಲ, ಗೀಚನೆ ಇಲ್ಲ........ಸುಮ್ನೆ” ಎಂದ.

ಗಂಡ ಹಾಲು ಕುಡಿಯುವಷ್ಟರಲ್ಲಿ ಆಕೆ ತಾನು ಮುಗಿಸಿ, ವೀಳೆಯದೆಲೆಯ ತಟ್ಟೆಯನ್ನು ತಂದು, ಎಲೆಗೆ ಸುಣ್ಣ ಹಚ್ಚಿ ಸಿದ್ಧಪಡಿಸಿಕೊಂಡಿದ್ದಳು.

ಗಂಡನಿಗೆ ಅಡಕೆ ಕೊಡಬೇಕೆಂದು ಅವನ ಕಡೆ ನೋಡಿದಾಗ, ಹಾಲಿನ ಬಟ್ಟಲು ಹಿಡಿದಿದ್ದ ಅವನ ಎಡಗೈ ಕಿರುಬೆರಳಿನಲ್ಲಿ ಕೆಂಪು ಹರಳಿನ ಉಂಗುರ

ಕಾಣಿಸಿತು.

" ಇದೇನೂಂದ್ರೆ ! ನಿಮ್ಮುಂಗರ ಏನಾಯ್ತು ? ಇದ್ಯಾವುದೋ ಬೇರೆ ಉಂಗುರ ಬಂದ್ಬಿಟ್ಟಿದೆ ! " ಎಂದು ಆಶ್ಚರ್ಯದಿಂದ, ಕುತೂಹಲದಿಂದ ಕೇಳಿದಳು.

ರತ್ನಳ ಮನೆಯಿಂದ ಬರುವಾಗ ದಾರಿಯಲ್ಲೇ, ' ಹೆಂಡತಿ ಈ ಪ್ರಶ್ನೆ ಹಾಕುತ್ತಾಳೆ. ಅದಕ್ಕೆ ಈ ಉತ್ತರ ' ಎಂದು ಎಣಿಕೆ ಹಾಕಿಕೊಂಡಿದ್ದ ಮಹೇಶ್ವರ " ಇದು ನನ್ನ ಸ್ನೇಹಿತಂದು....ಅದೇ ಯೋಚ್ನೆ ಮಾಡ್ತಿದ್ದೆ....ಏನೋ ಒಂದು ಪಂಥ ಕಟ್ಟಬಿಟ್ಟದ್ದೆ....ಸೋತ್ಬಿಟ್ಟೆ. ನನ್ನಉಂಗುರ ಅವನಿಗೆ ಹೋಯ್ತು, ಅವಳುಂಗುರ—ಥೂ, ಅವನುಂಗುರ ನನಗೆ ಬಂತು."

" ಇದೇನನ್ಯಾಯಾಂದ್ರೆ....ಅದು ಇದಕ್ಕಿಂತ ಎರಡರಷ್ಟಿತ್ತು. ಕಿರುಬೆರಳಿಗೆ ಕೂಡ ಬಿಗಿಯಾಗಿರೋ ಹಾಗಿದೆ ಇದು ! ಅದೂ ಅಲ್ದೆ ಅದು ವಜ್ರದ್ದು ! "

"—ಏನ್ಮಾಡೋದು ಏನೋ ಮಾತು ನಡೀತು....ಪಂಥ ಕಟ್ಟಬಿಟ್ಟೆವು. ಮಾತಿಗೆ ತಪ್ಪದೆ ಒಪ್ಪಿಕೊಳ್ಳಬೇಕಾಯ್ತು....ಇದೂ ಕೆಂಪಿಂದು....ಚೆನ್ನಾಗಿದೆ."

" ಹೌದು ರತ್ನ, ಚೆನ್ನಾಗಿದೆ....ತೊಗೊಳ್ಳಿ ಅಡಕೆ."

ಎಲೆಅಡಕೆ ಹಾಕಿಕೊಂಡ ಮೇಲೆ ಗಂಗಮ್ಮ ತಟ್ಟೆಯನ್ನು ಮೇಜಿನ ಮೇಲಿಟ್ಟು, ಬೆಡ್‌ಲ್ಯಾಂಪ್ ಹೊತ್ತಿಸಿ, ದೊಡ್ಡ ದೀಪ ಆರಿಸಲು ಹೊರಟಳು.

ಬಾಯಿಯಲ್ಲಿದ್ದ ಎಲೆಅಡಕೆಯನ್ನು ಅಗಿಯುತ್ತ, ಅವಳನ್ನೇ ನೋಡುತ್ತಿದ್ದ ಮಹೇಶ್ವರ, " ಕೆಳಗೆ ಜಾಗ ಇಲ್ದಿದ್ರೆ ಲಲಿತೂನ್ನ ಇಲ್ಲಿ ಮಲಗಿಸು ಬೇಕಾದ್ರೆ" ಎಂದ.

" ಏನ್ಬೇಡ, ಅವು ಅಲ್ಲೇ ಮಲಕ್ಕೊಳ್ಳಿ ಪಾಪ, ವಿಶಾಲವಾಗಿದೆ.... ಮಂಚದ ಮೇಲೆ ಇಕ್ಕಟ್ಟು."

" ಹಾಗಾದ್ರೆ ನೀನೆಲ್ಲಿ ಮಲಕ್ಕೊಳ್ತೀಯೆ ? "

"........"

" ಯಾಕೆ ಗಂಗೂ ? "

" ಯಾಕೂ ಇಲ್ಲ....ಇವತ್ಯಾಕೊ ತುಂಬ ಬೇಜರಾಗುತ್ತೇಂದ್ರೆ...."— ದೀಪ ಆರಿಸಿ ಮಂಚದ ಮೇಲೆ ಬಂದು ಕುಳಿತಳು.

ದೀಪ ಆರಿಸಿ, ಮಂಚದ ಮೇಲೆ ಬಂದ ಹೆಂಡತಿಯನ್ನು ನೋಡಿ ಮಹೇಶ್ವರನ ಮನಸ್ಸು ಏಕೊ ಕಲ್ಲಾಯಿತು. ಆ ವಿಚಿತ್ರ ಅನುಭವ ಈಚೆಗೆ ಅವನಿ

ಗುಂಟಾಗಿರಲಿಲ್ಲ.

"ದೀಪ ಯಾಕೆ ಆರಿಸಿಬಿಟ್ಟೆ, ಮಲಕ್ಕೋ ಹೋಗು ಹಾಗಾದರೆ"—ತನ್ನ ಗಂಡನ ಬಾಯಿಂದ ಅಪರೂಪವಾಗಿ ಬಂದ ಮಾತನ್ನು ಕೇಳಿ ಗಂಗಮ್ಮ ನಿಗೆ ಹೃದಯ ಕಿವುಚಿದಂತಾಯಿತು.

"ಯಾಕೇಂದ್ರೆ!" ಎಂದು ದೈನ್ಯದಿಂದ, ಮಲಗಿದ್ದ ಗಂಡನ ಬೆನ್ನಿನ ಮೇಲೆ ಕೈಯಿಟ್ಟು, ಮುಖಕ್ಕೆ ಮುಖ ಇಟ್ಟು ಕೇಳಿದಳು.

"ಯಾಕೂ ಇಲ್ಲ....ಸುಮ್ಮನೆ ಮಲಕ್ಕೋ ಹೋಗು"—ಹೂವಿನ ಹಾರ ದಂತೆ ಮೈಮೇಲಿದ್ದ ಆ ಕೈಯನ್ನು ಮಹೇಶ್ವರನ ಮರದ ಕೈ ಎತ್ತಿ ಬಿಸುಡಿತು.

ಗಂಗಮ್ಮನಿಗೆ ತಡೆಯಲಾರದಷ್ಟು ದುಃಖ ಬಂದುಬಿಟ್ಟಿತು.

"ನಾನು ಎಲ್ಲಿ ಮಲಗಿಕೊಳ್ಳಲಿ?"

"ಎಲ್ಲಿಯಾದರೂ ಮಲಗಿಕೊ. ಮನೆ ವಿಶಾಲವಾಗಿದೆ....ದೊಡ್ಡ ಪಡ ಸಾಲೆ ಇದೆ....ದೊಡ್ಡ ಜಮಖಾನೆ ಹಾಸಿದೆ."

ಹೂವಿನ ಮೇಲೆ ಪಟಪಟ ಬಿದ್ದ ಆ ಕಲ್ಲಿನೇಟನ್ನು ಸಹಿಸಲಾಗಲಿಲ್ಲ.

ದಿಗ್ಗನೆದ್ದು, ಕೆಳಗೆ ಹಾಸಿಗೆಯ ಮೇಲಿದ್ದ ಕಂಬಳಿಯನ್ನೆತ್ತಿಕೊಂಡು, ಕೋಣೆಯ ಬಾಗಿಲನ್ನು ಧಡಾರನೆ ಮುಚ್ಚಿ ಪಡಸಾಲೆಗೆ ಹೊರಟುಹೋದಳು, ಹೆಂಡತಿ ಗಂಗಮ್ಮ.

ಹೃದಯ ಎರಡಾಗಿ ಹಂಚಿ ಹೋಗಿದ್ದ ಈ ಗಂಡನಲ್ಲಿ ಹೆಂಡತಿಯ ಮೇಲಿನ ಪ್ರೇಮವೂ ಹಂಚಿ ಹೋಗಿತ್ತು. ದುರ್ಬಲಗೊಂಡ ಆ ಹೃದಯ ಹೆಂಡತಿಯ ಕಂಬನಿಗೆ ಕರಗಲಿಲ್ಲ; ಕಲ್ಲಾಗಿ ಮಲಗಿತ್ತು.

'ಸೇಡು, ಸೇಡು; ಇದು ಸೇಡು!" ಎಂದಿತು.

ಆದರೆ, ಏನೇನೋ ಎಣಿಕೆ ಹಾಕಿಕೊಂಡು ಬಂದ ಆ ಹೆಣ್ಣಿನ ಹೃದಯ ಕಂಬನಿಯಲ್ಲಿ ಬೀಳಬೇಕಾಯಿತು.

ಅವಳಿಗೆ ಎಷ್ಟು ಹೊತ್ತಾದರೂ ನಿದ್ದೆ ಬರಲಿಲ್ಲ.

ಇದೇಕೆ ಹೀಗಾಯಿತು?—ನನ್ನದೇ ತಪ್ಪು. ನಿನ್ನ ಗಂಡನಿಗೆ ನಿನ್ನಿಂದ ಹಲವು ಬಾರಿ ಈ ಅನುಭವ ಉಂಟಾಗಿದೆ.

ಇದು ಸೇಡು....ನಿನಗೆ ಆಗಬೇಕಾದದ್ದೆ.

ನೀನೇಕೆ ಅಂದು ಹಾಗೆ ಮಾಡಿದೆ!

ಗಂಡನನ್ನು ವಂಚಿಸುವ ಹೆಂಡತಿಯ ಪಾಡು ಇದೇ !

ನಿಜ. ನೀನು ಏನೇನೋ ಯೋಚನೆ ಮಾಡಿದಿ. ನಿಮ್ಮ ಫಲ ಪಾಪದ ಫಲ........ಅದರಿಂದ ಈ ಮನೆ ಉಳಿಯುವುದಿಲ್ಲ. ಅಳಿಸಿ ಹೋಗುತ್ತದೆ. ಈ ಮನೆ ಬೆಳಸುವಂಥದಂತೂ ಜನಿಸುವಂತಿಲ್ಲ........ಇರುವುದನ್ನು ಹಾಳು ಮಾಡುವುದಕ್ಕಿಂತ ಉಳಿಸುವ ಪ್ರಯತ್ನ ಮಾಡುವುದು ಸರಿ—ಸರಿ ನಿನ್ನ ಈ ಯೋಚನೆ.

ಆದರೆ, ನಿನ್ನ ಇನ್ನೊಂದು ಹೃದಯವೂ ಈ ಯೋಚನೆಯನ್ನೇ ಮಾಡು ವುದೆಂದು ತಿಳಿದೆಯೊ ? ನಿನ್ನ ಆಸೆ, ಅದರ ಆಸೆ ಎರಡೂ ಒಂದೆಯೆ ? ಆ ದೇಹ, ಈ ದೇಹ ಎರಡೂ ಒಂದೆಯೆ ?

ಅದಕ್ಕೇನು ಸಮಾಧಾನ ಹೇಳುತ್ತೀಯೆ ?

ನಿನ್ನ ಈ ಆಸೆಗಿಂತ ಅದರ ಆಸೆ ಅದಕ್ಕೆ ಹಿರಿದಾದರೆ ?

ಆಗ ಅದರ ಗತಿಯೇನು ?

ಛೆ ! ನೀನು ಮಾಡಿದ್ದು ತಪ್ಪು. ಹೆಂಡತಿ ಗಂಡನ ಗುಲಾಮಳು. ಗಂಡ ಹೇಳಿದಂತೆ ಕೇಳುವುದು ಅವಳ ಕರ್ತವ್ಯ, ಧರ್ಮ. ಹೋಗು........ ಎದ್ದು ಹೋಗಿ ನಿನ್ನ ಪತಿಯ ಕಾಲು ಕಟ್ಟಿಕೊ !

ಛೆ, ನಾನು ಅದನ್ನು ಮಾಡಲಾರೆ. ಈ ದೇಹಕ್ಕೂ ಒಂದು ಹೃದಯ ಇದೆ, ಮನಸ್ಸಿದೆ, ಬುದ್ಧಿ ಇದೆ. ಇವಕ್ಕೆ ತಕ್ಕ ಆಸೆಗಳಿವೆ. ಇವುಗಳಿಗೆಲ್ಲ ದ್ರೋಹಮಾಡಿ ಇನ್ನೊಂದು ದೇಹದ ಆಸೆ ತೀರಿಸಲು ಹೋಗುವುದು ನ್ಯಾಯವೆ ?

ಸರಿಯಲ್ಲ. ಎಲ್ಲ ದೇವರಿಗೆ ಬಿಡು....ಆದದ್ದಾಗಲಿ !

ಇನ್ನುಮೇಲೆ ದೇಹದ ದಾಹಕ್ಕೆ ಹಾಗೆ ಸೋಲಬೇಡ. ನೀನು ಹೀಗೆ ಸೋತುಬಿಟ್ಟರೆ, ಒಮ್ಮೆ ಮಾಡಿದ ನಿರ್ಧಾರ ಮಣ್ಣುಗೂಡುತ್ತದೆ.

ಒಂದು ದೃಷ್ಟಿಯಿಂದ ನೋಡಿದರೆ, ನೀನು ಒಮ್ಮೆ ನಿರಾಸೆಗೊಳಿಸಿದ ಗಂಡನಿಗೆ ದ್ರೋಹಮಾಡಿದಂತಾಗುತ್ತದೆ.

ನಿರಾಸೆಗೊಂಡ ಆ ದೇಹ ತನ್ನ ಆಸೆ ತೀರಿಸಿಕೊಳ್ಳಲು ಬೇರೆ ಹೂವನ್ನು ಹುಡುಕಿಕೊಂಡು ಹಾರಿಹೋದರೆ ?

ರತ್ನದ ಉಂಗುರ ನೋಡಿದ ಅವಳಿಗೆ ಈ ಯೋಚನೆ ಮೂಡಿದರೂ

ಗಂಡನ ಹೃದಯವನ್ನು ಚೆನ್ನಾಗಿ ಅರಿತ ಹೆಂಡತಿ ಅದಕ್ಕೆ ಗಮನ ಕೊಡಲಿಲ್ಲ.

ಛೆ, ನಿನ್ನದೇ ತಪ್ಪು........ಮನಸ್ಸು ಕಲ್ಲು ಮಾಡಿಕೊ; ನಿನ್ನ ಗಂಡ ನೀನು ಹೇಳಿಕೊಟ್ಟ ಪಾಠ ಕಲಿತಿದ್ದಾನೆ, ನೋಡು.

ಪಾಠ ಕಲಿಸಿದ ನೀನೇ ಸೋತರೆ ಇದೇ ಶಿಕ್ಷೆ........ತಿದ್ದಿಕೊ.

—ಹೀಗೆ ಮನಸ್ಸು ಏನೇನೋ ಯೋಚನೆ ಮಾಡುತ್ತಿರುವಾಗ ಗಂಗಮ್ಮ ನಿಗೆ ಯಾವಾಗ ನಿದ್ದೆ ಬಂತೋ ತಿಳಿಯದು.

## ೧೩

ಮಾರನೆಯ ದಿನ, ಮಹೇಶ್ವರ ಅಂಗಡಿಗೆ ಬಂದ ಒಂದು ಗಂಟೆಯೊಳ ಗಾಗಿ ಐದಾರು ಜನರ ಬಾಯಿಯಲ್ಲಿ ನಂಜಪ್ಪಶೆಟ್ಟರ ಮನೆಯ ಕತೆ ಕೇಳಿದ್ದ. ಹೋಟಲಲ್ಲಿ, ಪಕ್ಕದ ದರ್ಜಿ ಅಂಗಡಿಯಲ್ಲಿ, ಹತ್ತಿರದ ಚೌಕದಲ್ಲಿ ಎಲ್ಲೆಲ್ಲೂ ಅದೇ ಮಾತು, ನಿನ್ನೆಯಿಂದ ಊರಿನಲ್ಲಿ ಎಲ್ಲರ ಬಾಯಲ್ಲೂ ಅದೇ ಕತೆ.

ಪದ್ಧತಿಯಂತೆ ಪತ್ರಿಕೆ ಓದಲು ಹತ್ತು ಗಂಟೆಯ ಹೊತ್ತಿಗೆ ಬರುತ್ತಿದ್ದ ನಂಜುಂಡಪ್ಪನವರು ಹನ್ನೊಂದು ಗಂಟೆಗೆ ಬಂದುದನ್ನು ಕಂಡು ಮಹೇಶ್ವರ,

"ಇದೇನು ಇವತ್ತು ಇಷ್ಟು ಲೇಟು, ನಿನ್ನೆ ಭಾನುವಾರಾಂತ್ಲೇ?" ಎಂದು ಕೇಳಿದ.

"ಅಲ್ಲ—ಗೊತ್ತೇ ಇದೆಯಲ್ಲ........ನಂಜಪ್ಪಶೆಟ್ಟರ ಕತೆ."

"ಅವರ ಕತೆಯೋ, ಅವರ ಮಗನ ಕತೆಯೋ?"

"ಅವರ ಕತೆ ಮುಗೀತು, ಅವರ ಮಗನ ಕತೆ ಷುರುವಾಗಿರೋದು."

"ಅವನನ್ನು ಅರೆಸ್ಟ್ ಮಾಡಿದಾರಂತೆ?"

"ಹೌದು. ಅವನ್ನ, ಆಮೇಲೇ........ಆ ಅಗ್ರಹಾರದ ಶಾಸ್ತ್ರಿ ಇದಾ ನಲ್ಲ ಅವನ ಮಗನ್ನ: ಸಬ್‌ರಿಜಿಸ್ಟ್ರಾರ್ನ್ನ ಮಾಡಿತ್ತು. ಜಾಮೀನಿನ ಮೇಲೆ ಬಿಟ್ಟಿದಾರಂತೆ!"

"ಹಾಗಾದರೆ, ಅವರ ಕೆಲಸ ಹೋಯ್ತು?"

"ಹೋದ್ಹಾಗೆ........ತಲೆಯೇ ಹೋಗೋ ಹಾಗೆ ಮಾಡಿರೋವಾಗ ಕೆಲಸ ಉಳಿಯುತ್ತ್ಯೇ?"

"ಅಂಥಾದ್ದೇನು—ಲಂಚ ತೊಗೊಂಡ್ರೂಂತ್ಲೊ? ಎಷ್ಟು ತೊಗೊಂಡಿ

ದಾರಂತೊ ?"

"ಮೂರು ಸಾವಿರ ರೂಪಾಯಂತೆ!........ಇಲ್ಲಿ ಲಂಚದ್ದೊಂದೇ ಅಲ್ಲ ........ಲಂಚದ್ದು, ಮೋಸದ ವಿಲ್ ರಿಜಿಸ್ಟರ್ ಮಾಡಿಸಿದ್ದು, ಅದೆಲ್ಲ ಮುಖ್ಯ ವಾಗಿಲ್ಲ, ಖೂನಿ ಅಂತ ಆಗಿರೋದು.........ನಿನಗ್ಗೊತ್ತೇ ಇಲ್ವೆ ? ಮತ್ತೆ ಯಾಕೆ ಅವರ್ನೆಲ್ಲ ಕೂಡಲೆ ಅರೆಸ್ಟ್ ಮಾಡಿ, ಆ ಹೆಣ ಹೂಳಿದ್ದ ಜಾಗದಲ್ಲಿ ಪೋಲೀಸ್ ಕಾವಲು ಹಾಕಿದ್ದು ? ನಿನ್ನೆ ರಾತ್ರೀನೇ ಊರೆಂಬೋ ಊರಿಗೆಲ್ಲ ಪಬ್ಲಿಕ್ ಆಗ್ಹೋಗಿದೆ ?"

"ನಂಗೂ ಗೊತ್ತಾಯ್ತು. ಬೀದೀಲೀ ಯಾರ‍್ಯಾರೋ ಮಾತಾಡ್ಕೊ ಳ್ತಿದ್ರು........ಆದರೆ, ನಿನ್ನೆ ಭಾನುವಾರ ನೋಡಿ, ಅಂಗಡೀ ಕಡೆ ಬರ‍್ಲಿಲ್ಲ........ ಸಾಯಂಕಾಲ ಎಲ್ಲೂ ಹೋಗಲಿಲ್ಲ, ಪೇಪರುಗಳೂ ಇಲ್ಲ ; ಆದ್ರಿಂದ ಡೀಟೆಲ್ ಗೊತ್ತಾಗಲಿಲ್ಲ."

"ನಿನ್ನೆ ಸಾಯಂಕಾಲವೇ ಎಲ್ಲ ಗೊತ್ತಾಗ್ಹೋಯ್ತು !........ಬಹಳ ದೊಡ್ಡ ಪ್ಲಾಟಂತೆ ಅದು........ಆ ನಾಗರಾಜನ ಸೂಳೆ ರತ್ನ ಇದಾಳಲ್ಲ— ಲಕ್ಷಮ್ಮನ ಮಗಳು, ಅವಳ ಕೈಯೂ ಇದರಲ್ಲಿದೇಂತ ಅವಳನ್ನೂ ಅರೆಸ್ಟ್ ಮಾಡಿದಾರೇಂತ ಸುದ್ದಿ ಹರಡಿಬಿಟ್ಟಿತ್ತು........ಆಮೇಲೆ ಗೊತ್ತಾಯ್ತು ಅದು ಸುಳ್ಳೂಂತ........ಆದರೂ ಅವಳೂ ಸೇರಿಕೊಂಡಿದ್ದಾಳೇಂತ ಜನ ಹೇಳೋದು."

"ಓ........ಈಗೇನು, ಯಾರಂತೆ ಕಂಪ್ಲೇಂಟು ಕೊಟ್ಟಿದ್ದು ?"

"ಇನ್ಯಾರು ಕೊಡ್ತಾರೆ, ನಂಜಪ್ಪಶೆಟ್ಟರ ಮಗಳು !....ಆದರೆ, ಇಲ್ಲಿಂದ ಅವಳಿಗೆ ಯಾರು ತಂತಿ ಕೊಟ್ರೂನ್ನೋದು ಪಬ್ಲಿಕ್ ಆಗಿಲ್ಲ. ಪೋಸ್ಟಾಫೀಸಿ ನಲ್ಲಿ ಅದನ್ನು ಗುಟ್ಟುಮಾಡಿಬಿಟ್ಟಿದಾರಂತೆ !........ಜನ ಆಡ್ಕೊಳ್ತಿರೋದು ಅವ ರಂಗಡಿ ಗುಮಾಸ್ತ ನಾರಾಯಣರಾಯನೇ ಕೊಟ್ಟಿದಾನೇಂತ........"

"ಡೆಪ್ಯುಟಿ ಕಮಿಷನರು ಬಂದ್ರಂತೊ ?"

"ಓಹೊ ! ನಿನ್ನೆ ರಾತ್ರೀನೆ ಬಂದರಂತೆ........ಬೆಳಗ್ಗೆ, ಶ್ಮಶಾನಕ್ಕೆ ಹೋಗಿ, ಹೆಣಾನ್ನ ಹೊರಗೆ ತೆಗಸಿ, ಡಾಕ್ಟರಿಂದ ಪೋಸ್ಟ್‌ಮಾರ್ಟಂ ಮಾಡಿಸಿ, ಎಡಗೈ ಹೆಬ್ಬೆಟ್ಟಿನ ಗುರುತು ತೊಗೊಂಡು ಉಳಿದ ಬೆಟ್ಟಿನ ಗುರುತುಗಳೆಲ್ಲ ತೊಗೊಂಡು, ಮಹಜರ್ ನಡಸಿ, ಆ ಹೆಣಾನ್ನ ಅವರ ಮಗಳ ವಶಕ್ಕೆ ಒಪ್ಪಿಸಿದ ರಂತೆ."

" ಅವರ ಮಗಳು ಬಂದಿದಾಳೊ ? "

" ಓಹೊ, ನಿನ್ನೆ ಸಂಜೇನೆ ಟ್ಯಾಕ್ಸಿ ಮಾಡ್ಕೊಂಡು ಮಗಳು ಅಳಿಯ ಬಂದುಬಿಟ್ಟರಂತೆ."

" ಇಷ್ಟೆಲ್ಲ ನಡೆದುಬಿಟ್ಟಿದೆಯೊ ! "

" ಇದು ಬಹಳ ದೊಡ್ಡ ಕೇಸಾಗುತ್ತೆ ಮಹೇಶ್ವರ,....ಖೂನೀಂತ ಒಂದು. ಅದಲ್ಲ, ಖಾಯಿಲೆ ಇತ್ತು, ಅವನಾಗವನೆ ಸತ್ತ ಅನ್ನೋದು ರುಜುವಾತಾದ್ರೆ ಮೋಸದ ವಿಲ್ ಮಾಡಿರೋ ಕೇಸು ಮುಂದುವರಿಯುತ್ತೆ. ಆ ಮುದುಕ ಮೊದಲೇ ಸರಿಯಾಗಿ ವಿಲ್ ಬರೆದುಬಿಟ್ಟಿದೆಯಂತೆ. ಈಗಾಗಲೆ ಅದು ಆಗಿ ಎರಡು ತಿಂಗಳಾಗಿದೆಯಂತೆ. ರಿಜಿಸ್ಟರ್ ಆಗಿರಲಿಲ್ಲವಂತೆ, ಅಷ್ಟೆ."

" ಓ, ಹಾಗಾದರೆ ಇದು ದೊಡ್ಡ ರಾಮಾಯಣಾನ್ನಿ."

" ರಾಮಾಯಣ ಅಲ್ದೆ, ಇದರಲ್ಲಿ ಇನ್ನೂ ಯಾರ್‍ಯಾರ ಕೈವಾಡ ಇದೆಯೊ! ನಂಜಪ್ಪಶೆಟ್ಟರ ಮನೆ ಸೀಲುಮಾಡಿಬಿಟ್ಟಿದಾರೆ, ಅಂಗಡೀನೂ ಸೀಲುಮಾಡಿಬಿಟ್ಟಿದಾರಂತೆ !....ನೋಡ್ಬೇಕೇನೇನಾಗುತ್ತೊ ! "

" ಈವಾಗ ಕೇಸ್ಮಾಡಿದ್ರೆ, ಈ ನಾಗರಾಜ ಹ್ಯಾಗೆ ಲಾಯರಿಡ್ತಾನೆ ? "

" ನೋಡ್ಬೇಕು, ಅದೇನ್ಮಾಡ್ತಾನೊ ! ನಾಗರಾಜ ಒಬ್ನೇಂತ ಹ್ಯಾಗೆ ಹೇಳ್ತೀಯ ! ಆ ಆನಂದೀನ್ನೋನು ಸಿಕ್ಕಿ ಹಾಕ್ಕೊಂಡಿದಾನೆ. ಇವರಿಬ್ಬರೂ ಸೇರಿ ಯಾರ್‍ಯಾರ ಹೆಸರು ಹೇಳ್ತಾರೊ ! ಇನ್ನೊಂದೆರಡು ಮೂರು ದಿನ ಹೋಗಬೇಕು, ಆಗ ಎಲ್ಲ ಹೊರಗೆ ಬರುತ್ತೆ—ಇವತ್ತೇನು ಯಾವುದೂ ಪೇಪರಿಲ್ಲ ? "

" ಇಲ್ಲ....ಇನ್ನೂ ಬೆಂಗಳೂರು ಬಸ್ಸು ಬಂದಿಲ್ಲವಲ್ಲ ? "

" ಸರಿ " ಎಂದು ರಸ್ತೆಯ ಕಡೆ ನೋಡುತ್ತ, ತೊಡೆ ತುರಿಸಿಕೊಳ್ಳುತ್ತಿದ್ದ ನಂಜುಂಡಪ್ಪನವರು " ಅರೆ !....ಲೋ ಕೇಶವಮೂರ್ತೀ ! ಒಂದ್ನಿಮಿಷ ಬಾರಪ್ಪೋ ! " ಎಂದು ಕೂಗುತ್ತ ಎದ್ದು ಚಪ್ಪಾಳೆ ಬಡಿದು ಅಂಗಡಿಯ ಎರಡು ಮೆಟ್ಟಿಲಿಳಿದರು.

ಬಿಳಿಯ ಜುಬ್ಬ, ಪಾಯಿಜಾಮು, ಖಾದಿ ಟೋಪಿ ಹಾಕಿಕೊಂಡ ಕೇಶವ ಮೂರ್ತಿ ಇವರ ಕೂಗು ಕೇಳಿ, ಮಾದಪ್ಪನವರ ಅಂಗಡಿಯ ಕಡೆಗೆ ತಿರುಗಿದ.

ಆತ ಹತ್ತಿರ ಬಂದಾಗ ನಂಜುಂಡಪ್ಪನವರು, " ಇವತ್ತ್ಯಾವುದೂ ಪೇಪರಿಲ್ಲಾಂತಂದೆ ಈವಾಗ, ನೂಸ್ ಪೇಪರ್ನಪ್ಪಾನೇ ಎದುರಿಗೆ ಸಿಕ್ಕಿದ ಹಾಗಾಯ್ತು"

ಎಂದು ನಕ್ಕರು.

ಕೇಶವಮೂರ್ತಿ " ಏನು ಸಮಾಚಾರ ? " ಎಂದ.

" ಇದೊಳ್ಳೆ ತಮಾಷೆ! ನಾವು ನಿನ್ನಿಂದ ಸಮಾಚಾರ ತಿಳ್ಕೊಳ್ಳೋಣಾಂತ ಕರೆದರೆ ನಮ್ಮನ್ನೇ ಏನು ಸಮಾಚಾರಾಂತ ಕೇಳ್ತಿಯಲ್ಲಪ್ಪೋ ! "

" ಏನು ಸಮಾಚಾರ ಅಂತ ಕೇಳೋದು ನಮ್ಮ ಕಸಬು ಸ್ವಾಮಿ."

" ಓ....ಸರಿಕಣಪ್ಪ....ಒಂದು ನಿಮಿಷ ಕುಂತ್ಕೊ, ನಂಜಪ್ಪಶೆಟ್ಟರ ಕತೆ ಒಸಿ ಹೇಳ್ಬಿಟ್ಟು ಹೋಗ್ತೀಯಂತೆ."

" ಇಲ್ಲ ಇಲ್ಲ ...ನಂಗೆ ಪುರುಸೊತ್ತೇ ಇಲ್ಲ. ಡೆಪ್ಯುಟಿ ಕಮಿಷನರ್ ಬೇರೆ ಬಂದ್ಬಿಟ್ಟಿದಾರೆ....ನಾನಿನ್ನೂ ನ್ಯೂಸೇ ಕಳಿಸಿಲ್ಲ ನಮ್ಮಾಫೀಸಿಗೆ....ಈಗೊಂದು ಬಸ್ ಹೋಗುತ್ತೆ....ಅದರಲ್ಲಿ ಕಳಿಸೋಣಾಂತ."

" ಬಾ ಪರವಾಯಿಲ್ಲ, ಒಂದು ನಿಮಿಷ ಹೋಗ್ತೀಯಂತೆ ! "

ಕರೆಸ್ಪಾಂಡೆಂಟ್ ಕೇಶವಮೂರ್ತಿಗೂ ಮಹೇಶ್ವರನಿಗೂ ಅಷ್ಟು ಸ್ನೇಹವಿಲ್ಲದಿದ್ದರೂ ಸಾಕಷ್ಟು ಪರಿಚಯ ಇತ್ತು. ಮಹೇಶ್ವರನೂ " ಬನ್ನಿ ಸಾರ್ ಪರವಾಯಿಲ್ಲ " ಎಂದ ಮೇಲೆ ಕೇಶವಮೂರ್ತಿ ಓಳಗೆ ಬಂದು, ಖಾಲಿ ಇದ್ದ ಸುಂದರ್ ಕುರ್ಚಿಯ ಮೇಲೆ ಕುಳಿತ.

ಸುದ್ದಿಯ ಹುಚ್ಚು ಹಿಡಿದ ನಂಜುಂಡಪ್ಪನವರು, ತಮ್ಮ ಕಣ್ಣು ಮುಂದೆ ಆಡಿ ಬೆಳೆದ ಕೇಶವಮೂರ್ತಿಯನ್ನು ಕುರಿತು "ಏನ್ ಮೂರ್ತಿ, ನಂಜಪ್ಪಶೆಟ್ಟರ ಮನೆ ಸಮಾಚಾರ?—ನಿಂಗೆಲ್ಲ ತಿಳಿದಿರುತ್ತೆ," ಎಂದು ಆಸಕ್ತಿಯಿಂದ ಕೇಳಿದರು.

ಹೆಚ್ಚಿಗೆ ತಿಳಿಯದಿದ್ದರೂ ತಿಳಿದಿದೆ, ತನಗೆ ತಿಳಿದಿರುವುದೆಲ್ಲ ಸರಿ ಎಂಬ ಧಾಟಿಯಲ್ಲಿ ಅದುವರೆಗೆ ವ್ಯವಹರಿಸಿ, ಪತ್ರಿಕಾ ವ್ಯವಸಾಯದಲ್ಲಿ ಒಳ್ಳೆಯ ಕಸಬುದಾರ ಎನಿಸಿಕೊಂಡಿದ್ದ ಕೇಶವಮೂರ್ತಿ,

" ಗೊತ್ತೇ ಇದೆಯಲ್ಲ ಸಮಾಚಾರ........ಊರಂಬೊ ಊರಿಗೆಲ್ಲ ಗೊತ್ತಾಗಿದೆ ? " ಎಂದ.

ನಂಜುಂಡಪ್ಪನವರು " ಅದು ಸರಿ........ಆದರೆ ಸರಿಯಾದ ಸಮಾಚಾರ ನಿಂಗೆ ತಿಳಿದಿರುತ್ತೇಂತ " ಎಂದು ಬೆನ್ನು ಚಪ್ಪರಿಸುವ ಮಾತಾಡಿದರು.

" ಏನಿಲ್ಲ........ಮೊದಲೇ ಈಗ ಎರಡು ಮೂರು ತಿಂಗಳ ಹಿಂದೇನೆ ನಂಜಪ್ಪಶೆಟ್ಟರು ಒಂದು ವಿಲ್ ಬರೆದು, ಮಗಳನ್ನು ಗುಟ್ಟಾಗಿ ಕರಸ್ಕೊಂಡು

ಅವಳಿಗೆಲ್ಲ ಹೇಳಿ ಆ ವಿಲ್ಲನ್ನು ಕೊಟ್ಟು ಕಳಿಸಿಬಿಟ್ಟಿದ್ದರಂತೆ."

"ಅದ್ಯಾಕೆ!....ಮಗ ಇದ್ದರೂ ಅವಳ ಮೇಲೆ ಇಷ್ಟು ಅಭಿಮಾನ?"

ಒಳ್ಳೆ ಚೆನ್ನಾಯ್ತು ನಂಜುಂಡಪ್ನೋರೆ! ನಾಗರಾಜಪ್ಪ ಏನು ಅನ್ನೋದು ನಾಲ್ಕು ದಿಕ್ಕಿಗೂ ಗೊತ್ತು........ಅವನಿಗೆ ಮೂರು ಕಾಸ್ನೂ ಸಿಕ್ಕಿಸ್ಕೂಡ್ದು ಅಂತ ಹಟ ಅಂತೆ ಅವರಿಗೆ........ಕೆಲವರು ಹೇಳ್ತಾರೆ........ಮೊದಲು ಅವರು ಬರೆದ ವಿಲ್‌ನಲ್ಲಿ ಇವನಿಗೂ ಅದ್ಯಾವುದೋ ಆಸ್ತಿ ಕಾಣಿಸಿದಾರಂತೆ. ಅದು ಅವರ ಮಗಳಿಗೆ ಮಾತ್ರ ಗೊತ್ತು........ಸರಿ, ಇವನು—ನಾಗರಾಜ, ಯಾರ್‍ಯಾರೋ ಪೋಲಿಗಳನ್ನ ಸೇರಿಸ್ಕೊಂಡು, ಸ್ವಂತ ಬುದ್ಧಿ ಇಲ್ದೆ, ಅಪ್ಪನ್ನ ಸಾಯಿಸ್ಬಿಟ್ಟು, ಹೆಣದ ಕೈಲಿ ಹೆಬ್ಬೆಟ್ಟೊತ್ತಿಸಿ ಕಳ್ಳ ವಿಲ್ಲು ಹುಟ್ಟಿಸ್ಬಿಟ್ಟ. ಅಳಿಯನ ಕುರುಡು ಬೆಳಗಾದರೆ ಗೊತ್ತಾಗುತ್ತೇಂತ. ಅದನ್ನೆಲ್ಲಿ ಮುಚ್ಚಿಡೋಕಾಗುತ್ತೆ? ಸರಿ, ಗೊತ್ತಾಗ್ಹೋಯ್ತು. ಪಾಪ, ರಿಟೈರಾಗೋ ಆ ಸಬ್‌ರಿಜಿಸ್ಟ್ರಾರ್‌ನೂ ಸಿಕ್ಕಿ ಹಾಕಿಸಿ, ತಾನೂ ಸಿಕ್‌ಹಾಕ್ಕೊಂಡ್ಬಿಟ್ಟಿದಾನೆ........ಡೆಪ್ಯುಟಿ ಕಮಿಷನರು ಬಂದಿದಾರೆ. ಇವತ್ತು ಬೆಳಗ್ಗೆ ಹೆಣ ಹೊರಗೆ ತೆಗೆಸಿ ಪೋಸ್ಟ್ ಮಾರ್ಟಂ ಮಾಡಿಸಿದರು. ಹೆಬ್ಬೆಟ್ಟಿನ ಗುರುತು, ಕಾಲು ಬೆರಳುಗಳ ಗುರುತು ಎಲ್ಲ ತೊಗೊಂಡಿದಾರೆ........ಇವತ್ತು ಅದ್ಯಾರಾರನ್ನೊ ಕರಸಿ, ಅವರ ಹೇಳಿಕೆಗಳ್ನೆಲ್ಲ ತೊಗೊಳ್ತಾರಂತೆ....ನೋಡ್ಬೇಕು ಮುಂದೇನಾಗುತ್ತೊ! ಅಂತೂ ಇದು ದೊಡ್ಡ ಕೇಸಾಗುತ್ತೆ....ಹೆಬ್ಬೆಟ್ಟಿನ ಗುರುತೇನಾದರೂ ಹೆಣದ್ದೇ ಅಂತ ಆಗಿಬಿಟ್ಟರೆ ಪಾಪ, ಆ ಸಬ್‌ರಿಜಿಸ್ಟ್ರಾರ್ ಮುಗಿದುಹೋಗ್ತಾನೆ....ನೋಡ್ಬೇಕು....ನೋಡೋಣ, ಏನೇನಾಗುತ್ತೊ!....ನಾನ್ಬರ್‍ತೀನಿ ನಂಜುಂಡಪ್ನೋರೆ" ಎನ್ನುತ್ತ ಹೊರಡಲು ಎದ್ದುನಿಂತ.

"ಕೂತ್ಕೊಳ್ಳಿ ಇವರೆ, ಸ್ವಲ್ಪ ಕಾಫಿ ತರಿಸೋಣ" ಎಂದು ಮಧ್ಯೆ ಮಹೇಶ್ವರ ಬಾಯಿಹಾಕಿ ಕೇಶವಮೂರ್ತಿಯನ್ನು ಕೂಡಿಸಿದ.

ಹೊರಗೆ ಸ್ಟೂಲಿನ ಮೇಲೆ ಕುಳಿತಿದ್ದ ಪುಟ್ಟಮಾದ ಎದುರು ಹೋಟಲಿಗೆ ಓಡಿಹೋಗಿ ಮೂರು ಕಾಫಿಗೆ ಹೇಳಿ ಬಂದ.

ಕಾಫಿ ಬಂತು.

ಬೆಳಗಿನಿಂದ ಆಗಲೆ ಎರಡು ಬಾರಿ ಕಾಫಿ ಕುಡಿದಿದ್ದ ಮಹೇಶ್ವರ "ನನಗೆ ಬಹಳ ಜಾಸ್ತಿ. ಇದರಲ್ಲಿ ಸ್ವಲ್ಪ ತೊಗೊಳ್ಳಿ ಕೇಶವಮೂರ್ತಿಗಳೇ" ಎಂದು,

ಅವನ ಅನುಮತಿ ಪಡೆಯುವುದಕ್ಕೆ ಮುಂಚೆಯೇ ತನ್ನ ಬಟ್ಟಲಿನ ಅರ್ಧ ಕಾಫಿ ಯನ್ನು ಆತನ ಬಟ್ಟಲಿಗೆ ಸುರಿದ.

ಮಹೇಶ್ವರನ ಎಡಗೈ ಕಿರುಬೆರಳಿನ ಉಂಗುರ ನೋಡಿ ಕೇಶವಮೂರ್ತಿಗೆ ಆಶ್ಚರ್ಯವಾಯಿತು. ಅವನು ಅದನ್ನೆಲ್ಲೋ ನೋಡಿದ್ದ. ಆ ದೊಡ್ಡ ಕೆಂಪು ಹರಳಿನ ಉಂಗುರವನ್ನು ಅವನ ಕಣ್ಣು ಹಿಂದೊಮ್ಮೆ ಖಂಡಿತವಾಗಿಯೂ ಎಲ್ಲೋ ಕಂಡಿತ್ತು.

ಮನಸ್ಸಿಗೆ ಛಕ್ಕನೆ ಹೊಳೆಯಿತು.

ಉಂಗುರ ನೋಡಿದ ಕೂಡಲೆ, ಬೆಳಗ್ಗೆ ನಡೆದ ಉಂಗುರದ ಘಟನೆ ನೆನ ಪಾಯಿತು. ಅದನ್ನು ನೆನಸಿಕೊಂಡಾಗ ಇದಕ್ಕೆ ಉತ್ತರ ಸಿಕ್ಕಿಬಿಟ್ಟಿತು.

ಕೇಶವಮೂರ್ತಿ ಬೆಳಗ್ಗೆ ಒಂಬತ್ತು ಗಂಟೆಗೆ ಮನೆ ಬಿಟ್ಟು ಹೊರಟಾಗ, ಅಕ್ಕಸಾಲಿ ಪುಟ್ಟಾಚಾರಿಯ ಅಂಗಡಿಯಲ್ಲಿ ನಂಜುಂಡಿ ಕುಳಿತಿದ್ದ.

"ಇದೇನು ನಂಜುಡಿ ಇಲ್ಲಿ ಕೂತಿದೀಯೆ?" ಎಂದು ಕೇಶವಮೂರ್ತಿ ಕೇಳಿದ.

"ಒಂದು ಸಣ್ಣ ಕೆಲಸ ಇತ್ತು........ಮಾಡಿಸ್ಕೊಂಬಾಂತಂದ್ರು. ಅದಕ್ಕೇ ಬಂದಿದ್ದೆ........ಅಂದ್ಹಾಗೆ ಆಚಾರ್ಯೇ........ಕಾಗಜದಲ್ಲಿ ಸುತ್ತ್ಯಾಡಿ. ನಮ್ಮ ಮೂರ್ತಿಗಳಿಗೆ ತೋರಿಸ್ತೀನಿ, ಅಕ್ಸರ ಸರಿಯಾಗೈತೊ, ಇಲ್ಲವೊ" ಎಂದು ಬಿಳಿಯ ಹರಳಿನ ದೊಡ್ಡ ಉಂಗುರವನ್ನು ನಂಜುಂಡಿ ಕೇಶವಮೂರ್ತಿಯ ಕೈಯಲ್ಲಿಟ್ಟ.

ಕೇಶವಮೂರ್ತಿ ಸುಮ್ಮನೆ ಪರೀಕ್ಷಿಸಿ "ಎಲ್ಲಯ್ತೊ ಅಕ್ಷರ?" ಎಂದು ಕೇಳಿದ.

"ಒಳಗೆ ಕೆತ್ತಿದರಲ್ಲ ಸ್ವಾಮಿ ಆಚಾರ್‍ರು ಈಗ?—ಹರಳಿನ ಕೆಳಗೆ?"

"ಹರಳಿನ ಒಳಗ?"

"ಅಲ್ಲ ಸ್ವಾಮಿ, ಇಲ್ಲಿ" ಎಂದು ನಂಜುಂಡಿ ಉಂಗುರದ ಒಳಸುತ್ತಿನಲ್ಲಿ ಹರಳಿನ ಕೆಳಭಾಗದಲ್ಲಿ ಕೆತ್ತಿದ 'ಎಂ' ಎಂಬ ಇಂಗ್ಲೀಷ್ ಅಕ್ಷರವನ್ನು ಬೆರಳಿಟ್ಟು ತೋರಿಸಿದ.

"ಯಾರದ್ದೊ ನಂಜುಂಡಿ ಈ ಉಂಗುರ?" ಕುತೂಹಲದಿಂದ ಕೇಶವ ಮೂರ್ತಿ ಕೇಳಿದ.

ನಂಜುಂಡಿ "ಅಮ್ಮಣ್ಣಿ ಕೊಟ್ಟರು, ಅದ್ಯಾರ್ದ್ದೋಪ್ಪಾ. ತೂಕ ಮಾಡ್ಸಿ, ಅದೆಷ್ಟೈತೊ ಕಾಗಜದ್ಮೇಲೆ ಗುರುತು ಹಚ್ಚಿಸ್ಕೊಂಡು, ಈ ಅಕ್ಸರಾನ ಕೆತ್ತಿಸ್ಕೊಂಡು ಜಲ್ದಿ ಬಾಂತಂದ್ರು. ಅದಕ್ಕೆ ಬಂದೆ."

"ಅದು ಸರಿ ಕಣೋ........ಇದನ್ನ ಯಾರು ಕೊಟ್ರೊಂತ ?"

"ನಂಗೊತ್ತಿಲ್ಲಪ್ಪ....ಅದ್ಯಾರು ಕೊಟ್ರೊ!....ಸರಿಯಾಗೈತ್ರ ಅಕ್ಸರ? ........ತೂಕ ಎಷ್ಟಂತೆ?"

"ಒಂದೂವರೆ ತೊಲ ಎರಡು ಗುಂಜಿ."

"ಸರಿಯಾಗೈತ್ರ ?"

"ಹ್ಞ" ಎಂದು ಅವನನ್ನು ಮನೆಯ ಕಡೆಗೆ ಕಳಿಸಿ, ತಾನು ಟ್ರ್ಯಾವಲರ್ಸ್ ಬಂಗಲೆಯ ಕಡೆ ಹೋದ ಚಿತ್ರ ನೆನಪಿಗೆ ಬಂತು.

ಮಾದಪ್ಪನವರ ಮನೆಯಲ್ಲಿಯೇ ಬಾಡಿಗೆಗೆ ಇರುವ, ದುಡ್ಡಿರುವ ಸಾಹುಕಾರ ಯುವಕನಿಗೆ, ನೀನೇ ನನ್ನ ಸರ್ವಸ್ವ, ಹೃದಯೇಶ್ವರ ಎಂದು ಮರಳು ಮಾಡುವ ರತ್ನಳ ಹೃದಯವನ್ನು ಚೆನ್ನಾಗಿ ಬಲ್ಲ ಕೇಶವಮೂರ್ತಿ ಈ ಉಂಗುರಕ್ಕೂ ಆ ಉಂಗುರಕ್ಕೂ ಏನೋ ಸಂಬಂಧ ಇದೆ ಎಂದುಕೊಂಡ.

ಅವನ ಎಣಿಕೆ ನಿಜವಾಯಿತು.

ಕೇಶವಮೂರ್ತಿ ಬೇಗ ಬೇಗ ಕಾಫಿ ಕುಡಿದು "ಬರ್‍ತೀನ್ ಸಾರ್, ಬರ್‍ತೀನಿ ನಂಜುಂಡಪ್ಪನೋರೆ.... ನಾನಿನ್ನೂ ನ್ಯೂಸ್ ಕಳಿಸಿಲ್ಲ" ಎಂದುಕೊಂಡು ಗಡಿಬಿಡಿಯಲ್ಲಿ ಅಂಗಡಿಯ ಮೆಟ್ಟಲಿಳಿದ.

ಅಷ್ಟು ಗಡಿಬಿಡಿಯಲ್ಲಿದ್ದರೂ ಅವನ ಕಣ್ಣು ಮತ್ತೊಮ್ಮೆ ಮಹೇಶ್ವರನ ಎಡಗೈ ಕಿರುಬೆರಳನ್ನು ನೋಡಿತು.

ನಂಜುಂಡಪ್ಪನವರು "ರೀಡಿಂಗ್ ರೂಮಿನಲ್ಲಿ ನಿನ್ನೆಯ 'ಜನವಾಣಿ' ಇದ್ದರೆ ಸ್ವಲ್ಪ ನೋಡಿಕೊಂಡು ಬರ್‍ತೀನಿ, ಅದೇನೋ ಬಂದಿದೆಯಂತೆ" ಎಂದು ಎದ್ದು, ಪಂಚೆಯ ನೆರಿಗೆಯನ್ನು ಸರಿಪಡಿಸಿಕೊಳ್ಳುತ್ತ ಅಂಗಡಿಯನ್ನು ಬಿಟ್ಟಳಿದರು.

ಅವರು ಅಂಗಡಿ ಬಿಡುವ ವರೆಗೂ ಮೂರು ಕಾಸಿನ ವ್ಯಾಪಾರವೂ ಆಗಿರಲಿಲ್ಲ.

ಅವರ ಕಾಲು ರಸ್ತೆ ಮುಟ್ಟಿದ ಕೂಡಲೆ ಹತ್ತೂವರೆ ಗಂಟೆಯ ಶಾಲೆಗೆ

ಹೊರಟಿದ್ದ ಹುಡುಗರ ಗುಂಪೊಂದು "ಸ್ಕೇಲಿದೆಯೇನ್ರಿ?" ಎಂದು ಒಟ್ಟಿಗೆ ಕೂಗಿಕೊಳ್ಳುತ್ತ ಅಂಗಡಿಯನ್ನು ಹೊಕ್ಕಿತು.

* * * *

ರಾತ್ರಿ ಎಂಟು ಗಂಟೆಗೇ ಅಂಗಡಿಯ ಬಾಗಿಲನ್ನು ಹಾಕಿಕೊಂಡು, 'ಬರೋದು ಸ್ವಲ್ಪ ಹೊತ್ತಾಗಬಹುದೆಂದು ಮನೇಲಿ ತಿಳಿಸು' ಎಂದು ಪುಟ್ಟ ಮಾದನಿಗೆ ಹೇಳಿ, ಮಹೇಶ್ವರ ಮಾರಮ್ಮನ ಚೌಕದ ಕಡೆಗೆ ಹೊರಟ.

ಲಕ್ಷಮ್ಮನ ಮನೆಯ ಪಡಸಾಲೆಯನ್ನು ಪ್ರವೇಶಿಸಿದಾಗ ನಡುಮನೆಯ ಬಾಗಿಲಲ್ಲಿದ್ದ ಲಕ್ಷಮ್ಮ "ಕೂತ್ಕೊಳ್ಳಿ........ಇಲ್ಲೇ ಎಲ್ಲೋ ಹೋಗಿದಾಳೆ ರತ್ನ, ಬರ್ತ್ತಾಳೆ" ಎಂದು ಹೇಳಿ ಒಳಗೆ ಹೋದಳು.

ಮಹೇಶ್ವರ, ಅಲ್ಲಿಯೇ ಮೂಲೆಯಲ್ಲಿದ್ದ ಮೇಜಿನ ಮುಂದಿನ ಕುರ್ಚಿಯ ಮೇಲೆ ಕುಳಿತು ಮುಕ್ಕಾಲು ಗಂಟೆ ತಪಸ್ಸು ಮಾಡಿದ.

ಆದರೆ, ರತ್ನಳ ಸುಳಿವೇ ಕಾಣಲಿಲ್ಲ.

ಹೊರಗೆ ಎಲ್ಲೋ ಹೋಗಿದ್ದ ನಂಜುಂಡಿ ಮನೆಯೊಳಗೆ, ಒಂಭತ್ತು ಗಂಟೆಯ ಹೊತ್ತಿಗೆ ಬರುತ್ತ, ಒಳಗೆ ಯಾರಿದ್ದಾರೆಂದು ನೋಡದೆ, ಲಕ್ಷಮ್ಮನ ಕಣ್ಣಿನ ಸೂಚನೆಯನ್ನೂ ಅರ್ಥಮಾಡಿಕೊಳ್ಳದೆ "ಅಮ್ಮಣ್ಣಿ ಬರೋದು ಇನ್ನೂ ಅರ್ಧ ಗಂಟೆ ಆಯ್ತುದಂತೆ...........ಡಪ್ಟಿಕಮಿಷನ್ರು ಇನ್ನೂ ಬಿಟ್ಟಿಲ್ಲ...." ಎಂದು ಉದ್ದವಾಗಿ ಇನ್ನೂ ಏನೇನೋ ಹೇಳುವುದರಲ್ಲಿದ್ದ ಅವನಿಗೆ, ಪಡಸಾಲೆಯ ಮೂಲೆಯಲ್ಲಿ ಮಹೇಶ್ವರ ಕಾಣಿಸಿದ.

ಅರ್ಥಮಾಡಿಕೊಂಡ ಅವನ ಕಣ್ಣು, ಬಾಯಿಗೆ ಬ್ರೇಕು ಹಾಕಿತು.

ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು, ತಡೆಯಲಾರದೆ ಮಹೇಶ್ವರ "ನಿಮ್ಮ ಮಗಳು ಎಲ್ಲಿಗೆ ಹೋಗಿದ್ದಾರೆ? ಡೆಪ್ಯುಟಿ ಕಮಿಷಿನ್ರು ಕರಸಿದಾರ್ಯೇ? ಎಂದು ಕೇಳಿದ.

ನಡುಮನೆಯ ಬಾಗಿಲ ಹತ್ತಿರ ನಿಂತಿದ್ದ ಲಕ್ಷಮ್ಮ "ಹೌದು" ಎಂದಳು.

"ಯಾಕೆ, ಕಾರಣ?"

"ಅದೇ ಆ ನಂಜಪ್ಪಶೆಟ್ಟರ ಮಗ ನಾಗರಾಜಪ್ಪ—ಶುದ್ಧ ಪೋಲಿ ಅವನು—ಇವಳನ್ನ ಕೆಣಕ್ತಾ ಇದ್ದ.... . ನಮ್ಮ ಹುಡುಗೀಗದೆಲ್ಲ ಕಂಡರಾಗ್ದು; ಪೋಲಿಸಿಗೆ ಕಂಪ್ಲೇಂಟು ಕೊಟ್ಟಿದ್ಳು.......ಆ ಸಿಟ್ಟಿನ ಮೇಲೆ ಅವನು, ಈಗ

ನಡೆದಿರೋ ಕೇಸಿನಲ್ಲಿ ಇವಳನ್ನೂ ಸಿಕ್ಕಾಕ್ಕೋಣಾಂತ, ಎಲ್ಲ ಇವಳೇ ಮಾಡ್ಸಿದ್ಳೂಂತ ಡೆಪ್ಯುಟಿ ಕಮಿಷನರ ಮುಂದೆ ಹೇಳಿಕೆ ಕೊಟ್ಟನಂತೆ........ಅದಕ್ಕೆ ಅವರು ಹೇಳಿಕಳಿಸಿದ್ರು........ ಹೋಗಿದಾಳೆ........ಎಲ್ಲ ಸರಿಯಾಗಿ ವಿವರಿಸಿ ಬರ್ತಾಳೆ........ಆದಕ್ಕೇ ಸ್ವಲ್ಪ ತಡ ಆಯ್ತು........ಇನ್ನೇನು ಬರೋ ಹೊತ್ತು, ಬಂದ್ಬಿಡ್ತಾಳೆ" ಎಂದು ಹೇಳಿ ಲಕ್ಷಮ್ಮ ಒಳಗೆ ಹೋದಳು.

ನಾಗರಾಜ ಇಲ್ಲಿಗೆ ಬಂದು ಹೋಗುತ್ತಿದ್ದ, ಸಾವಿರಾರು ರೂಪಾಯಿ ಸುರಿದಿದ್ದ, ಎಂಬ ಕತೆಯನ್ನೆಲ್ಲ ಕೇಳಿದ್ದ ಮಹೇಶ್ವರನಿಗೆ ಲಕ್ಷಮ್ಮನ ಮಾತು ಕೇಳಿ ಆಶ್ಚರ್ಯವಾಯಿತು. ನಾಗರಾಜನ ವಿಷಯವಾಗಿ ಜನ ಆಡುತ್ತಿದ್ದುದು ಸುಳ್ಳೆ? ರತ್ನ ನಿಜವಾಗಿಯೂ ಪವಿತ್ರಳೆ? ಅವಳನ್ನು ಕಾಡಿಸುತ್ತಿದ್ದ ಇನ್‌ಷ್ಯೂರೆನ್ಸ್ ಕಂಪನಿ ನರಸಿಂಹಮೂರ್ತಿ, ಕಂಟ್ರಾಕ್ಟರ್ ಮಗ ವಿಷಕಂಠ ಇವರೆಲ್ಲರ ಕಾಟದಿಂದ ರತ್ನ ಜನರ ಕಣ್ಣಿಗೆ ಕೆಟ್ಟ ಹೆಣ್ಣಾಗಿದ್ದಾಳೆಯೆ?—ನಿಜ. ನಿನ್ನೆ ತಾನೆ ಅವಳೊಡನೆ ಅನುಭವಿಸಿದ ಆ ಸುಖ, ರತ್ನ ಬಹಳ ಒಳ್ಳೆಯ ಹುಡುಗಿ, ಅವಳು 'ಬೀದಿಯ ಹೆಣ್ಣಲ್ಲ' ಎಂದು ಹೇಳುತ್ತಿತ್ತು.

ಅವಳು ಬರಲಿ, ಸಮಯ ಬಂದಾಗ ಎಲ್ಲ ಅವಳನ್ನೇ ಕೇಳಿಬಿಡೋಣ, ಎಂದುಕೊಂಡು ಮಹೇಶ್ವರ ಮಹಾದೇವಿಯು ಬರುವನ್ನೇ ಕಾಯುತ್ತ ಕುಳಿತಿದ್ದ.

ಒಂಭತ್ತೂ ಮುಕ್ಕಾಲು ಗಂಟೆಗೆ ಮನೆಯ ಮುಂದೆ ಜಟಕಾ ಗಾಡಿ ಬಂದು ನಿಂತಿತು. ರತ್ನ ಒಬ್ಬಳೇ ಒಳಗೆ ಬಂದಳು.

ಮಹೇಶ್ವರನನ್ನು ನೋಡಿ ಹುಸಿನಗೆ ನಗುತ್ತ "ಕ್ಷಮಿಸಬೇಕು, ಮೇಲಕ್ಹೋಗಿ, ಬಂದೆ" ಎಂಧಳು.

ಮಹೇಶ್ವರ ಮಹಡಿಯನ್ನೇರಿ ಮಹಾಮಂದಿರವನ್ನು ಪ್ರವೇಶಿಸಿ, ಹಾಸಿಗೆಯ ಹತ್ತಿರ ಇದ್ದ ಕುರ್ಚಿಯ ಮೇಲೆ ಕುಳಿತುಕೊಂಡ.

ಸುಮಾರು ಹತ್ತೂಕಾಲು ಗಂಟೆಯ ಹೊತ್ತಿಗೆ ಕೋಣೆಗೆ ಬಂದ ರತ್ನ, ಬರುತ್ತಲೇ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದು ಬಿಕ್ಕಿಬಿಕ್ಕಿ ಅಳ ತೊಡಗಿದಳು.

ಹುಸಿನಗು ನಗುತ್ತ ಬಂದವಳು ಹೀಗಾದುದನ್ನು ನೋಡಿ, ಗಾಬರಿಗೊಂಡ ಮಹೇಶ್ವರ "ಇದೇನು ರತ್ನ! ಯಾಕೆ, ಏನಾಯ್ತು?" ಎಂದು ಹತ್ತಿರ ಬಂದು ಮೈ ಕೈ ಮುಟ್ಟಿ, ಮುಂಗುರುಳು ನೇವರಿಸಿ ಸಂತೈಸಿದ.

ಮಂಚದ ಮೇಲೆ ಕುಳಿತುಕೊಂಡ ಮಹೇಶ್ವರನ ಎದೆಗೆ ಒರಗಿಕೊಂಡು

ಸಮಾಧಾನ ತಂದುಕೊಂಡ ರತ್ನ, ಸ್ವಲ್ಪ ಹೊತ್ತಿನನಂತರ ಬಾಯಿಬಿಟ್ಟಳು—ಅದೂ ಬಿಕ್ಕಳಿಕೆಯ ನಡುವೆ ಸಿಕ್ಕಿ ಕತ್ತರಿಸಿದ ಮಾತು.

"ನೀವು ನನ್ನ ಮಾನ ಉಳಿಸಬೇಕು!"

"ಯಾಕೆ ರತ್ನ! ಏನಾಯ್ತು?"

"ಏನೂ ಇಲ್ಲ....ಆ ಪೋಲಿ—ನಾಗರಾಜನ ಹತ್ತಿರ....ನಾಲ್ಕು ಸಾವಿರ ರೂಪಾಯಿ... ಸಾಲಾಂತ....ಇಸ್ಕೊಂಡಿದ್ದೆ. ಈಗ....ಅವನು....ಈ ಕೇಸಿನಲ್ಲಿ ಸಿಕ್ಕಿಹಾಕ್ಕೊಂಡು....ನನ್ಮೇಲೂ ಏನೇನೋ ಚಾಡಿ ಹೇಳಿ ಬಿಟ್ಟಿದಾನೆ....ಇಷ್ಟು ಹೊತ್ತಿನ ತನಕ ಡೆಪ್ಯುಟಿ ಕಮಿಷನರಿಗೆ ಎಲ್ಲ ವಿವರಿಸಿ ಬಂದೆ....ಆ ಶನೀ ಸಾಲ ತೀರಿಸಿಬಿಡೋಣಾಂದ್ರೆ ನನ್ನ ಹತ್ತಿರ ದುಡ್ಡಿಲ್ಲ. ನನಗೆ ಆವಾಗ ಗೊತ್ತಾಗಲಿಲ್ಲ ........ಎಲ್ಲ ಬಿಸಿನೆಸ್ ಮೇಲೆ........ಹಾಕಿ ಕಳಕೊಂಡ್ಬಿಟ್ಟೆ....ನೀವು ಹ್ಯಾಗಾದರೂ ಮಾಡಿ ನಾಲ್ಕು ಸಾವಿರ ಕೊಟ್ಬಿಟ್ರೆ, ಅವನಿಗೆ ತೆತ್ತುಬಿಟ್ಟು ಆ ಸಂಬಂಧ ತಪ್ಪಿಸ್ಕೊಂಡ್ಬಿಡ್ತೀನಿ."

"ನನ್ನ ಹತ್ತಿರ ಈಗ ಅಷ್ಟೊಂದು ಕ್ಯಾಷ್ ಇಲ್ಲವಲ್ಲಾ ರತ್ನ...ಎಲ್ಲೋ ಎರಡು ಮೂರು ಸಾವಿರ ಇದೆ....ಟ್ರೆಜರೀಲಿರೋದು ಫಿಕ್ಸೆಡ್ ಡಿಪಾಜಿಟ್ಟು, ಅದನ್ನು ಮುಟ್ಟೋಹಾಗಿಲ್ಲ....ಇನ್ನು ಎರಡು ತಿಂಗಳು ಕಾಯೋದಾದರೆ ಕೊಡಬಹುದು. ಅಷ್ಟು ಹೊತ್ತಿಗೆ ಆ ಅಗ್ರಹಾರದ ಮನೇ ಬೋಗ್ಯದ್ದು ವಾಪಸ್ಸುಬರುತ್ತೆ.

"ಅವನು ಎರಡು ತಿಂಗಳು ಕಾಯೊಲ್ಲಾಂದ್ರೆ. ಈಗ ಜಾಮೀನಿನ ಮೇಲೆ ಹೊರಗೆ ಬಂದ್ಬಿಡ್ತಾನಂತೆ....ಕೇಸು ಬೇರೆ ನಡೀತಿರುತ್ತೆ....ಅವನು ನನ್ನನ್ನು ಸುಮ್ನೆ ಬಿಡೊಲ್ಲ....ನಾನು ಈ ಮನೇಲಿರೋದೇ ಕಷ್ಟವಾಗುತ್ತೆ....ಇವರೆಲ್ಲ ಒಂದು ಸೆಟ್ಟು....ನನ್ನನ್ನ ತುಂಬ ಕಾಡಿಸ್ತಾರೆ....ಇವರ ಕಾಟದಲ್ಲಿ ನಾನು ಮಾನ ಉಳಿಸಿಕೊಂಡಿರೋದೇ ಕಷ್ಟವಾಗಿಬಿಟ್ಟಿದೆ. ಈಗೇನ್ಮಾಡಬೇಕೂನ್ನೋದೇ ತೋರಲ್ಲ....ಅಂದ್ಹಾಗೇ, ನೀವು ಭೋಗ್ಯ ಅಂದಕೂಡಲೆ ನನಗೆ ಇನ್ನೊಂದು ಉಪಾಯ ಹೊಳೀತು....ಈವಾಗ ಎಷ್ಟಾಗುತ್ತೋ ಅಷ್ಟು ಕ್ಯಾಷ್ ಕೊಡಿ, ಈ ಮನೇನ ನನಗೆ ನಾಲ್ಕಕ್ಕೋ ಐದಕ್ಕೋ ಭೋಗ್ಯ ಹಾಕಿದ್ಹಾಗೆ ಮಾಡಿ ಒಂದು ಪತ್ರ ಹುಟ್ಟಿಸ್ಬಿಟ್ಟರೆ ನಾನು, ಈಗ ಸದ್ಯಕ್ಕೆ ನನ್ನ ಹಣ ಬರೋಹಾಗಿಲ್ಲ ನೋಡಪ್ಪ, ಮುಂದಿನ ವರ್ಷ ಇಷ್ಟೊತ್ತಿಗೆ ಸರಿಯಾಗಿ ಅದು ಕೈಗೆ ಬರುತ್ತೆ, ಬಡ್ಡಿ ಸಮೇತ ವಾಪಸು ಕೊಡ್ತೀನೀಂತ ಹೇಳ್ಬಿಡ್ತೀನಿ....ನೀವು ನಿಮ್ಮ ಆ ಮನೆ

ಭೋಗ್ಯದ ಹಣ ಬಂದ ಕೂಡ್ಲೆ ಈ ಪತ್ರಾನ ಡಿಸ್‌ಛಾರ್ಜ್ ಮಾಡ್ಸಿ ಹಣ ವಾಪಸ್ಸು ಬಂದ್ಹಾಗೆ ಮಾಡಿಬಿಡ್ಬಹುದು....ಅದೇನು ಹೆಸರಿಗೆ ಪತ್ರ ತಾನೆ!.... ಸ್ವಲ್ಪ ಸ್ಟ್ಯಾಂಪ್ ಖರ್ಚು ಆಗುತ್ತೆ....ಆದರೂ ಚಿಂತೆಯಿಲ್ಲ....ನೀವು ನನಗೆ ಈ ಉಪಕಾರ ಮಾಡಲೇಬೇಕು" ಎಂದು ಮಹೇಶ್ವರನ ಕೊರಳಿಗೆ ತನ್ನ ಎರಡು ತೋಳಿನ ಹಾರ ಹಾಕಿ, ಹೂವಿನಂಥ ತನ್ನ ಮುಖವನ್ನು ಮೇಲಕ್ಕೆತ್ತಿ ಬೇಡಿಕೊಂಡಳು.

ಅವಳ ದುಃಖವನ್ನು ತಡೆಯಲಾರದ ಮಹೇಶ್ವರ 'ಆಗಲಿ,' 'ಆಗಲಿ,' 'ಅದಕ್ಕೇನು' ಎಂದು ಮಧ್ಯಮಧ್ಯದಲ್ಲಿಯೇ ಮನಸೋತು ನುಡಿದಿದ್ದ. ಮೃದುವಾದ ಎರಡು ತೋಳಿನ ಹಾರಕ್ಕೆ, ತುಟಿಯ ಹತ್ತಿರ ನಿಂತ ಆ ಕಣ್ಣಿಗೆ ಬಲಿಯಾಗಿದ್ದ ಅವನ ಹೃದಯ, ಕೈಯಿಂದ ಅವಳ ತಲೆಗೂದಲನ್ನು ನೇವರಿಸಿ ಅಪ್ಪಿಕೊಂಡಿತು.

"ಆಗಲಿ ರತ್ನಾ, ಅಳಬೇಡ."

ಆ ಮಾತು ರತ್ನಳ ಮುಖವನ್ನು ಮೇಲಕ್ಕೆತ್ತಿತು.

ಅಳುತ್ತಿದ್ದ ತುಟಿ ಕಿರುನಗೆ ನಕ್ಕಿತು.

ಆ ರತ್ನದ ತುಟಿಯಲ್ಲಿ ಮೂರು ಮುತ್ತಾಯಿತು.

"ರತ್ನಾ ನಾಳೆ ಒಂದು ಸಾವಿರ ತಂದುಕೊಡ್ತೀನಿ........ನಾಡಿದ್ದು ಭೋಗ್ಯ ಪತ್ರ ಮಾಡೋಣ?"

"ನಾಡಿದ್ದು ಬೇಡಾಂದ್ರೆ, ಅದನ್ನೂ ನಾಳೇನೇ ಮಾಡೋಣ........ ಅವನು ನಾಳೇನೇ ಜಾಮೀನಿನ ಮೇಲೆ ಬಂದ್ಬಿಡ್ತಾನೆ, ಅವನು ಬರೋದರೊಳಗೆ ಹಣ ಹೀಗಾಯ್ತೂಂತ ಆದರೆ, ಅವನಿಗೆ ಹೇಳೋಕೆ ಸರಿಹೋಗುತ್ತೆ.... ನಾಳೇನೇ ಮಧ್ಯಾಹ್ನ ಸ್ವಲ್ಪ ಪುರಸೊತ್ತು ಮಾಡಿಕೊಂಡು ಬಂದ್ಬಿಡಿ........ ಯಾರನ್ನಾದರೂ ಕರಸಿ ಪತ್ರ ಬರಸಿಬಿಡೋಣ........"

"ಸರಿ........ಆಗಲಿ."

ಪೋಲಿಪಟಾಲಂಗಳ ಕಾಟವನ್ನು ತಪ್ಪಿಸಿಕೊಳ್ಳಲು ಅಷ್ಟೊಂದು ಹಾತೊರೆಯುತ್ತಿದ್ದಂತೆ ಕಂಡ ರತ್ನ ಮಹೇಶ್ವರನ ಮನಸ್ಸನ್ನು ಆಕರ್ಷಿಸಿ, ಅವನ ಪ್ರಶ್ನೆಗೆ ಉತ್ತರವಾಗಿಬಿಟ್ಟಳು.

ಮಹೇಶ್ವರ ಗಂಡಹೆಂಡಿರ ವ್ಯವಹಾರದಂತೆ ಅವಳ ಸಲಹೆಗೆ ಒಪ್ಪಿದ.

ಅಂದು ರಾತ್ರಿ ಅವನು ಮನೆ ಸೇರಿದ್ದು ಒಂದು ಗಂಟೆ.

ಸಿನಿಮಾಕ್ಕೆ ಹೋಗಿದ್ದೆ ಎಂದು ಹೇಳಿದರೂ ಗಂಡನ ಮಾತಿನಲ್ಲಿ ನಂಬಿಕೆ ಮೂಡದ ಗಂಗಮ್ಮ "ಊಟವಿಲ್ಲದೆ ಏನು ಸಿನಿಮ! ಮನೆಗೆ ಬರದೆ ಏನು ಸಿನಿಮ! ಊಟಮಾಡಿಕೊಂಡು ಹೋಗಿದ್ದರೆ ಚೆನ್ನಾಗಿತ್ತು" ಎಂದಳು.

ಹಿಂದಿನ ದಿನದ ಅನುಭವ, ಇಂದಿನ ದಿನದ ಅನುಭವದೊಡನೆ ಬೆರೆದು ಗಂಡನಲ್ಲಾದ ಬದಲಾವಣೆಗೆ ಭೂತಕನ್ನಡಿ ಹಿಡಿದಿತ್ತು.

ಇದು ದಿನ ಕಳೆದಂತೆ ದೊಡ್ಡದೊಡ್ಡದಾಯಿತು.

ಆದರೆ, ಅದಕ್ಕೂ ಒಂದು ಮಿತಿ ಇತ್ತು.

## ೧೪

ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು!—ಹತ್ತು ತಿಂಗಳು ಕಳೆದುವು; ರತ್ನಳಿಗೆ ಎಂಟು ತಿಂಗಳಾಯಿತು.

ಈ ಹತ್ತು ತಿಂಗಳೊಳಗೆ ಅವಳ ದೇಹದಲ್ಲಿಯೂ, ಜೀವನದಲ್ಲಿಯೂ ಅಜಗಜಾಂತರ ಬದಲಾವಣೆಗಳುಂಟಾದುವು.

ಮಹೇಶ್ವರ ಆ ಮನೆಯ ಮೆಟ್ಟಲು ತುಳಿದು ಐದು ತಿಂಗಳಾಗಿತ್ತು.

ಭೋಗ್ಯಪತ್ರ ಹರಿಯದಿದ್ದರೆ ಅಷ್ಟು ವಿರಸವಾಗುತ್ತದೆಂದು ಮೊದಲು ಅವಳು ತಿಳಿದಿರಲಿಲ್ಲ.

ಮೊದಮೊದಲು ತಮಾಷೆಗೆ 'ಹೇಗಿದ್ದರೂ ಒಂದು ವರುಷ ಅವಧಿ ಇದೆಯಲ್ಲ. ಒಂದು ವರುಷ ಆಗಲಿ....ಆಮೇಲೆ ಹರಿದುಹಾಕುತ್ತೇನೆ....ಇಲ್ಲ ಇಲ್ಲ ನಾನದನ್ನು ಹರಿಯೊಲ್ಲ....ನನ್ನ ಐದು ಸಾವಿರ ರೂಪಾಯಿಗಳನ್ನು ಇಲ್ಲಿ ಬಿಸಾಡಿ!...ಪತ್ರ ಷರಾ ಮಾಡಿ ವಾಪಸ್ಸು ಕೊಡುತ್ತೇನೆ' ಎಂದು ಹೇಳಿ ಮಹೇಶ್ವರನನ್ನು ಕುಚೋದ್ಯ ಮಾಡುತ್ತಿದ್ದ ರತ್ನ ಈಗ ಆ ತಮಾಷೆಯ ಮಾತನ್ನು ಅಕ್ಷರಶಃ ನಡಸಲು ಮನಸ್ಸು ಮಾಡಿದ್ದಳು.

ಆ ಭೋಗ್ಯಪತ್ರ, ಇನ್ನು ಕೆಲವು ಸಣ್ಣ ಸಣ್ಣ ಕಾಗದ, ಬಾಡಿಗೆ ರಸೀದಿ ಮುಂತಾದುವುಗಳೊಂದಿಗೆ 'ಧೀರವಾಣಿ'ಯ ಐದಾರು ಸಂಚಿಕೆಗಳನ್ನು ಸೇರಿ

ಸುತ್ತ ಕೋಣೆಯಲ್ಲಿ ಕುಳಿತಿದ್ದ ರತ್ನ ಯೋಚನೆಯಲ್ಲಿ ಲೀನಳಾಗಿದ್ದಳು.

ಹತ್ತು ತಿಂಗಳ ಹಿಂದೆ ಒಂದು ಸಂಜೆ, ಟಿ.ಬಿ.ಯಲ್ಲಿ ಜಿಲ್ಲಾಧಿಕಾರಿಗಳು ಕರಸಿ ವಿಚಾರಣೆ ನಡಸುತ್ತಿದ್ದಾಗ, ಅಲ್ಲಿಯೇ ಓಡಾಡುತ್ತಿದ್ದ ಕರೆಸ್ಪಾಂಡೆಂಟ್ ಕೇಶವಮೂರ್ತಿ ಅಂದು ರಾತ್ರಿ ಎರಡು ಗಂಟೆಯಲ್ಲಿ ಲಕ್ಷ್ಮಮ್ಮನ ಮನೆಗೆ ಬಂದು ತಾನು ಅವಳನ್ನು ಖೂನಿ ಕೇಸಿನಿಂದ ಬಚಾವು ಮಾಡಿದ್ದೆಂದು ಕೊಚ್ಚಿಕೊಂಡಾಗ ರತ್ನಳ ಬಾಯಿಂದ ಸಹಸ್ರನಾಮ ಹಾಕಿಸಿಕೊಂಡು ಹೋಗಿದ್ದ.

ಮಾರನೆಯ ದಿನವೇ 'ಧೀರವಾಣಿ'ಯಲ್ಲಿ 'ಉಂಗುರದ ಮದುವೆ' ಎಂಬ ಶಿರೋನಾಮೆಯ ಕೆಳಗೆ 'ಹೊಸೂರಿನ ಶ್ರೀಮತಿ ಲಕ್ಷ್ಮಮ್ಮನವರ ಮಗಳು ಸೌ|| ರತ್ನಮ್ಮನಿಗೂ, ಅದೇ ಊರಿನ ಮಾದಪ್ಪ ಅಂಡ್ ಸನ್ ಸಂಸ್ಥೆಯ ಮಾಲೀಕರಾದ ಶ್ರೀ ಮಹೇಶ್ವರಪ್ಪನವರಿಗೂ ಉಂಗುರದ ಬದಲಾವಣೆಯ ಮೂಲಕ ವಿವಾಹ ನಡೆಯಿತು' ಎಂಬ ಸುದ್ದಿ ಪ್ರಕಟವಾಯಿತು. ಆ ಸುದ್ದಿಯನ್ನು ಮಾತ್ರ ಕೆಂಪು ಬಣ್ಣದಲ್ಲಿ ಗುರುತು ಮಾಡಿದ ಒಂದು ಪ್ರತಿಯನ್ನು ಮಹೇಶ್ವರಪ್ಪನವರ ಮನೆಯ ಕಿಟಕಿಯಲ್ಲಿ ಯಾರೋ ಬಿಸುಟು ಹೊರಟು ಹೋಗಿದ್ದರು. ಅಂದು ಆ ಮನೆಯಲ್ಲಿ ದೊಡ್ಡ ರಾಮಾಯಣ ನಡೆದು ಹೋಯಿತು. ಗಂಗಮ್ಮ ಮೂರು ದಿನ ಅನ್ನ ನೀರು ಬಿಟ್ಟುಬಿಟ್ಟಳು. ಪಾರ್ವತಮ್ಮನವರಂತೂ ನೆಲಕ್ಕೆ ತಲೆತಲೆ ಚಚ್ಚಿಕೊಂಡು ಅತ್ತರು. ಮಹೇಶ್ವರನ ಕೈಯಲ್ಲಿದ್ದ ಉಂಗುರ ಆ ಸುದ್ದಿಗೆ ಸಾಕ್ಷ್ಯ ಹೇಳುತ್ತಿತ್ತು.

ಉಂಗುರವನ್ನು ತೆಗೆದು ಅಂಗಡಿಯಲ್ಲಿಟ್ಟು, ರತ್ನಳ ಮನೆಗೆ ಹೋಗುವಾಗ ಮಾತ್ರ ಅದನ್ನು ಧರಿಸಿ ಹೋಗಬೇಕಾಯಿತು.

ಮಹೇಶ್ವರ, ರತ್ನ ಒಂದಾದುದನ್ನು ಕೇಳಿ, ನೋಡಿ ಹೊಟ್ಟೆಕಿಚ್ಚಿನಿಂದ ಕರೆಸ್ಪಾಂಡೆಂಟ್ ಕೇಶವಮೂರ್ತಿ ಆಗಾಗ ಏನೇನೋ ಸುದ್ದಿಗಳನ್ನು ಸಂಗ್ರಹಿಸಿ 'ಧೀರವಾಣಿ'ಯ ಮೂಲಕ ಕನ್ನಡ ನಾಡಿನಲ್ಲಿ, ಮುಖ್ಯವಾಗಿ ಹೊಸೂರಿನಲ್ಲಿ, ಅದಕ್ಕಿಂತ ಮುಖ್ಯವಾಗಿ ಮಹೇಶ್ವರಪ್ಪನವರ ಮನೆಯಲ್ಲಿ ಚೆನ್ನಾಗಿ ಪ್ರಚಾರ ಮಾಡಿದ್ದ.

ಮೊದಲನೆಯ ಸುದ್ದಿ ಬಂದಕೂಡಲೆ ಕೇಶವಮೂರ್ತಿಯ ಮೇಲೆ ಕಿಡಿಕಿಡಿಯಾದ ಮಹೇಶ್ವರ "ಅವನಿಗೆ ಏನು ಮಾಡೋಣ?" ಎಂದು ರತ್ನಳನ್ನು ಕೇಳಿದಾಗ, ರತ್ನ ನಗುತ್ತ "ಮದುವೆ ಆದುದು ಸುಳ್ಳೆ?" ಎಂದು ಕೇಳಿದ್ದಳು,

“ಈ ಹೃದಯಕ್ಕೆ ಆಸೆಪಟ್ಟು ನಿರಾಸೆಗೊಂಡ ಆ ದೇಹ ಹೀಗೆ ತೀರಿಸಿಕೊಳ್ಳು ತ್ತಿದೆ........ಮಾಡಲಿ, ಪರವಾಯಿಲ್ಲ. ನಾವೇಕೆ ಕೆಣಕಬೇಕು? ತೃಪ್ತಿಪಡಲಿ,” ಎಂದುಬಿಟ್ಟಿದ್ದಳು.

ಮಹೇಶ್ವರ ಅವಳ ಸಲಹೆಗೆ ಒಪ್ಪಿ, ಆ ವಿಷಯವನ್ನು ಕೆದಕಿ ದೊಡ್ಡದು ಮಾಡಲು ಹೋಗಲಿಲ್ಲ.

ಎರಡು ಕಡೆಯ ಜಗ್ಗಾಟದಲ್ಲಿ ಒಮ್ಮೆ ಹೀಗೆ ಒಮ್ಮೆ ಹಾಗೆ ಒಲೆಯು ತ್ತಿದ್ದ ಅವನ ಮನಸ್ಸು ರತ್ನಳಲ್ಲಿದ್ದ ಆಸಕ್ತಿಯನ್ನು ಕಡಮೆ ಮಾಡುತ್ತಿತ್ತು. ಆದರೆ, ಅವಳು ನೀಡಿದ ಐದು ತಿಂಗಳ ಹೃತ್ಪೂರ್ವಕ ಸ್ವಾಗತವನ್ನು ಚೆನ್ನಾಗಿ ಅನುಭವಿಸಿ ಆನಂದಿಸಿತ್ತು. ಆ ಆನಂದದ ಫಲ ತುಂಬಿ ಬರುವಾಗ, ವಿರಸ ವುಂಟಾಗಿ ವಿಷಮತೆಗಿಳಿದಿತ್ತು.

ರತ್ನ ಹೇಳಿದಂತೆ, ಮಾರನೆಯ ದಿನವೇ ಮಹೇಶ್ವರ ಒಂದು ಸಾವಿರ ರೂಪಾಯಿ, ಸ್ಟಾಂಪು ಖರ್ಚಿಗೆ ಹಣ, ಒಂದೆರಡು ಗಂಟೆ ಬಿಡುವು, ಎಲ್ಲ ಅಣಿ ಮಾಡಿಕೊಂಡು ಬಂದ. ಒಂದು ಸಾವಿರ ರೂಪಾಯಿಯನ್ನು ರಸೀತಿ ಪಡೆ ಯದೆ—ಹೆಂಡತಿಯ ಕೈಗೆ ಕೊಡುವಂತೆ—ರತ್ನಳ ಕೈಯಲ್ಲಿ ಹಾಕಿದ. ಆದರೆ, ರತ್ನ ಹೊರಗಿನ ವ್ಯಕ್ತಿಯೊಡನೆ ವ್ಯವಹಾರ ನಡಸುವಂತೆ ಒಂದು ಭೋಗ್ಯಪತ್ರ ವನ್ನು ಬರಸಿದಳು ; ಒಂದು ವರುಷ ಅವಧಿ ಕಾಣಿಸಿದ ಈ ಭೋಗ್ಯಪತ್ರದಲ್ಲಿ, ನನ್ನ ಬಾಬ್ತು ಮೇಲ್ಕಂಡ ಮನೆಯನ್ನು ಇಂಥ ಶ್ರೀಮತಿ ರತ್ನಮ್ಮನವರಿಗೆ ಶುದ್ಧ ಭೋಗ್ಯ ಮಾಡಿ ಈ ದಿನ ಗೌವರ್ನಮೆಂಟ್ ಐದು ಸಾವಿರ ರೂಪಾಯಿಗಳನ್ನು ಈ ಪತ್ರ ರುಜು ಮಾಡುವಾಗ ಪಡೆದಿರುತ್ತೇನೆ, ಎಂದು ಮಹೇಶ್ವರ ರುಜು ಹಾಕಿದ ಭೋಗ್ಯಪತ್ರಕ್ಕೆ ನಂಜುಂಡಿ ಮತ್ತು ಲಕ್ಷಮ್ಮನ ಸಹಿಗಳೂ ಸಾಕ್ಷಿ ಯಾದುವು. ಕೊನೆಗೆ, ಅದು ರಿಜಿಸ್ಟರೂ ಆಯಿತು. ಮಹೇಶ್ವರ ನಾಲ್ಕು ಸಾವಿರ ಎಂದು ಬರೆದರೆ ಸಾಕೆಂದು ಹೇಳಿದಾಗ ರತ್ನ “ಅಯ್ಯೋ, ಬ್ಯಾಡೀಂದ್ರೆ ಮನೆಯ ಬೆಲೆ ಇಳಿದು ಹೋಗುತ್ತೆ....ಭೋಗ್ಯ ಅಂದಮೇಲೆ ಅದರ ಬೆಲೆಯ ಅರ್ಧದಷ್ಟಾದರೂ ಬೇಡವೆ ಹಣ? ಐದಿರಲಿ ಬಿಡಿ:...ಬರೀ ಕಾಗದದ ಮೇಲೆ ತಾನೆ....ಐದಲ್ದೆ ಇದ್ದರೆ ಐವತ್ತಾದರೂ ಆಗಬಹುದು. ಆದರೆ ನೋಡೋರ ಕಣ್ಣಿಗೂ ನ್ಯಾಯವಾಗಿ ಕಾಣಲಿ” ಎಂದು ಮನವೊಪ್ಪುವಂತೆ ಮಾತಾಡಿ ಮಹೇಶ್ವರನಿಗೆ ಮಕಮಲ್ ಟೋಪಿ ಹಾಕಿದ್ದಳು.

ಇನ್ನಿತರರ ಕಾಟವಿಲ್ಲದೆ, ಮಹೇಶ್ವರನ ಇನ್ನೊಬ್ಬ ಮಡದಿಯಾಗಿ, ಅದೃಷ್ಟವಿದ್ದರೆ ಗಂಡುಮಗನ ತಾಯಿಯಾಗಿ, ಆತನ ಖರ್ಚಿನಲ್ಲಿ ಸಂಸಾರ ಕಳೆಯುತ್ತ, ಧರ್ಮಪತ್ನಿಯಂತೆ ಆಸ್ತಿಗೂ ಹಕ್ಕುದಾರಳಾಗಿ ಬಾಳಬೇಕೆಂಬುದು ರತ್ನಳ ಮಹದಾಶಯವಾಗಿತ್ತು. ಆ ಆಸೆಯನ್ನು ತೀರಿಸಿಕೊಳ್ಳಲು ಏನೇನು ಮಾಡಬೇಕೊ, ಎಲ್ಲ ಹುಷಾರಾಗಿಯೇ ಮಾಡಿದ್ದಳು. ಆದರೆ, ಕಸಬಿನ ದುರ್ಬುದ್ಧಿ ದುರಾಸೆ ಹುಟ್ಟಿಸಿ ಮಧ್ಯದಲ್ಲಿಯೇ ಎಡವಿಸಿಬಿಟ್ಟಿತು. ಅವಳು ತನ್ನ ಮಾತಿನಂತೆ ನಡೆಯಲಿಲ್ಲ. ಮಹೇಶ್ವರ, ಭೋಗ್ಯಪತ್ರ ರಿಜಿಸ್ಟರ್ ಆದ ಎರಡು ತಿಂಗಳನಂತರ ತನ್ನ ಕೈಗೆ ಬಂದ ಮೂರು ಸಾವಿರ ರೂಪಾಯಿಯನ್ನು ತೆಗೆದುಕೊಂಡು ಹೋಗಿ ರಸೀದಿ ಪಡೆಯದೆ ರತ್ನಳ ಕೈಯಲ್ಲಿಟ್ಟಾಗ, ರತ್ನ ಭೋಗ್ಯಪತ್ರದ ಸುದ್ದಿಯನ್ನೇ ಪ್ರಸ್ತಾಪಿಸಲಿಲ್ಲ. ಆಗ ಮಹೇಶ್ವರ ತಾನಾಗಿ ಅದರ ಬಗ್ಗೆ ಕೇಳಿದಾಗ "ಹರಿದರಾಯಿತು, ಏನು ಅವಸರ........ಹೇಗಿದ್ದರೂ ಒಂದು ವರುಷ ಅವಧಿ ಇದೆಯಲ್ಲ!" ಎಂದು ಲಘುವಾಗಿ ಮಾತಾಡಿ ನಕ್ಕುಬಿಟ್ಟಳು........ಕಸಬಿನ ದೂರಾಲೋಚನೆ ಕೆಲಸಮಾಡಿ, ಮೊಗ್ಗು ಅರಳುವವರೆಗಾದರೂ ಹೀಗೆಯೇ ತಳ್ಳೋಣ, ಎಂದು ಹಿಂದೇಟು ಹೊಡೆದಳು.

ಮಹೇಶ್ವರ ಮೊದಮೊದಲು ಇದನ್ನು ಮಹತ್ತಾಗಿ ಗಣಿಸಲಿಲ್ಲ. ಆದರೆ, ಬದಲಾಯಿಸಿದ ಹೆಂಡತಿಯ ಮತ್ತು ತಾಯಿಯ ಮಾತು ಕೇಳಿದ ಮೇಲೆ, ಹಿತಚಿಂತಕರಾದ ನಂಜುಂಡಪ್ಪನವರ ಬುದ್ಧಿವಾದ ಆದ ಮೇಲೆ, ಕೇಶವಮೂರ್ತಿಯ ಭೇಟಿ ಮಾಡಿದ ಮೇಲೆ ರತ್ನಳ ಏರ್ಪಾಟನ್ನು ಚೆನ್ನಾಗಿ ಗ್ರಹಿಸಿದ.

ರತ್ನ ಯಾರು, ಅವಳ ಹೃದಯ ಎಂಥದು, ಎಂಟು ಹತ್ತು ತಿಂಗಳ ಈ ಏರ್ಪಾಡೇನು ಎಂಬುದೆಲ್ಲ ಹುಳಿ ಉಪ್ಪು ಖಾರ ಸೇರಿದ ರೂಪದಲ್ಲಿ ಕೇಶವಮೂರ್ತಿಯ ಬಾಯಿಂದ ಮಹೇಶ್ವರನ ಕಿವಿ ಕೇಳಿತ್ತು. ಆ ಮಾತು, ಹಿಂದೆ ಜನ ಅವಳ ಬಗ್ಗೆ ಆಡುತ್ತಿದ್ದಂತೆ ಗಾಳಿಯ ವರ್ತಮಾನವಾಗಿರಲಿಲ್ಲ; ಕಂಡ ಖಂಡಿತ ಸಮಾಚಾರವಾಗಿತ್ತು; ಸಾಕಷ್ಟು ನಿದರ್ಶನಗಳಿಂದ ಪುಷ್ಟಿಗೊಂಡಿತ್ತು.

ಆದುದರಿಂದ ಮಹೇಶ್ವರ ಆ ಮನೆಯ ಮೆಟ್ಟಲು ತುಳಿಯುವುದನ್ನು ಬಿಟ್ಟುಬಿಟ್ಟಿದ್ದ.

'ಧೀರವಾಣಿ' ರತ್ನ, ಮಹೇಶ್ವರ ಉಂಗುರದ ಮದುವೆ ಮಾಡಿಕೊಂಡರು........ಅವರು ಈ ದಿನ ವಿಹಾರಾರ್ಥವಾಗಿ ಬೆಂಗಳೂರಿಗೆ ಹೋಗಿದ್ದಾಗ, ಅವರ ಕೈಚೀಲ ಕಳೆದುಹೋಯಿತಂತೆ........ಶ್ರೀ ಮಹೇಶ್ವರಪ್ಪನವರ ಎರಡನೆಯ ಧರ್ಮಪತ್ನಿ ಶ್ರೀಮತಿ ರತ್ನಮ್ಮನವರು ತಮ್ಮ ಸ್ವಗೃಹದಲ್ಲಿ ಶ್ರೀ ಸತ್ಯನಾರಾಯಣ ಪೂಜೆಯನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಿದರು... ಈ ದಿನ ಹೊಸೂರಿನ ಮಾರಮ್ಮನವರ ದೇವಸ್ಥಾನದಲ್ಲಿ ಶ್ರೀ ಮಹೇಶ್ವರಪ್ಪನವರ ಧರ್ಮಪತ್ನಿ ಶ್ರೀಮತಿ ರತ್ನಮ್ಮನವರ ಸೇವಾರ್ಥ ನಡೆಯಿತು—ಎಂದು ಮುಂತಾಗಿ ಪ್ರಚಾರ ಮಾಡಿಬಿಟ್ಟದ್ದರಿಂದ ರತ್ನಳ ಮನೆಯ ಹತ್ತಿರ ರಾಜಪ್ಪ ಶೆಟ್ಟಿಯಾಗಲಿ, ವಿಷಕಂಠುವಾಗಲಿ, ಇನ್ನಾರಾದರೂ ಹೊಸಬರಾಗಲಿ ಸುಳಿಯುವಂತಿರಲಿಲ್ಲ.

ಸಾಲದ್ದಕ್ಕೆ, ಮಹೇಶ್ವರನ ಪ್ರಸಾದ ಈ ಮೋಹಿನಿಯ ಮನಸ್ಸನ್ನೂ ದೇಹವನ್ನೂ ಬದಲಾಯಿಸಿ ಬಿಟ್ಟಿತ್ತು.

ಮದುವೆಯಾದ ಸುಮಾರು ಎರಡು ವರುಷಗಳಲ್ಲಿ ಕಮಲಮ್ಮ ಎರಡು ಬಾರಿ ಮಾತ್ರ ತವರು ಮನೆಗೆ ಬಂದಳು. ಮೊದಲನೆಯ ಬಾರಿ, ಕಂಪನಿ ಮೈಸೂರಿಗೆ ಬಂದಿದ್ದಾಗ ಅಲ್ಲಿ ಕೇವಲ ಒಂದು ತಿಂಗಳು ಕ್ಯಾಂಪ್ ಇದ್ದುದರಿಂದ ಪುಟ್ಟಪ್ಪ ಹೆಂಡತಿಯನ್ನು ಹೊಸೂರಿನಲ್ಲಿ ಬಿಟ್ಟು ತಾನೊಬ್ಬನೇ ಮೈಸೂರಿಗೆ ಹೋಗಿದ್ದ. ಕಂಪನಿ ಮೈಸೂರಿನಿಂದ ಧಾರವಾಡಕ್ಕೆ ಪ್ರಯಾಣ ಮಾಡುವಾಗ ಆತ ಹೊಸೂರಿಗೆ ಬಂದು ಹೆಂಡತಿಯನ್ನು ಕರೆದುಕೊಂಡು ಹೋಗಿದ್ದ. ಆಮೇಲೆ ಸುಮಾರು ಹತ್ತು ತಿಂಗಳನಂತರ, ಏಳು ತಿಂಗಳು ತುಂಬಿದ ಕಮಲ ತಾಯಿಯಾಗಲು ಹೊಸೂರಿಗೆ ಬರಬೇಕಾಯಿತು. ಅವಳು ಊರಿಗೆ ಬಂದು ಎರಡು ತಿಂಗಳಾಗಿತ್ತು.

ಒಂದು ವರುಷದಲ್ಲಿ ಎರಡು ಬಾಣಂತನ, ಇತರ ಖರ್ಚು ಎಲ್ಲ ನಡೆಯಬೇಕು. ಸಂಸಾರ ನಡೆಯುವುದೇ ಕಷ್ಟವಾಗಿತ್ತು.

ಕೆಲವು ದಿನಗಳ ಹಿಂದೆ, ತಾನು ಮಂಚದ ಮೇಲೆ ಮಲಗಿಕೊಂಡು ಆಲೋಚನೆ ಮಾಡುತ್ತಿದ್ದಾಗ, ಆಡಿ ಮನಸೆಳೆದ ಒಳಗಿನ ಮೊಗ್ಗು ಅವಳ ಯೋಚನೆಯನ್ನು ಮುಂದುವರಿಸಿತ್ತು.

ತಾನು ದೇವರ ದಯೆಯಿಂದ ಗಂಡು ಮಗುವಿನ ತಾಯಿಯಾದರೆ, ತನ್ನ

ಪ್ರಯತ್ನ ಸಫಲವಾದರೆ, ಆ ಹೂ ಚೆನ್ನಾಗಿ ಬಾಳೀತು, ಎಂದುಕೊಂಡಾಗ— 'ಸರಿ, ಹೆಣ್ಣು ಮಗುವಾದರೆ?' ಎಂಬ ಪ್ರಶ್ನೆ ಮುಂದೆ ನಿಂತುಕೊಂಡಿತು....

ಬಹಳ ಯೋಚನೆ ಮಾಡಿದ ಮೇಲೆ ಹೊಳೆದ ಒಂದು ಉಪಾಯ ಕಾರ್ಯತಃ ನಡೆಯುತ್ತದೆಂಬ ನಂಬಿಕೆ ಅವಳಿಗೆ ಮೂಡಲಿಲ್ಲ. ಕಮಲಳಿಗೂ ತನಗೂ ಅಷ್ಟಕ್ಕಷ್ಟೇ ಇರುವಾಗ, ಅವಳು ಈ ಏರ್ಪಾಟಿಗೆ ಒಪ್ಪಿಯಾಳೆ ಎನ್ನಿಸಿತು.

ಅವಳಿಗೂ ಹೆಣ್ಣು ಮಗುವೇ ಆದರೆ?

? ? ? ?

ತುಂಬ ಬೇಸರಗೊಂಡಿದ್ದ ರತ್ನ 'ಧೀರವಾಣಿ'ಯ ಹಾಳೆಯನ್ನು ಮಗುಚಿ ಹಾಕುತ್ತ, ನನ್ನನ್ನು ಅವಮಾನ ಮಾಡಲು ಹೊರಟ 'ಧೀರವಾಣಿ'ಯಿಂದಲೇ ಅವಮಾನ ಮಾಡಿಸಿ ಗೆಲ್ಲುತ್ತೇನೆ, ಎಂದುಕೊಂಡಳು.

ಅವಳ ಎಡಗೈ, ಫೈಲಿನ ರಟ್ಟನ್ನು ಟಪ್ಪನೆ ಮುಚ್ಚುತ್ತ ಮನಸ್ಸಿನ ನಿರ್ಧಾರಕ್ಕೆ ಮುಕ್ತಾಯ ಹಾಕಿತು.

* * * *

ಮೊಟ್ಟಮೊದಲು ಆ ಮನೆ ಎಳೆಯ ಮಗುವನ್ನು ಕಂಡಿತ್ತು. ಕಮಲು ಒಂದು ದಿನದ ಮಗನನ್ನು ಮೊರದಲ್ಲಿಟ್ಟುಕೊಂಡು ಒಳಗಿನ ಕೋಣೆಯಲ್ಲಿ ಮಲಗಿ ಏನೋ ಯೋಚನೆ ಮಾಡುತ್ತಿದ್ದಳು.

ಪಡಸಾಲೆಯಲ್ಲಿ ಕುಳಿತು ಕಾಗದ ಬರೆಯುತ್ತಿದ್ದ ರತ್ನ, ಬಾಗಿಲ ಹತ್ತಿರ ನಿಂತಿದ್ದ ನಂಜುಂಡಿಯನ್ನು ಸಿಕ್ಕಾಬಟ್ಟೆ ಬಯ್ದಳು.

"ನಿನ್ನ ತಲೆಯಲ್ಲಿ ಏನು ತುಂಬಿದೆಯೋಪ್ಪ.......ಕಾಗದ ಹಾಕು, ಎಂದಕೂಡಲೇ, ಎತ್ತು ಈತು ಕೊಟ್ಟಿಗೇಲ್ ಕಟ್ಟೊನ್ನೋ . ಸಮಾಚಾರ ಮಾಡಿದಿ. ಹೋಗುವಾಗ ನನ್ನನ್ನು ಕೇಳಬಾರದಿತ್ತೆ? ಎಂಥ ಕೆಲಸ ಮಾಡಿಬಿಟ್ಟೆ!........ಹೋಗು, ಬೇಗ ಹೋಗಿ ಇದನ್ನು ಪೋಸ್ಟ್ ಮಾಡಿಬಿಟ್ಟು ಬಾ" ಎಂದು, ಬರೆದು ಮುಗಿಸಿದ ಬೇರೊಂದು ಕಾಗದವನ್ನು ನಂಜುಂಡಿಯ ಕೈಯಲ್ಲಿಟ್ಟು, ಅವನನ್ನು ಪೋಸ್ಟಾಫೀಸಿಗೆ ಕಳಿಸಿದಳು.

ರತ್ನಳ ಏರ್ಪಾಡಿಗೆ ಕಮಲ ಮೊದಲು ಒಪ್ಪಲಿಲ್ಲ. ತಾಯಿಯಾದ ಆ ಹೃದಯ, ಅದರಲ್ಲೂ ಗಂಡುಮಗನ ತಾಯಿಯಾದ ಆ ಹೆಂಗರುಳು ತನಗೆ

ಆಗದ ರತ್ನಳ ಸಲಹೆಯನ್ನು ಹೇಗೆ ಒಪ್ಪೀತು! ಖಡಾಖಂಡಿತವಾಗಿ 'ಆಗೊಲ್ಲ' ಎಂದುಬಿಟ್ಟಳು. ರತ್ನ ಕೋಪಗೊಂಡು, ಇರುವ ಸುದ್ದಿ ತಿಳಿಸುವ ಒಂದು ಕಾಗದವನ್ನು ಪುಟ್ಟಪ್ಪನಿಗೆ ಬರೆದು "ನಂಜುಂಡಿ, ಇದನ್ನು ಪೋಸ್ಟ್ ಮಾಡೊ" ಎಂದಳು. ನಂಜುಂಡಿ ಮಿಂಚಿನಂತೆ ಕೆಲಸಮಾಡಿಬಿಟ್ಟ.

ಆದರೆ, ತಾಯಿ ಲಕ್ಷ್ಮಮ್ಮ ಕಣ್ಣೀರು ಹಾಕಿ, "ಇದು ಬರೀ ಹೊರಗಿನ ಮಾರ್ಪಾಟು ಕಮಲೂ, ಇದರ ಉದ್ದೇಶ ನಿನಗೆ ಗೊತ್ತಾಗೊಲ್ಲವಲ್ಲ!........ ರತ್ನಾನೂ ನಿನ್ನ ಹಾಗೇ ಸಂಸಾರವಂದಿಗಳಾಗಿ, ಬೀದಿಯ ಕಾಟವಿಲ್ಲದೆ ಬಾಳಬೇಕೂಂತ ಮನಸ್ಸು ಮಾಡಿರೋವಾಗ ನೀನು ಇಷ್ಟು ಸಹಾಯ ಮಾಡದೇ ಇದ್ದರೆ ಹ್ಯಾಗೆ ಹೇಳು....... ನೀನು ಯಾವಾಗ ಬೇಕಾದರೂ ಬರ್ತಿರಬಹುದು, ಹೋಗ್ತಿರಬಹುದು........ಅದೂ ಅಲ್ಲದೆ ರತ್ನಾನೂ ನಿನ್ನ ಹಾಗೇ ಅವಳ ಮಗಳನ್ನ ನಿನ್ನ ಹತ್ತಿರ ಬಿಡಲು ಒಪ್ಪಿರ್ತಾಳಲ್ಲ—ಅವಳೂ ತಾಯಿ ಆಗೊಲ್ಲವೆ? ಅವಳ ಮನಸ್ಸೂ ನಿನ್ನ ಹಾಗೆಯೇ ಯೋಚನೆ ಮಾಡೊಲ್ಲವೆ? ಮನಸ್ತಾಪ ಬಿಟ್ಟು, ಇಬ್ಬರೂ ಸವರಿಸ್ಕೊಂಡು ಹೋಗಬೇಕು........" ಎಂದಾಗ ಕಮಲ "ಅವಳೂ ಗಂಡು ಮಗು ಹೆತ್ತರೆ?" ಎಂದಳು. ಲಕ್ಷ್ಮಮ್ಮ "ಅದಾದರೆ, ಈ ತಂಟೆಯೇ ಇಲ್ಲವಲ್ಲ ತಾಯೀ! ಅದಕ್ಕೇ ನಾ ಹೇಳೋದು, ಇದು ಒಂದು ತಿಂಗಳ ಮಾರ್ಪಾಟೊಂತ. ಒಂದು ತಿಂಗಳಲ್ಲಿ ಎಲ್ಲ ಗೊತ್ತಾಗುತ್ತೆ. ಅವಳು ಗಂಡು ಮಗು ಹೆತ್ತರೆ ಯೋಚನೆಯೇ ಇಲ್ಲ. ಪುಟ್ಟಪ್ಪನಿಗೆ ಇನ್ನೊಂದು ಕಾಗದ ಬರೆಯೋದು........'ರತ್ನ ಕಾಗದ ಬರೀತಾ ಹೀಗೆ ತಪ್ಪು ಬರೆದುಬಿಟ್ಟದಾಳಂತೆ. ಅವಳಿಗೆ ಗೊತ್ತಾಗಲಿಲ್ಲ........ಆಮೇಲೆ ಸರಿಯಾದ ಸಮಾಚಾರಾನ ಕಮಲು ತಿಳಿಸಿರಬಹುದೂಂತ ಅವಳು ಸುಮ್ಮನಾದಳು. ರತ್ನ ಕಮಲು ಒಬ್ಬರಿಗೊಬ್ಬರು ಮಾತಾಡದೇ ಇರೋದರಿಂದ ಈ ವಿಷಯ ಹೀಗಾಯ್ತು,' ಎಂದುಬಿಟ್ಟರೆ ಆಗ್ಹೋಯ್ತು. ಗಂಡು ಹೆಣ್ಣಾದರೆ ಅದು ವಿರಸಕ್ಕಿಟ್ಟುಕೊಳ್ಳುತ್ತೆ. ಆದರೆ, ಹೆಣ್ಣು ಗಂಡಾದರೆ ಎಲ್ಲ ಸುಲಭವಾಗಿ ಸರಿಹೋಗುತ್ತೆ, ಅಲ್ವೆ ತಾಯಿ?........ಈಗ ಆ ಮಹೇಶ್ವರಪ್ಪನೋರು ಮೋಸ ಮಾಡಿರೋದರಿಂದ ಇಷ್ಟೆಲ್ಲ ಮುಳ್ಳಿಗೆ ಮುಳ್ಳು ಮಾಡಬೇಕಾಯ್ತು........ನಾಳೆ ಕೇಸು ನಡೆಯುತ್ತೆ........ಅದಕ್ಕೆ ಇದೊಂದು ಬಲ ಇದ್ದರೆ ಕೊನೇ ಪಕ್ಷ

ಒಂದಿಷ್ಟು ಜೀವನಾಂಶವಾದರೂ ಸಿಕ್ಕೀತಲ್ಲಾಂತ. ಆ ಮಗೂಗೆ ಮುಂದಿನ ಏರ್ಪಾಟು ಮಾಡಿದ ಹಾಗಾಗುತ್ತೆ. ಆಗ ನಿನ್ನ ಮಗನೇ ಚೆನ್ನಾಗಿ ಬಾಳ್ತಾನೆ. ಅದಕ್ಕೋಸ್ಕರ ತಾಯಿ ನಾನ್ಕೇಳ್ತಾ ಇರೋದು........ಇಲ್ದೇ ಇದ್ರೆ ಇಷ್ಟೆಲ್ಲ ಗೋಗರೀಬೇಕೆ, ಹೇಳು. ನೀ ಕಂಡ ಹಾಗೆ ರತ್ನ ಏನ್ ಕೈಲ್ಲದರೀದಿದ್ದೋಳೆ. ಮನಸ್ಸು ಮಾಡಿದರೆ ಸಾವಿರಾರು ರೂಪಾಯಿ ಸಂಪಾದಿಸ್ತಾಳೆ. ಏನೋ ಆದದ್ದಾಯ್ತು, ಮುಂದಾದರೂ ಮಾನವಾಗಿ ಬಾಳೋಣಾಂತ, ನಿರ್ಧರಿಸಿ ಕೊಂಡಳು. ಆದರೆ, ದೇವರ ಮನಸ್ಸಿಗೆ ಬರಲಿಲ್ಲ; ಎಲ್ಲ ಹೀಗಾಗ್ಹೋಯ್ತು ....ಆದರೂ ನಮ್ಮ ಕೈಲಾದ ಪ್ರಯತ್ನ ನಾವು ಮಾಡಬೇಕು....ನೋಡೋಣ ....ಹಾಗೆ ಬೇಕಾದರೆ ನಿನಗೆ ನನ್ನ ಮನೇನ ಬರೆದುಕೊಡ್ತೀನಿ....ಅದೃಷ್ಟವಿದ್ದರೆ ರತ್ನಂಗೂ ನಾಲಕ್ಕಾಸು ಬರುತ್ತೆ. ಇಬ್ಬರೂ ಸುಖವಾಗಿರಬಹುದು. ನೀನೂ ಯಾವಾಗ ಬೇಕೋ ಆವಾಗ ಬರ್ತಾ ಇರು. ಅವಳು ಮಗಳ್ನೂ ನೋಡಿದ ಹಾಗಾಗುತ್ತೆ, ನೀನು ಮಗನ್ನೂ ನೋಡಿದಹಾಗಾಗುತ್ತೆ........"

ಎಂದು ಎಲ್ಲ ವಿವರಿಸಿ ಹೇಳಿದ ಮೇಲೆ ಕಮಲ ಏನೇನೋ ಯೋಚನೆ ಮಾಡಿ 'ಹ್ಞ' ಎಂದು ಒಪ್ಪಿದ್ದಳು. 'ಇದು ಒಂದು ತಿಂಗಳ ಏರ್ಪಾಟು. ಆಮೇಲೆ ಮುಂದುವರಿದರೂ ತನ್ನ ಮಗನ ಹಿತಕ್ಕೆ, ತನ್ನ ಹಿತಕ್ಕೆ ತನ್ನ ಗಂಡನ ಹಿತಕ್ಕೆ; ಏತಕ್ಕಾಗಬಾರದು....ತಾನೂ ತವರಿನ ಸಂಬಂಧವನ್ನು ಬೆಳಸಿ, ಉಳಿಸಿಕೊಂಡಂತಾಗುತ್ತದೆ, ನಡೆಯಲಿ' ಎಂದುಕೊಂಡಳು.

ಅವಳ ಒಪ್ಪಿಗೆ ಲಕ್ಷಮ್ಮನಿಗೆ ರತ್ನಳಿಗೆ, ತುಂಬ ಆನಂದವನ್ನುಂಟು ಮಾಡಿತು....ಆದರೆ, ಅಷ್ಟು ಇಷ್ಟು ಉಳಿದಿದ್ದ ಕೋಪ, ಮೊದಲು ಬರೆದಿದ್ದ ಕಾಗದವನ್ನು ಆಗಲೆ ಪೋಸ್ಟ್ ಮಾಡಿ ಬಂದಿದ್ದ ನಂಜುಂಡಿಯ ಮೇಲೆ ಹಾರಿ ದಂಡಿಸಿತು.

'ಈಗ ಸ್ವಲ್ಪ ಹೊತ್ತಿಗೆ ಮುಂಚೆ ಬರೆದ ಕಾಗದದಲ್ಲಿ ಸೌ|| ಕಮಲ ಗಂಡುಮಗುವನ್ನು ಹೆತ್ತಳು, ಎಂದಿದೆ. ಅದು ಲೇಖನಿಯ ತಪ್ಪು. ಸೌ|| ಕಮಲು ಹೆತ್ತುದು ಹೆಣ್ಣುಮಗು, ಮಗು, ಬಾಣಂತಿ ಆರೋಗ್ಯವಾಗಿದ್ದಾರೆ' ಎಂದು ಬರೆದು ಮುಗಿಸಿದ ಇನ್ನೊಂದು ಕಾಗದವನ್ನು ನಂಜುಂಡಿ ತೆಗೆದು ಕೊಂಡು ಅಪ್ಪಣೆಯಂತೆ ಓಡಿಹೋಗಿ ಅದೇ ಅಂಚೆಯ ಪೆಟ್ಟಿಗೆಗೆ ಹಾಕಿ ಬಂದ.

ಅದೃಷ್ಟವಶಾತ್, ಮೊದಲನೆಯ ಕಾಗದ ಪುಟ್ಟಪ್ಪನನ್ನು ತಲಪಲೇ

ಇಲ್ಲ !

ರತ್ನ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು ಲಾಯರ್ ಚಂದ್ರಶೇಖರಪ್ಪ ನವರ ಮನೆಗೆ ಹೋದಾಗ, ಅವರು ಯಾವ ರೀತಿ ಕೇಸು ಮಾಡಬಹುದು ಎಂಬ ಬಗ್ಗೆ ಮಾತಾಡಿದರು.

ರತ್ನಳ ಹತ್ತಿರ ಇದ್ದ ಫೈಲನ್ನೆಲ್ಲ ಅಭ್ಯಾಸಮಾಡಿದ್ದ ಅವರು, ಅವಳು ಬಾಯಿಬಿಟ್ಟು ಹೇಳಿದ ಫೀಜಿನ ಅಂಕೆಗೂ ಮರುಳಾಗಿ " ಕೇಸು ಗೆಲ್ಲಬಹುದು ; ರಿಕಾರ್ಡೆಲ್ಲ ಸರಿಯಾಗಿದೆ ; ಇಷ್ಟಿದ್ದರೆ ಬೇಕಾದಷ್ಟು ಮಾಡಬಹುದು....ಆದರೆ ಲಾಯರ್ ನೋಟೀಸ್ ಕೊಡೋಕೆ ಮುಂಚೆ ಎರಡು ಕೆಲಸ ಮಾಡಿ....ಒಂದು, ನಿಮ್ಮ ಮನೇ ಮುಂದೆ " ಮಿಸೆಸ್ ಎಚ್. ಎಂ. ಮಹೇಶ್ವರಪ್ಪ" ಅಂತ ದೊಡ್ಡ ಬೋರ್ಡು ಹಾಕಿಸೋದು. ಎರಡನೇದು, ಇಷ್ಟು ದಿನ ಮುಖ ನೋಡದೆ ಹೊರಟುಹೋಗಿರುವ ಗಂಡನಿಗೆ ಹೆಂಡತಿ ಬರೆಯೋಹಾಗೆ ಒಂದು ಕಾಗದ ಬರೆಯೋದು....ನೀವು ಇಷ್ಟು ಮಾಡಿದ ಮೇಲೆ—ಹ್ಯಾಗಿದ್ದರೂ ನೀವು ಹೇಳಿದ ಹಾಗೆ ಇನ್ನೂ ಎರಡು ಮೂರು ತಿಂಗಳಾದ ಮೇಲೆ ತಾನೆ ನೋಟೀಸ್ ಕೊಡೋದು ; ಅಷ್ಟು ಹೊತ್ತಿಗೆ ಈ ಏರ್ಪಾಟಿನ ಪ್ರತಿಕ್ರಿಯೆ ಏನೇನಾಗುತ್ತೆ ಅನ್ನೋದೂ ಗೊತ್ತಾಗುತ್ತೆ ; ಆಮೇಲೆ ಹ್ಯಾಗೆ ನೋಟೀಸು ಬರೆಯೋದು. ಮುಂದಿನ ಕೆಲಸ ಮಾಡೋದು ಅನ್ನೋದನ್ನ ನೋಡೋಣ" ಎಂದು ಸಲಹೆ ಮಾಡಿ, ಹುರಿದುಂಬಿಸಿ ಕಳಿಸಿದರು.

ಅವರ ಮನೆಗೆ ಹೋಗಿ ಬಂದ ಮಾರನೆಯ ದಿನವೇ ಅವರ ಸಲಹೆಯಂತೆ ಆ ಎರಡು ಕೆಲಸಗಳನ್ನೂ ರತ್ನ ಅಚ್ಚುಕಟ್ಟಾಗಿ ಮಾಡಿದಳು.

ಅದಾದ ಒಂದು ವಾರದೊಳಗಾಗಿ ಆ ಮನೆ ಹೆಣ್ಣು ಮಗುವನ್ನು ತೂಗಿತು.

ಆದರೆ, ಸೌ|| ರತ್ನಮ್ಮ ಈ ದಿನ ಗಂಡು ಮಗು ಹೆತ್ತಳೆಂದು ತಿಳಿಸುವ ಎರಡು ಕಾಗದ ಮಹೇಶ್ವರಪ್ಪನವರ ಅಂಗಡಿಗೂ, ಮನೆಗೂ ಕಲ್ಲುಸಕ್ಕರೆಯೊಡನೆ ಹೋದುವು.

## ೧೫

ಈ ಕಲ್ಲುಸಕ್ಕರೆಯ ಸಿಹಿ ಮಹೇಶ್ವರನ ಮನೆಯಲ್ಲಿ, ಮನಸ್ಸಿನಲ್ಲಿ ಕಹಿ ಹಿಂಡಿ ಎರಡನ್ನೂ ಕೆಣಕಿಬಿಟ್ಟಿತು.

ಯಾವುದೋ ಒಂದು ವಿಷಗಳಿಗೆಯಲ್ಲಿ, ಏನೋ ದುರ್ಬುದ್ಧಿ ಹುಟ್ಟಿ ಮಾಡಬಾರದ್ದು ಮಾಡಿ ಎಡವಿದ್ದ ಮಹೇಶ್ವರನ ಮನಸ್ಸು ಸಾಕಷ್ಟು ಪಶ್ಚಾತ್ತಾಪಗೊಂಡಿದ್ದರೂ, ಮುಳ್ಳಿನ ಮೇಲೆ ಹಾಕಿದ್ದ ಬಟ್ಟೆಯನ್ನು ಮೆಲ್ಲಗೆ ಹೇಗೆ ತೆಗೆದುಕೊಳ್ಳಬೇಕೆಂದು ಯೋಚಿಸುತ್ತಿರುವಾಗ ಇಂಥ ಹತ್ತಾರು ಪ್ರಸಂಗಗಳು ಒಂದರ ಮೇಲೊಂದೆರಗಿ ಅವನ ಸಹನೆಯನ್ನು ಸಡಿಲಿಸಿದ್ದುವು, ಕೋಪವನ್ನು ಕೆರಳಿಸಿದ್ದುವು.

ರತ್ನ, ಅವನಿಗೆ ಮೊದಮೊದಲು ಮಡದಿಯಂತೆ ಕಂಡರೂ ಆಮೇಲೆ ಮಾಯಾವಿಯಂತೆ ಕಂಡಳು.

ತಮ್ಮಿಬ್ಬರಿಗೂ ಮದುವೆ ಆಯಿತೆಂದು ಮೊದಲ ದಿನ ಆನಂದಪಟ್ಟರೂ, ಆಮೇಲೆ ವಿಷಕಂಠುವಿನ ' ಪ್ಲಿಮತ್ ' ಎರಡು ದಿನ ರಾತ್ರಿ ಲಕ್ಷ್ಮಮ್ಮನ ಮನೆಯ ಮುಂದೆ ನಿಂತಿದ್ದುದನ್ನು ಮಹೇಶ್ವರ ಕಣ್ಣಾರ ಕಂಡು, ರತ್ನಳನ್ನೇ " ಇದೇನು?" ಎಂದು ಕೇಳಿದ್ದ. ಅದಕ್ಕೆ ಅವಳು ನಗುತ್ತ " ಅದೇ ಸೈಟಿನ ವಿಷಯ ! " ಎಂದು, ಎಲ್ಲರಿಗೂ ಗೊತ್ತಿರುವ ವಿಷಯವನ್ನೇ ಒತ್ತಿ ಹೇಳಿದ್ದಳು. ಒಂದು ದಿನ ಸಿಕ್ಕಾಬಟ್ಟೆ ಮಾತಾಡಿದ ಮೇಲೆ, ಅವಳ ಮನೆಯ ಮುಂದೆ ಆ ಹಳೆಯ ಪಶುಗಳಾವುವೂ ಈಗ ಸುಳಿಯುತ್ತಿಲ್ಲ, ಎಂಬ ನಂಬಿಕೆ ಅವನಲ್ಲಿ ಮೂಡಿತು.

ಆದರೆ, ಆ ' ಧೀರವಾಣಿ ' ಎಲ್ಲ ಹದಗೆಡಿಸಿಬಿಟ್ಟಿತ್ತು. ಕರೆಸ್ಪಾಂಡೆಂಟ್ ಕೇಶವಮೂರ್ತಿಯೂ ರತ್ನಳಿಗಾಗಿ ಹಾತೊರೆಯುತ್ತಿದ್ದ ಎಂಬುದು 'ಧೀರವಾಣಿ' ಯಲ್ಲಿ ಬಂದ ಸುದ್ದಿಯನ್ನು ಓದಿದ ಮೇಲೆ ರತ್ನಳಿಂದಲೇ ತಿಳಿದಿತ್ತು. 'ಆ ಸುದ್ದಿ ಬಂದರೇನು, ಇರುವ ವಿಷಯ ಬರೆದಿದ್ದಾನೆ ' ಎಂದು ರತ್ನ ಅಂದುಕೊಂಡರೂ, ಆಗಬಾರದ್ದನ್ನು ಮಹೇಶ್ವರನ ಹೆಂಡತಿ, ತಾಯಿ ಓದಿ, ಕೇಳಿ ಗೋಳಾಡತೊಡಗಿದರು.

ಹೊತ್ತಾಗಿ ಮನೆಗೆ ಬರುತ್ತಿದ್ದ, ಸಿಕ್ಕಾಬಟ್ಟೆ ರೇಗಾಡುತ್ತಿದ್ದ ಗಂಡನ ನಡತೆಯನ್ನು ನೋಡಿ ಆಶ್ಚರ್ಯಪಡುತ್ತಿದ್ದ ಗಂಗಮ್ಮನಿಗೆ ' ಧೀರವಾಣಿ ' ದಿಕ್ಕು ತೋರದಂತೆ ಮಾಡಿತ್ತು. ಕೆಂಪು ಚೌಕಟ್ಟು ಹಾಕಿಕೊಂಡು ಮನೆಯೊಳಗೆ ಧುಮುಕಿದ್ದ ಆ ವರ್ತಮಾನ ಅವಳ ಮನಸ್ಸನ್ನು ನಾನಾ ಯೋಚನೆಗಳಿಗೀಡು ಮಾಡಿತ್ತು.

ರತ್ನಳ ಮಾತನ್ನು ನಂಬಿದ್ದ ಮಹೇಶ್ವರ ಕೇಶವಮೂರ್ತಿಯ ಕತೆ ಹೇಳಿ,

ಹೆಂಡತಿಯನ್ನೂ ತಾಯಿಯನ್ನೂ ಸಮಾಧಾನ ಮಾಡಲು ಪ್ರಯತ್ನಿಸಿದ್ದ. ಆದರೆ, ತಾಯಿ ಪಾರ್ವತಮ್ಮ “ ನಿನಗೂ ಅವಳಿಗೂ ಯಾಕೆ ಅವನು ಗಂಟು ಹಾಕ್ತಾನೆ ಹೇಳು ?....ಹೋಗಲಿ, ನಿನ್ನ ಉಂಗುರ ಯಾಕೆ ಅವಳ ಹತ್ತಿರ ಹೋಯ್ತು, ಅವಳ ಉಂಗುರ ಯಾಕೆ ನಿನ್ನ ಹತ್ತಿರ ಬಂತು ? ” ಎಂದು ಕೋಪ ಗೊಂಡು ಕೇಳಿದ್ದಳು.

ವ್ಯಾಪಾರವನ್ನು ಹಾಳುಮಾಡಿಕೊಂಡು ದಿಕ್ಕು ತೋರದೆ ಒದ್ದಾಡುತ್ತಿದ್ದ ಮಹೇಶ್ವರನನ್ನು, ಸೂಜಿಗಲ್ಲಿನಂತಿದ್ದ ರತ್ನ ಆಗಾಗ ಸೆಳೆದು ಸಂತೋಷಗೊಳಿಸು ತ್ತಿದ್ದಳು. ಆದರೆ ಈ ಭೋಗ್ಯಪತ್ರದ ಕತೆ ವಿರಸವನ್ನು ತಂದುಹಾಕುವುದಕ್ಕೂ ವಿಷಯ ತಿಳಿದ ಹಿತಚಿಂತಕ ನಂಜುಂಡಪ್ಪನವರು ಬುದ್ಧಿಹೇಳುವುದಕ್ಕೂ ‘ ಧೀರ ವಾಣಿ ’ಯಿಂದ ಬುದ್ಧಿ ಕಲಿತ ಗಂಗಮ್ಮ ಮನಸ್ಸು ಬದಲಾಯಿಸುವುದಕ್ಕೂ ಸರಿ ಹೋಯಿತು.

ರತ್ನ ಹೇಳಿದಂತೆ ಮಹೇಶ್ವರ ರಸೀದಿ ಪಡೆಯದೆಯೆ, ಮೊದಲು ಒಂದು ಸಾವಿರ ರೂಪಾಯಿ ತಂದುಕೊಟ್ಟ. ಆಕೆ ಹೇಳಿದಂತೆಯೇ ಅವಳು ವಾಸವಾ ಗಿದ್ದ ಮನೆಯನ್ನು ಐದು ಸಾವಿರ ರೂಪಾಯಿಗೆ ಭೋಗ್ಯ ಮಾಡಿದಂತೆ ಪತ್ರ ಬರಸಿ ರಿಜಿಸ್ಟರ್ ಮಾಡಿಸಿದ. ತನ್ನ ಮಾತಿನಂತೆಯೆ ಎರಡು ತಿಂಗಳನಂತರ, ಮೂರು ಸಾವಿರ ರೂಪಾಯಿ ಒಯ್ದು ರಸೀದಿ ಪಡೆಯದೆ ಅವಳ ಕೈಯಲ್ಲಿ ಹಾಕಿದ. ಆದರೆ, ಅವಳು ತನ್ನ ಮಾತಿನಂತೆ ನಡೆಯಲಿಲ್ಲ. ‘ ಭೋಗ್ಯಪತ್ರ ಕೊಡು, ಹರಿದು ಹಾಕೋಣ,’ ಎಂದರೆ ‘ ಇರಲಿ ಪರವಾಯಿಲ್ಲ ’ ಎಂದು ಹಿಂದೇಟು ಹೊಡೆದಳು.

‘ ಅವಳು ಮಾಯಾವಿ, ಮನೆ ಹಾಳು ಮುಂಡೆ ’ ಎಂಬ ಮಾತುಗಳನ್ನು ತಾಯಿಯ ಬಾಯಿಂದ, ನಂಜುಂಡಪ್ಪನವರ ಬಾಯಿಂದ ಕೇಳಿದ್ದ ಮಹೇಶ್ವರ ಅಂದು ಕೆಟ್ಟ ಯೋಚನೆ ಮಾಡಿದ. ರತ್ನ ಒಂದು ವರುಷದನಂತರ, ‘ಭೋಗ್ಯದ ಹಣ ವಾಪಸು ಕೊಡು ’ ಎಂದು ನೋಟೀಸು ಕೊಟ್ಟರೆ? ರಸೀದಿ ತೆಗೆದು ಕೊಳ್ಳದೆ ನಾನು ಕೊಟ್ಟಿರುವ ನಾಲ್ಕು ಸಾವಿರ ರೂಪಾಯಿಯನ್ನು ನೀವೆಲ್ಲಿ ಕೊಟ್ಟಿರಿ ? ಎಂದು ಕೇಳಿದರೆ ?

‘ ಆ ಕಣ್ಣಿಗೆ ಬಲಿಯಾಗಿ ಬೇಸ್ತುಬಿದ್ದುಬಿಟ್ಟೆದೀಯಲ್ಲ ! ’ ಎಂದಿತು, ಯಾವುದೋ ಒಂದು ಮೂಲೆಯಲ್ಲಿದ್ದ ವಿವೇಕ.

ಆದರೂ ಆ ಕಣ್ಣೇ ಈ ವಿವೇಕವನ್ನು ಹೊಡೆದೋಡಿಸಿ, ಹೃದಯವನ್ನು ಸೆಳೆದು ಅಪ್ಪಿಕೊಂಡಿತ್ತು.

ರತ್ನ ತಾಯಿಯಾಗುತ್ತಾಳೆ, ಎಂಬುದು ತಿಳಿದಾಗ ಮಹೇಶ್ವರನ ಎದೆ ಧಸಕ್ಕೆಂದಿತು. 'ಧೀರವಾಣಿ' ಪತ್ರಿಕೆ ಆಗಲೆ ಊರೆಲ್ಲ ಸಾಕಷ್ಟು ಪ್ರಚಾರ ಮಾಡಿತ್ತು. "ಎಲ್ಲ ಬಿಟ್ಟು ಮಹೇಶ್ವರ ಈ ಗುಂಡಿಗೆ ಬಿದ್ದನಲ್ಲ!" ಎಂದು ಪೇಟೆಯ ಬೀದಿಯಲ್ಲೆಲ್ಲ ಮಾತಾಡಿಕೊಳ್ಳುತ್ತಿದ್ದರು. ಆತ ಹೊರಗೆ ತಲೆ ಯೆತ್ತಿ ನಡೆಯುವುದೇ ಕಷ್ಟವಾಯಿತು. ಅಂಗಡಿಯ ವ್ಯಾಪಾರದಲ್ಲಿ ಆಸಕ್ತಿಯೇ ಇಲ್ಲದೆ, ಆಸಕ್ತಿ ಇದ್ದರೂ ಬೀದಿಯಲ್ಲಿ ಜನರ ಮುಂದೆ ಎಂಟು ಗಂಟೆ ಕೂಡುವ ಮುಖವಿಲ್ಲದೆ, ನಿಶ್ಚಿಂತೆಯಾದ ಮನಸ್ಸಿಲ್ಲದೆ, ಮನೆಯಲ್ಲಿ ಮೂರು ನಿಮಿಷದ ಶಾಂತಿಇಲ್ಲದೆ 'ಇದು ಹೇಗೆ ಬಗೆಹರಿದೀತಪ್ಪಾ?' ಎಂದು ಒಳಗೊಳಗೇ ಕೊರಗುತ್ತಿದ್ದ.

ಒಂದು ಭಾನುವಾರ ಮಟಮಟ ಮಧ್ಯಾಹ್ನ, ಮನೆಯಲ್ಲಿ ಜಗಳ ಆಡಿ ಕೊಂಡು ಮಹೇಶ್ವರ ಮಾರಮ್ಮನ ಚೌಕದ ಕಡೆಗೆ ಬೇಗಬೇಗ ಹೋಗುತ್ತಿದ್ದಾಗ ಅವನ ಮನಸ್ಸಿನಲ್ಲಿ ಏನೇನೋ ಯೋಚನೆಗಳುಂಟಾಗಿದ್ದುವು. ಮದುವೆಯಾದ ಒಂದು ಹೃದಯದೊಡನೆ ಜಗಳ ಆಡಿ "ಕಣ್ಣಿಗೆ ಮಣ್ಣೆರಚುವ ಕಾಮಿನಿಯರ ಸಹವಾಸವೇ ನಿಮಗೆ ಬೇಕು: ಹೋಗಿ, ಹಾಳಾಗಿ" ಎನ್ನಿಸಿಕೊಂಡು, ಮದುವೆ ಯಾದಂತೆ ಆದ ಇನ್ನೊಂದು ಹೃದಯದ ಹತ್ತಿರಕ್ಕೆ ಶಾಂತಿಯ ಸುಖಕ್ಕಾಗಿ ಹೊರಟಿದ್ದ ಆ ಮನಸ್ಸು ಹತ್ತಿರದ ಸೂಜಿಗಲ್ಲಿಗೆ ಸಿಕ್ಕಿ 'ನಾನೇಕೆ ಗಂಗೂನ್ನ ಬಿಟ್ಟುಬಿಡಬಾರದು?' ಎಂದೂ ಅಂದುಕೊಂಡಿತ್ತು.

ಆದರೆ, ಬಿಳಿಯ ಜುಬ್ಬ ಮತ್ತು ಪಾಯಿಜಾಮ ಹಾಕಿಕೊಂಡ ಕೇಶವ ಮೂರ್ತಿ ಲಕ್ಷಮ್ಮನ ಮನೆಯಿಂದ ಹೊರಬಿದ್ದು, ಹಾಗೆ ಹೋದುದನ್ನು ಕಂಡ ಕೂಡಲೆ ಆ ಮನಸ್ಸು ಬದಲಾಯಿಸಿತು. ಯೋಚನೆಯ ಹೊಳೆ ಬೇರೆಯ ಕಡೆಗೆ ಹೊರಟಿತು.

ಅವನ ದೇಹ ನೇರವಾಗಿ ನಂಜುಂಡಪ್ಪನವರ ಮನೆಯ ಮುಂದೆ ಬಂದು ನಿಂತಿತು. ನಂಜುಂಡಪ್ಪನವರು ಆಗತಾನೇ ಊಟಮಾಡಿ ಮಲಗಿಕೊಂಡಿದ್ದರು. ಅಪರೂಪಕ್ಕೆ ಬಂದ ಮಹೇಶ್ವರನನ್ನು ಕಂಡು ಆಶ್ಚರ್ಯದಿಂದ "ಇದೇನು ಮಹೇ ಶ್ವರ! ಯಾಕೆ ಬಂದೆ?" ಎಂದು ಕೇಳಿದರು.

" ಯಾಕೂ ಇಲ್ಲ, ದಯವಿಟ್ಟು ಸ್ವಲ್ಪ ಬರ್ತೀರಾ ? "

" ಎಲ್ಲಿಗೆ ? "

" ಎಲ್ಲಿಗೂ ಇಲ್ಲ. ಹೀಗೇ—ಸ್ವಲ್ಪ ಮಾತಾಡಬೇಕು........ನಮ್ಮಂಗಡೀಗೇ ಹೋಗೋಣ : ಬಾಗಿಲು ತೆಗೆದುಕೊಂಡು ಅಲ್ಲೇ ಕುಳಿತುಕೊಳ್ಳೋಣ."

" ಏನು ವಿಷಯ ? "

" ಗೊತ್ತೇ ಇದೆಯಲ್ಲ—ನೀವು ಹೇಳ್ತಾ ಇರೋದು."

" ಸರಿ........ಬರ್ತೀನಿ ತಾಳು " ಎಂದು ನಂಜುಂಡಪ್ಪನವರು, ಅಂಗಿ ಹಾಕಿಕೊಂಡು ರೇಶಿಮೆಯ ಶಲ್ಯ ಹೊದ್ದುಕೊಂಡು ಹೊರಗೆ ಬಂದರು....

ಅಂಗಡಿಯಲ್ಲಿ ಕುಳಿತು ಮಾತಾಡಿದಾಗ ಮಹೇಶ್ವರಪ್ಪ " ನಂಜುಂಡಪ್ಪನವರೆ, ಇವತ್ತು ಕೇಶವಮೂರ್ತಿಯನ್ನು ನೋಡಿದ ಮೇಲೆ ನಿಮ್ಮ ಮಾತಿನಲ್ಲಿ ನಂಬಿಕೆ ಬಂತು. ನೀವು ಹೇಳಿದ್ದು ನಿಜ ಇರಬಹುದು. ಅವಳೇ 'ಧೀರವಾಣಿ' ಯಲ್ಲಿ ಇವನ ಮೂಲಕ ಎಲ್ಲ ಪಬ್ಲಿಷ್ ಮಾಡಿಸಿದಾಳೇಂತ ಕಾಣುತ್ತೆ. ಇದನ್ನು ಹ್ಯಾಗಾದರೂ ಮಾಡಿ ಪತ್ತೆಮಾಡಬೇಕಲ್ಲ ಇವರೆ ? " ಎಂದು ಕೇಳಿದ.

ಸಾವಧಾನವಾಗಿ ಕೇಳಿದ ನಂಜುಂಡಪ್ಪನವರು " ಹೌದು ಮಹೇಶ್ವರ, ಎಲ್ಲ ಅಷ್ಟೆ. ಇಲ್ದಿದ್ರೆ ಈ ಮುಂಡೇದಕ್ಕೇನು ಬೇಕು. ಅವಳು ಇವನನ್ನು ಪ್ರೀತಿಸಲಿಲ್ಲಾಂದ ಮಾತ್ರಕ್ಕೆ ಹೀಗೆಲ್ಲ ಯಾಕ್ ಪಬ್ಲಿಷ್ ಮಾಡೋಕೆ ಹೋಗ್ತಾನೆ !....ಹಿಂದೆ ಅವಳೆಷ್ಟು ಆಟ ಆಡಿದ್ದಳೋ ಅದೆಲ್ಲ ಬಿಟ್ಟು ನಿಮ್ಮಿಬ್ಬರದೇ ವಿಷಯ ಪಬ್ಲಿಷ್ ಮಾಡೋಕೆ ಅವನ್ಗೇನ್ ದರದು " ಅದೂ ಅಲ್ದೆ, ನೀನೇ ಇವತ್ತು ಅವನನ್ನು ಕಣ್ಣಾರ ನೋಡಿದೆ ಅಂತೀಯಾ ?....ಆಗದೇ ಇದ್ದೋನ್ನ ಭಾನುವಾರ ಮಧ್ಯಾಹ್ನ ಮನೆಗೆ ಕರಸ್ಕೊಂಡು ನೀನು ಬರೋದರೊಳಗೆ ಅವನನ್ನು ಹೊರಗೆ ಕಳಿಸೋ ಏರ್ಪಾಟೊಂದ್ರೇನು ಏನದರರ್ಥ?....ನಾನೆಲ್ಲ ಹೇಳಿಬಿಡ್ತೀನಿ ಮಹೇಶ್ವರ, ನಿನ್ನೆ ಸಂಜೆ ನಿಮ್ಮಮ್ಮ ನಮ್ಮನೆಗೆ ಬಂದಿದ್ರು. ಅವರ ಗೋಳಾಟಾನ ತಡೆಯೋಕಾಗಲಿಲ್ಲ. ನನಗೆ ನಿನ್ನ ಮೇಲೆ ತುಂಬ ಕೋಪ ಬಂತು. ಈಗ ನೋಡು, ನಾನೇನೂ ಹೇಳಬೇಕಾದ್ದಿಲ್ಲ—ನಿಂಗೇ ಎಲ್ಲ ಗೊತ್ತಾಗಿದೆ " ಎಂದರು.

ಮಹೇಶ್ವರ " ನಂಜುಂಡಪ್ಪನವರೆ, ಹಾಗಾದರೆ ಈಗೊಂದು ಕೆಲಸ ಮಾಡಬೇಕಲ್ಲ, ದಯವಿಟ್ಟು. ಆ ಕೇಶವಮೂರ್ತೀನ ಹ್ಯಾಗಾದರೂ ಮಾಡಿ

ಕರಸಬೇಕಲ್ಲ ? ” ಎಂದು ಆಸಕ್ತಿಯಿಂದ ಕೇಳಿದ.

“ ಅದಕ್ಕೇನು, ಆ ಮಿಕ. ಎಲ್ಲಿ ಕಾಸು ಬಿದ್ದರೆ ಅಲ್ಲಿ ಕುಣಿಯುತ್ತೆ. ಆದರೆ, ಅವನಿಗೂ ಅವಳಿಗೂ ಈಗಿರೋ ಸಂಬಂಧಾನ ಮೊದಲು ತಿಳಿದು ಕೊಳ್ತೀನಿ ತಡಿ, ಆಮೇಲೆ ಮುಂದಿನ ಮಾತು. ಎಲ್ಲ ನನಗೆ ಬಿಡು....ನಾನು ಅವನನ್ನು ನೋಡ್ಕೊಳ್ತೀನಿ, ನೀನು ಮಾತ್ರ ಆ ಕಡೆ ಸುಳೀಬ್ಯಾಡ ” ಎಂದು ಸಮಾಧಾನ ಹೇಳಿದರು.

ಬದಲಾಯಿಸಿದ ಮನಸ್ಸಿನ ಮಹೇಶ್ವರ, ಸುಮಾರು ಎರಡು ಗಂಟೆ ಹೊತ್ತು ನಂಜುಂಡಪ್ಪನವರೊಡನೆ ಮಾತಾಡುತ್ತಿದ್ದು, ವಾಪಸು ನೇರವಾಗಿ ಮನೆಗೆ ಬಂದ.

ಬೆಳಗ್ಗೆ ಆದ ಜಗಳದಿಂದ ಬದಲಾಯಿಸಿದ ಮನಸ್ಸಿನ ಗಂಗಮ್ಮ, ಮಧ್ಯಾಹ್ನ ಆದ ಮಾತುಕತೆಯಿಂದ ಬದಲಾಯಿಸಿದ ಮನಸ್ಸಿನ ಮಹೇಶ್ವರ ಅಂದಿನ ರಾತ್ರಿಯನ್ನು ವಿಚಿತ್ರವಾಗಿ ಕಳೆದರು.

ಕೆಳಗಿದ್ದ ಹಾಸಿಗೆಯ ಮೇಲೆ, ಅಂದು ರಾತ್ರಿ ಹನ್ನೊಂದು ಗಂಟೆಗೆ ಬಂದು ಮಲಗಿಕೊಂಡ ಗಂಗೂ ಕಂಬನಿಯ ಗಂಗೆಯಲ್ಲಿ ಮಿಂದು ಮುಳುಗಿದ್ದಳು. ಮಂಚದ ಮೇಲೆ ಮಲಗಿ ಚಿಂತಿಸುತ್ತಿದ್ದ ಮಹೇಶ್ವರ ಮಡದಿಯ ಬಿಸಿಯುಸಿರನ್ನೇ ಆಲಿಸುತ್ತ, ಕೊನೆಗೆ ತಡೆಯಲಾರದೆ ಎದ್ದು, ಆ ಮಂಕು ದೀಪದ ಬೆಳಕಿನಲ್ಲಿ ಗಂಗಮ್ಮನ ಪಕ್ಕದಲ್ಲಿ ಕುಳಿತು, ‘ ಗಂಗೂ ’ ಎಂದು ಮೆಲ್ಲಗೆ ಮೈಮುಟ್ಟಿ ಎಬ್ಬಿಸಿದ. ಸದಾ ಎದ್ದೇ ಇರುತ್ತಿದ್ದ ಗಂಗೂ ಈ ಅನಿರೀಕ್ಷಿತ ಅನುಭವಕ್ಕಾಗಿ ಬಿಕ್ಕಿಬಿಕ್ಕಿ ಅಳತೊಡಗಿದಳು. ಆ ಅಳು ಈ ಗಂಡುಗಣ್ಣಿನಲ್ಲೂ ಕಂಬನಿ ತಂದಿತು.

ಎಷ್ಟೋ ದಿನ ದೂರವಾಗಿದ್ದ ಆ ಎರಡು ತುಟಿಗಳು ಒಂದಾದುವು ; ಆ ಎರಡು ದೇಹಗಳು ಒಂದುಗೂಡಿದುವು.

*          *          *          *

ಮೂರನೆಯ ದಿನ, ನಂಜುಂಡಪ್ಪನವರು ಕೇಶವಮೂರ್ತಿಯನ್ನು ಮಹೇಶ್ವರಪ್ಪನವರ ಮನೆಗೇ ಕರೆದುಕೊಂಡು ಬಂದುಬಿಟ್ಟರು.

ಭಾನುವಾರ ಮಧ್ಯಾಹ್ನ, ರತ್ನಳನ್ನು ಕೆಣಕಲು ಹೋಗಿ, ಸಿಕ್ಕಾಬಟ್ಟೆ ಬಯ್ಯಿಸಿಕೊಂಡು ಹೊರಗೆ ಬಂದ ಕೇಶವಮೂರ್ತಿಯನ್ನು ನಂಜುಂಡಪ್ಪನವರು

ಕಂಡು ಗುಟ್ಟಾಗಿ ಮಾತಾಡಿದಾಗ ಎಲ್ಲ ತಿಳಿಯಿತು.

ರತ್ನಳನ್ನು ಒಲಿಸಿಕೊಳ್ಳಲು ಏನೇನೋ ಮಾಡಿ, 'ಧೀರವಾಣಿ'ಯ ಮೂಲಕವೂ ಒಂದು ಲಾಗ ಹಾಕಿ ವಿಫಲನಾಗಿದ್ದ ಕೇಶವಮೂರ್ತಿ ನಂಜುಂಡಪ್ಪನವರ ಮಾತಿನ ಅರ್ಥವನ್ನು ಬೇಗ ಗ್ರಹಿಸಿಕೊಂಡು, ರತ್ನಳ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿದ.

"ನಂಜುಂಡಪ್ಪನೋರೆ, ಏನು ಹೇಳ್ತೀರ ಸಮಾಚಾರ!....ಎಲ್ಲ ನನಗ್ಗೊತ್ತು. ಉಂಗುರದ ಕತೆ ಅದನ್ನ ಹ್ಯಾಗೆ ಕಟ್ಟಿದಳು, ಅದಕ್ಕೆ ಯಾರ್‍ಯಾರು ಕಾರಣ, ಎಲ್ಲ ವಿವರವಾಗಿ ಹೇಳ್ತೀನಿ ಕೇಳಿ ಬೇಕಾದ್ರೆ....ಅವಳು ಗುಟ್ಟಾಗಿ ನನ್ನನ್ನು ಕರಸಿ 'ಧೀರವಾಣೀ'ಲಿ ಹೀಗೆಲ್ಲ ಪಬ್ಲಿಷ್ ಮಾಡು, ನಿಂಗಿಷ್ಟು ಕೊಡ್ತೀನಿ; ಇಷ್ಟು ಕೊಡ್ತೀನೀಂತ ಪುಸಲಾಯಿಸಿದಳು....ಇದೆಲ್ಲ ನಿಜಾಂತ ನಂಬಿಸಿಬಿಟ್ಟಳು....ನಾನು ಮಹೇಶ್ವರಪ್ಪನೋರ ಕೈಯಲ್ಲಿರೊ ಉಂಗುರಾನ, ಅವಳ ಕೈಯಲ್ಲಿರೋ ಉಂಗುರಾನ ನೋಡಿ, ಎಲ್ಲ ನಿಜ ಇರಬಹುದು ಅಂದ್ಕೊಂಡು ಪಬ್ಲಿಷ್ ಮಾಡ್ದೆ. ಇಲ್ದಿದ್ರೆ ನಾನ್ಯಾಕೆ ಮಾಡೋಕೆ ಹೋಗ್ತಿ?....ಇನ್ನೊಂದು ವಿಷಯ; ಇವಳು ಅವರ ವಜ್ರದುಂಗುರ ಕಿತ್ತುಕೊಂಡಿದ್ದೂ ಅಲ್ದೆ ಮಾರನೇ ದಿನವೆ ಅದರ ಮೇಲೆ 'ಎಂ' ಅಂತ ಅಕ್ಕಸಾಲಿ ಪುಟ್ಟಾಚಾರಿ ಕೈಲಿ ಕೆತ್ತಿಸ್ಕೊಂಡಳು! ನಾನೇ ಕಣ್ಣಾರ ನೋಡ್ದೆ....ಐದು ಸಾವಿರ ರೂಪಾಯಿಗೆ ಒಂದು ಭೋಗ್ಯಪತ್ರ ಬೇರೆ ಮಾಡಿದಾಳಂತೆ. ಅವಳು ನನಗೆ ಹೇಳ್ದೇ ಇದ್ದರೂ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ಪತ್ತೆ ಮಾಡ್ದೆ....ಇನ್ನೂ ಕ್ಯಾಷ್ ಎಷ್ಟೆಷ್ಟು ಕಿತ್ಕೊಂಡಿದಾಳೊ! ಇದೆಲ್ಲ ಮನೆಹಾಳ್ ವ್ಯಾಪಾರ ಅಲ್ವೆ ನಂಜುಂಡಪ್ಪನೋರೆ?.... ಅವಳು ಬಹಳ ಘಾಟಿ; ನಿಮ್ಮ ಮಹೇಶ್ವರಪ್ಪನೋರು ಏನ್ಕಂಡಿದಾರೆ ಅವಳನ್ನ!....ಪಾಪ, ಅವರಿಗೆ ಗೊತ್ತಾಗಲಿಲ್ಲ. ಸದ್ಯ, ಈಗಲಾದರೂ ಬುದ್ಧಿ ಬಂತಲ್ಲ!....ಈಗೇನು ಮಾಡ್ತಾರಂತೆ? ಅವಳಿಗೂ ಇವರಿಗೂ ಆಗೋದೇ ಇಲ್ವೆ?"

"ಇಲ್ಲ ... ಇವನು ಅವಳ ಮನೆಗೆ ಹೋಗಿ ಆಗಲೆ ಏಳೆಂಟು ದಿನದ ಮೇಲಾಗಿದೆ....ಈಗ ಇಬ್ಬರಿಗೂ ಆಗೊಲ್ಲ."

"ಹಾಗಾದರೆ ಈಗೇನ್ಮಾಡ್ತಾರೆ?"

"ಇನ್ನೂ ಏನೂ ಗೊತ್ತಾಗಿಲ್ಲ....ಇವನೇನ್ಮಾಡ್ತಾನೆ!—ಅವಳೇನ್ಮಾ

ಡ್ತಾಳೆ, ಅನ್ನೋದು ತಾನೆ ಮುಖ್ಯ."

"ಅವಳು ಘಾಟಿ ಹೆಂಗಸು. ಇವನೇನಾದರೂ ಹೋಗೋದು ಬಿಟ್ಟರೆ, ಎಲ್ಲ ವಿರಸಕ್ಕಿಟ್ಟುಕೊಂಡುಬಿಟ್ಟರೆ ಅವಳು ಕೇಸು ಮಾಡಿ ಬಿಡ್ತಾಳೆ....ಈಗ ಅವಳು ಗರ್ಭಿಣಿ ಬೇರೇಂತೆ!....ದೊಡ್ಡ ರಾಮಾಯಣನೆ ಮಾಡಿಬಿಡ್ತಾಳೆ!...."

"ಏನ್ಮಾಡೋದು ನೋಡು, ಪಾಪ! ತಿಳೀದೆ ಈ ಮಹೇಶ್ವರ ಸಿಕ್ಕಿ ಹಾಕ್ಕೊಂಡ್ಬಿಟ್ಟದಾನೆ!"

"ಅವಳೇನಾದರೂ ಕೇಸ್ ಮಾಡೋ ಹಾಗಿದ್ರೆ ನನ್ನ ಕರೀರಿ ನಂಜುಂಡಪ್ಪನೋರೆ, ಆವಾಗ ನೋಡ್ತೀನಿ ಅವಳಾಟಾನ!....ನೀವು ಸುಮ್ನಿರಿ, ಸಾನ್ಮಾಡ್ತೀನಿ....ನನಗೆ ಇನ್ನೊಂದೆಂಟು ದಿನ ಟೈಂ ಕೊಡಿ. ನಾನೆಲ್ಲ ತಿಳಿದ್ಕೊಂಡ್ಬರ್ತೀನಿ....ಮಹೇಶ್ವರಪ್ಪನೋರು ಮನಸ್ಸು ಮಾಡಿದರೆ ಆ ಮಾಯಾವೀನ್ನ ಆಟ ಆಡಿಸಿಬಿಡಬಹುದು....ಬೀಗದಕೈ ನನ್ನ ಹತ್ತಿರ ಇದೆ" ಎಂದು ಕೇಶವಮೂರ್ತಿ ಉತ್ಸಾಹದಿಂದ ನುಡಿದ.

ಲಾಯರ್ ಚಂದ್ರಶೇಖರಪ್ಪ ಹಾಕಿದ ಅನೇಕ ಪ್ರಶ್ನೆಗಳಿಗೆ ಉತ್ತರ ಕೊಡುವಂಥ ಬೀಗದಕೈ ನಿಜವಾಗಿಯೂ ಅವನ ಹತ್ತಿರ ಇತ್ತು.

ರತ್ನ ಮನೆಯ ಮುಂದೆ 'ಮಿಸೆಸ್ ಎಚ್. ಎಂ. ಮಹೇಶ್ವರಪ್ಪ' ಎಂಬ ಬೋರ್ಡು ಹಾಕಿಕೊಂಡು, ಹೆಂಡತಿ ಗಂಡನಿಗೆ ಬರೆದಂಥ ಕಾಗದವನ್ನು ತನಗೆ ಬರೆದುದನ್ನು ನೋಡಿ ಮಹೇಶ್ವರನ ಕೋಪ ಕೆರಳಿತು. "ನೀವು ಈ ರೀತಿ ಕಾಗದ ಬರೆದದ್ದು ತಪ್ಪು. ನಿಮಗೂ ನನಗೂ ಯಾವ ಸಂಬಂಧವೂ ಇಲ್ಲ. ನೀವು ಬರೆದಿರುವಂತೆ ನಾವು ಗಂಡಹೆಂಡಿರಲ್ಲ. ನಮ್ಮ ಮನೆಗೆ ನೀವು ಬಾಡಿಗೆದಾರರೇ ವಿನಾ ನನಗೂ ನಿಮಗೂ ಇನ್ನಾವ ಸಂಬಂಧವೂ ಇಲ್ಲ. ಇನ್ನು ಮುಂದೆ ಇದೇ ರೀತಿ ತಮ್ಮಿಂದ ಕಾಗದಗಳು ಬಂದಲ್ಲಿ ಮುಂದಿನ ಕಾರ್ಯಕ್ರಮ ಕೈಗೊಳ್ಳಲಾಗುತ್ತೆ." ಎಂದು ನಂಜುಂಡಪ್ಪನವರ ಸಲಹೆಯಂತೆ ಒಂದು ಉತ್ತರ ಕೊಟ್ಟುಬಿಟ್ಟ.

ಗಂಡುಮಗು ಆಯಿತೆಂದು ತಿಳಿಸುವ ಕಾಗದ ಕಲ್ಲುಸಕ್ಕರೆಯೊಡನೆ ಮನೆಗೆ ಬಂದಮೇಲಂತೂ ಕೋಪ ಮಿತಿಮೀರಿತು.

ಕೇಶವಮೂರ್ತಿಯ ಸಿ.ಐ.ಡಿ. ಕೆಲಸದಿಂದ ರತ್ನಳ ಬಂಡವಾಳವನ್ನು ಚೆನ್ನಾಗಿ ತಿಳಿದುಕೊಂಡಿದ್ದ ಮಹೇಶ್ವರ ಕಾಗದ ಪತ್ರಗಳೆಲ್ಲವನ್ನೂ ಸುಪ್ರಸಿದ್ಧ

ಲಾಯರ್ ಮುಕುಂದರಾಯರ ಕೈಗೆ ಒಪ್ಪಿಸಿ, ದಯವಿಟ್ಟು ಮುಂದಿನ ಕೆಲಸ ನಡಸಿ, ಎಂದು ಕೇಳಿಕೊಂಡ.

“ ಮಹೇಶ್ವರಪ್ಪನವರ ಎರಡನೆಯ ಹೆಂಡತಿ ರತ್ನಮ್ಮ ಪಾಶ್ಚಾತ್ಯರೀತ್ಯಾ ಮದುವೆಯಾದ ಧರ್ಮಪತ್ನಿ. ಒಂದೂವರೆ ತೊಲ ಎರಡು ಗುಲಗಂಜಿ ತೂಕದ ವಜ್ರದುಂಗರದ ಒಳಗೆ ‘ ಎಂ ’ ಎಂಬ ಗುರುತು ಹಾಕಿಸಿ, ಗಂಡ ಮಹೇಶ್ವರಪ್ಪ ನವರು ಹೆಂಡತಿ ರತ್ನಮ್ಮನಿಗೆ ಬಾಂಧವ್ಯ ಸೂಚಕವಾಗಿ ನೀಡಿದ್ದಾರೆ. ಹಾಗೆಯೆ ರತ್ನ ತನ್ನ ಮುಕ್ಕಾಲು ತೊಲದ ದೊಡ್ಡ ಕೆಂಪು ಹರಳಿನ ಉಂಗುರದ ಒಳಗೆ ‘ ಆರ್ ’ ಎಂದು ಕೆತ್ತಿಸಿ, ತನ್ನ ಪತಿಯಾದ ಮಹೇಶ್ವರಪ್ಪನವರಿಗೆ ಬಾಂಧವ್ಯ ಸೂಚಕವಾಗಿ ನೀಡಿದ್ದಾರೆ. ಈಗ ಈ ಬಾಂಧವ್ಯದ ಫಲವಾಗಿ ಮೂರು ತಿಂಗಳ ಗಂಡು ಮಗು ತೊಟ್ಟಿಲಲ್ಲಿ ಆಡುತ್ತಿದೆ. ಅದಕ್ಕೆ, ಇಬ್ಬರು ಹೆಂಡಿರ ಯಜಮಾ ನರಾದ ಮಹೇಶ್ವರಪ್ಪನವರು, ಗಂಡುಮಕ್ಕಳಿಲ್ಲದೆ ರತ್ನಮ್ಮನನ್ನು ಕಂಡು ಹೊಟ್ಟೆಕಿಚ್ಚುಪಡುತ್ತಿರುವ ಅವರ ಮೊದಲನೆ ಹೆಂಡತಿಯ ಮಾತು ಕೇಳಿಕೊಂಡು ಎರಡನೆಯ ಹೆಂಡತಿಗೂ, ತಮ್ಮ ಏಕಮಾತ್ರ ಪುತ್ರನಿಗೂ ದ್ರೋಹಮಾಡಲು ತಮಗೂ ರತ್ನಮ್ಮನಿಗೂ ಯಾವ ಸಂಬಂಧವೂ ಇಲ್ಲ ಎಂದಿದ್ದಾರೆ. ಇಷ್ಟೇ ಅಲ್ಲದೆ, ಈಗ್ಗೆ ಒಂದು ವರುಷದ ಹಿಂದೆ ರತ್ನಮ್ಮನಿಂದ ಐದು ಸಾವಿರ ರೂಪಾಯಿ ಪಡೆದು, ಹೆಸರಿಗೆ ಈ ಮನೆಯನ್ನು ನಿನಗೆ ಭೋಗ್ಯಮಾಡಿರುತ್ತೇನೆ ಎಂದು ಹೇಳಿ, ಈಗ, ಅವಧಿ ಮುಗಿದಿರುವಾಗ ಹಣ ವಾಪಸು ಕೇಳಿದರೆ, ಅದು ಬರಿಯ ಹೆಸರಿನ ಕಾಗದ, ನಾನು ನಿನಗೆ ಹಣ ಕೊಡಬೇಕಾಗಿಲ್ಲ ಎಂದು ತಿಳಿಸಿ, ಐದು ಸಾವಿರ ರೂಪಾಯಿಗೆ ಮೋಸ ಮಾಡಲು ಹವಣಿಸುತ್ತಿದ್ದಾರೆ. ಆದರೆ ಅದಕ್ಕೆ ಪತ್ರ ಇರುವುದರಿಂದ, ಎಲ್ಲ ಪರಾಂಬರಿಸಿ, ಈ ನ್ಯಾಯಪೀಠ ನ್ಯಾಯವಾಗಿ ತೀರ್ಪು ಕೊಡಬೇಕು ’ ಎಂಬ ಅರ್ಥದಲ್ಲಿ ವಾದಿಸಿದ ಲಾಯರ್ ಚಂದ್ರಶೇಖರಪ್ಪ ನವರನ್ನು ಕರೆಸ್‌ಪಾಂಡೆಂಟ್ ಕೇಶವಮೂರ್ತಿ, ಅಕ್ಕಸಾಲಿ ಪುಟ್ಟಾಚಾರಿ, ನಂಜುಂಡಪ್ಪನವರು ಮುಂತಾದವರ ಸಾಕ್ಷ್ಯಗಳ ನೆರವಿನಿಂದ ಅಡ್ವೋಕೇಟ್ ಮುಕುಂದರಾಯರು ವಾದದಲ್ಲಿ ಸೋಲಿಸಲು ಒಂದು ವರುಷ ತೆಗೆದುಕೊಂಡರು.

ನಂಜಪ್ಪಶೆಟ್ಟರ ಖೂನಿ ಕೇಸು ಮುಗಿಯುವುದಕ್ಕೂ ಈ ಕೇಸು ಶುರು ನಾಗುವುದಕ್ಕೂ ಸರಿಹೋಯಿತು. ‘ ಅದು ಖೂನಿ ಅಲ್ಲ. ನಂಜಪ್ಪಶೆಟ್ಟರು ಖಾಯಿಲೆಯಿಂದ ಸತ್ತರು. ಆಸ್ತಿಯೆಲ್ಲ ಅಕ್ಕನಿಗೆ ಸೇರಿ ತನಗೆ ಮೂರು ಕಾಸೂ

ದಕ್ಕುವುದಿಲ್ಲ, ಎಂಬ ಹೆದರಿಕೆಯಿಂದ ನಾಗರಾಜಪ್ಪ ಸ್ನೇಹಿತರ ಮಾತು ಕೇಳಿ ಮೋಸದ ವಿಲ್ ತಯಾರಿಸಿಬಿಟ್ಟದಾನೆ—ಅದಕ್ಕೆ ತಕ್ಕ ಶಿಕ್ಷೆ ಆಸ್ತಿಯ ಹಂಚಿಕೆ ಯಲ್ಲಿಯೆ ಆಗಿದೆ—ಆದ್ದರಿಂದ, ಇದರಲ್ಲಿ ತಪ್ಪಿತಸ್ಥರನ್ನೆಲ್ಲ ಖುಲಾಸೆ ಮಾಡಿದೆ. ಆದರೆ, ಲಂಚದ ಆಪಾದನೆ ರುಜುವಾತಾಗಿರುವುದರಿಂದ ಸಬ್‌ರಿಜಿಸ್ಟ್ರಾರ್ ರಂಗ ಸ್ವಾಮಿಗಳಿಗೆ ಒಂದು ವರುಷ ಕಠಿಣ ಸಜ ವಿಧಿಸಿದೆ' ಎಂದು ಕೇಸು ಕೊನೆ ಗೊಂಡಿತ್ತು.

ಕೇಸಿನ ಕೊಳೆಯನ್ನು ತೊಳೆದುಕೊಂಡು ಹೊರಗೆ ಬಂದ ನಾಗರಾಜ ರತ್ನಳ ಮೋಸವನ್ನು ನೆನಸಿಕೊಂಡು, ರಸೀದಿ ಇಲ್ಲದೆ ತಾನು ಕೊಟ್ಟ ಹಣಕ್ಕೆ ಏನು ಮಾಡಲೂ ತೋರದೆ ಕೈಕೈ ಹಿಸುಕಿಕೊಂಡು, ಮಹೇಶ್ವರಪ್ಪನವರ ಕೇಸು ಏನಾಗುವುದೋ ಎಂದು ಕುತೂಹಲದಿಂದ ಕಾಯತೊಡಗಿದ.

ಮುಕುಂದರಾಯರು ಅವನನ್ನು ಕರಸಿ, "ನೀವೊಂದು ಸಾಕ್ಷ್ಯ ಹೇಳು ತ್ತೀರಾ?" ಎಂದು ಕೇಳಿದಾಗ "ಏನು ಹೇಳಲಿ ಹೇಳಿ, ಅವಳು ಒಳ್ಳೆ ಮೋಸದ ಮಾರಿ. ಅವಳಿಗೆ ಚೆನ್ನಾಗಿ ಮಟ್ಟಹಾಕಬೇಕು," ಎಂದು ಹಲ್ಲು ಹಲ್ಲು ಕಡಿದ. ಮುಕುಂದರಾಯರು ಭೋಗ್ಯಪತ್ರದ ಕೇಸಿನ ವಿಷಯವನ್ನು ತಿಳಿಸಿ, "ನೀವು ಇಷ್ಟು ಹೇಳಿ—ರತ್ನಮ್ಮನಿಂದ ನನಗೆ ಬಾಕಿ ಏನೂ ಬರಬೇ ಕಾದ್ದಿಲ್ಲ. ನಾನು ಆಕೆಗೆ ಹಣವನ್ನು ಸಾಲವಾಗಿ ಕೊಟ್ಟೇ ಇರಲಿಲ್ಲ, ಎಂದು ಹೇಳಿ" ಎಂದರು.

ಅಡ್ವೋಕೇಟ್ ಮುಕುಂದರಾಯರು ರತ್ನಮ್ಮನ ಮೇಲೆ ಮೋಸದ ಅಪಾ ದನೆಯನ್ನು ಹೊರಿಸಿ, ಸಾಧಿಸಲು ಪ್ರಯತ್ನಿಸುತ್ತಿದ್ದಾಗ, ಅನೇಕ ವೇಳೆ ಅವರ ವಾದದಲ್ಲಿಯೇ ಅವರಿಗೆ ನಂಬಿಕೆ ಉಂಟಾಗುತ್ತಿರಲಿಲ್ಲ.

ರತ್ನ ಇಟ್ಟುಕೊಂಡಂತೆ ಕಾಗದ ಪತ್ರ. ಪತ್ರಿಕೆಯ ಪ್ರಕಟನೆಗಳು, ಮಹೇ ಶ್ವರಪ್ಪ ಬರೆದ ಕಾಗದಗಳು ಮುಂತಾದವುಗಳನ್ನೆದುರಿಸಲು ಸಹಾಯ ವಾಗು ವಂಥ ಯಾವ ಕಾಗದ ಪತ್ರಗಳೂ ಮಹೇಶ್ವರನ ಹತ್ತಿರ ಇರಲಿಲ್ಲ.

ಭೋಗ್ಯಪತ್ರದ ವಿಷಯದಲ್ಲಂತೂ ಮುಕುಂದರಾಯರೇ ಹೇಳಿಬಿಟ್ಟದ್ದರು "ಏನಿಲ್ಲ ಮಹೇಶ್ವರಪ್ಪನೋರೆ.... ನೀವು ಐದು ಸಾವಿರ ತೆತ್ತು ಮನೆಯನ್ನು ಬಿಡಿಸಿಕೊಳ್ಳಬೇಕಾಗುತ್ತದೆ. ಅಷ್ಟೇ ಆದರೆ ಐದು ಸಾವಿರಕ್ಕೆ ಮುಗಿಯುತ್ತದೆ. ಇಲ್ಲದೆ ಅವಳೇನಾದರೂ, ನೀವಿಬ್ಬರೂ ಶಾಸ್ತ್ರರೀತ್ಯಾ ಮದುವೆ ಆದವರು ಎಂದು

ರುಜುವಾತು ಮಾಡಿ ತೋರಿಸಿದರೆ ಆಗ ಸಾಕಷ್ಟು ಜೀವನಾಂಶವನ್ನೇ ತೆರಬೇಕು ಅಲ್ಲದೆ, ಅವಳಿಗೆ ಸಪೋರ್ಟ್ ಆಗಿ ಗಂಡುಮಗು ಬೇರೆ ಇದೆ....ಆದ್ದರಿಂದ ನೋಡಬೇಕಪ್ಪ" ಎಂದು ಮೊದಲೇ ಅನುಮಾನವಾಗಿ ಅಂದುಬಿಟ್ಟಿದ್ದರು.

ಆದರೆ, ಕರೆಸ್ಪಾಂಡೆಂಟ್ ಕೇಶವಮೂರ್ತಿ, ಅಕ್ಕಸಾಲಿ ಪುಟ್ಟಾಚಾರಿ, ನಂಜುಂಡಪ್ಪ, ನಾಗರಾಜಪ್ಪ ಇವರುಗಳ ಸಾಕ್ಷ್ಯದಿಂದ ಮುಕುಂದರಾಯರು "ಅದು ಮದುವೆ ಅಲ್ಲ: ಬರಿಯ ಸ್ನೇಹ. ಉಂಗುರವನ್ನು ಇಟ್ಟುಕೊಂಡರು ಎಂದ ಮಾತ್ರಕ್ಕೆ ಅದನ್ನು ಅಕ್ಕಸಾಲಿಗೆ ಕೊಟ್ಟು ತೂಕ ಹಾಕಿಸಿ, ಅದರ ಮೇಲೆ ಮಹೇಶ್ವರಪ್ಪನವರ ಹೆಸರಿನ 'ಎಂ' ಎಂಬ ಅಕ್ಷರವನ್ನು ಗುರುತು ಮಾಡಿಸಿದ್ದು 'ಉಂಗುರದ ಮದುವೆ' ಎಂಬ ಸುದ್ದಿಯನ್ನು ಕರೆಸ್ಪಾಂಡೆಂಟ್ ಕೇಶವಮೂರ್ತಿಗೆ ಕೊಟ್ಟು, ಇದನ್ನು ಪ್ರಕಟಿಸಲೇಬೇಕು, ಇದು ನಿಜವಾದ ಸುದ್ದಿ ಎಂದು ಅವನನ್ನು ಪ್ರೇರೇಪಿಸಿದ್ದು, ನಾಗರಾಜಪ್ಪನವರು ತಮಗೆ ಸಾಲವಾಗಿ ಹಣ ಕೊಡದಿದ್ದರೂ, ಸಾಲದ ಹಣವನ್ನು ಅವರಿಗೆ ವಾಪಸುಕೊಡಬೇಕೆಂದೂ 'ಈಗ ನನ್ನ ಹತ್ತಿರ ಹಣ ಇಲ್ಲ. ಅದನ್ನು ಮಹೇಶ್ವರಪ್ಪನವರಿಗೆ ಕೊಟ್ಟು ಈ ಮನೆಯನ್ನು ಭೋಗ್ಯ ಮಾಡಿಕೊಂಡಿದ್ದೇನೆ. ಮುಂದಿನ ವರುಷ ಕೊಡುತ್ತೇನೆ' ಎಂದು ಹೇಳಲು ಸಹಾಯವಾಗುತ್ತದೆಂಬ ಸುಳ್ಳು ಕಟ್ಟಿ, ದುಡ್ಡು ಕೊಡದೆ, ಹೆಸರಿಗೆ ಮಾತ್ರದ ಭೋಗ್ಯ ಪತ್ರವನ್ನು ತಯಾರಿಸಿದ್ದು–ಇದೆಲ್ಲವನ್ನೂ ಕೂಲಂಕಷವಾಗಿ ವಿಮರ್ಶಿಸಿದರೆ, ಎಲ್ಲ ಒಂದು ವ್ಯಕ್ತಿಗೆ ಮೋಸಮಾಡಿ ಅವನನ್ನು ಮುಳುಗಿಸಲು ಹವಣಿಸಿದ ಹಂಚಿಕೆ ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ" ಎಂದು ವಾದಿಸಿದರು.

ನಾಗರಾಜಪ್ಪ ಸಾಕ್ಷ್ಯ ಹೇಳುತ್ತ, "ನಾನು ರತ್ನಮ್ಮನಿಗೆ ನಾಲ್ಕು ಸಾವಿರ ರೂಪಾಯಿಯನ್ನು ಸಾಲವಾಗಿ ಎಂದೂ ಕೊಟ್ಟಿಲ್ಲ. ಆದ್ದರಿಂದ, ಹಣ ವಾಪಾಸು ಕೊಡಿ ಎಂದು ನಾನು ಅವರನ್ನು ಪೀಡಿಸಿದ್ದು ಸುಳ್ಳು" ಎಂದು, ಭೋಗ್ಯಪತ್ರದ ಬಗ್ಗೆ ಆಕೆ ನಡಸಿರಬಹುದಾದ ಮೋಸವನ್ನು ಬಯಲಿಗೆಳೆದ.

ಕೇಸಿನ ತಕ್ಕಡಿ ಒಂದು ವರುಷ ಕಾಲ ಹೀಗೆ ಹಾಗೆ ಆಡುತ್ತಿತ್ತು. ರತ್ನಮ್ಮನ ಮೇಲಿನ ಮೋಸದ ಆಪಾದನೆಗಳನ್ನು ಪುಷ್ಟೀಕರಿಸುವ ಅತ್ಯಂತ ಮುಖ್ಯವಾದ ಇನ್ನೊಂದು ಸುದ್ದಿ 'ಧೀರವಾಣಿ'ಯ ಮೂಲಕ ಪ್ರಕಟವಾಗಿ ಮುಕುಂದರಾಯರಿಗೆ ಬೆಂಬಲ ನೀಡಿತು. ಅದು ಪ್ರಕಟವಾಗುವುದಕ್ಕೂ,

ನ್ಯಾಯಾಧೀಶರು ‘ ಬರಿಯ ಉಂಗುರ ಕೊಟ್ಟ ಮಾತ್ರಕ್ಕೆ ಮದುವೆ ಆದಂತಾಗ ಲಿಲ್ಲ. ಇವರಿಬ್ಬರಿಗೂ ಮದುವೆಯ ಸಂಬಂಧವನ್ನು ಕಲ್ಪಿಸಲಾಗುವುದಿಲ್ಲ. ವಾದಿ ರತ್ನಮ್ಮ ಪ್ರತಿವಾದಿ ಮಹೇಶ್ವರಪ್ಪನವರ ಮನೆಯಲ್ಲಿ ಬಾಡಿಗೆಗೆ ಇದ್ದುದ ರಿಂದಲೂ, ಮಹೇಶ್ವರಪ್ಪನವರು ಅಲ್ಲಿಗೆ ಹೋಗಿ ಬರುತ್ತಿದ್ದುದರಿಂದಲೂ ಈ ಅಚಾತುರ್ಯ ನಡೆಯಿತು. ವಾದಿ ತಾನು ಪ್ರತಿವಾದಿಯನ್ನು ಮದುವೆಯಾಗಿ ದ್ದೇನೆ ಎಂಬುದನ್ನು ಸಾಧಿಸಲು ಸಾಕಷ್ಟು ರುಜುವಾತಿಲ್ಲ. ಆದಕಾರಣ ಈ ಕೋರ್ಟು ಅದನ್ನು ನಂಬುವುದಿಲ್ಲ. ಆದರೆ, ಮಹೇಶ್ವರಪ್ಪನವರ ಮನೆಯನ್ನು ಭೋಗ್ಯ ಮಾಡಿಕೊಂಡು ಅವರಿಗೆ ಐದು ಸಾವಿರ ರೂಪಾಯಿ ಕೊಟ್ಟಿರುವುದಕ್ಕೆ ರಿಜಿಸ್ಟರ್ಡ್ ಪತ್ರ ಇರುವುದರಿಂದ ಪ್ರತಿವಾದಿ ಮಹೇಶ್ವರಪ್ಪನವರು ಐದು ಸಾವಿರ ರೂಪಾಯಿಗಳನ್ನು ವಾದಿ ರತ್ನಮ್ಮನವರಿಗೆ ವಾಪಸು ಕೊಟ್ಟು ಮನೆಯ ಸುಫರ್ದು ಪಡೆಯತಕ್ಕದ್ದು ’ ಎಂಬ ಅರ್ಥದ ತೀರ್ಪು ಬರೆಯುವುದಕ್ಕೂ ಸರಿ ಹೋಯಿತು.

ಇನ್ನು ಎಂಟು ದಿನಗಳಲ್ಲಿ ತೀರ್ಪು ಎನ್ನುವಾಗ ‘ ಧೀರವಾಣಿ ’ಯಲ್ಲಿ ಒಂದು ಕಾಗದದ ಚಿತ್ರ ಪ್ರಕಟವಾಯಿತು. ಅದರ ತಲೆಯ ಮೇಲೆ ‘ ಒಂದು ವರುಷದನಂತರ ಕಾಗದ ತಲುಪಿತು ’ ಎಂದು ದಪ್ಪಕ್ಷರಗಳಿಂದ ಬರೆದ ಬರೆಹ ಹೊಸೂರಿನಲ್ಲಿ ಯಾರ ಮನಸ್ಸನ್ನೂ ಹೆಚ್ಚು ಸೆಳೆಯಲಿಲ್ಲ. ಒಂದು ವರುಷದ ಹಿಂದೆ, ಬೆಂಗಳೂರಿನ ಎನ್. ಎಂ. ಸಿ.ಯ ಹತ್ತನೆಯ ಕೋಣೆಯಲ್ಲಿ ವಾಸ ವಾಗಿದ್ದ ಲಕ್ಷ್ಮೀಪ್ರಸಾದ ನಾಟಕ ಮಂಡಳಿಯ ಪುಟ್ಟಪ್ಪನವರಿಗೆ ರತ್ನ ಬರೆದ ಕಾಗದ ಅದು. ಆ ಪತ್ರದಲ್ಲಿದ್ದ ‘ ನಿನ್ನೆ ಗುರುವಾರ ಸಂಜೆ ಐದೂವರೆ ಗಂಟೆಗೆ ಸೌ|| ಕಮಲಮ್ಮ ಗಂಡು ಮಗುವನ್ನು ಹೆತ್ತಳು. ಮಗು ಬಾಣಂತಿ ಆರೋಗ್ಯ ವಾಗಿದ್ದಾರೆ ’ ಎಂಬ ವಿಷಯ ಊರಿನವರೆಲ್ಲರ ಗಮನವನ್ನೂ ಸೆಳೆಯಿತು.

ಒಂದು ವರುಷದ ಹಿಂದೆ, ಲಕ್ಷ್ಮಮ್ಮನ ಮಗಳು ಕಮಲಮ್ಮ ಹೆಣ್ಣು ಮಗು ಹೆತ್ತಳೆಂಬ ಸುದ್ದಿ ಊರಿನ ಅನೇಕ ಮಂದಿಗೆ ತಿಳಿದಿತ್ತು. ಆದರೆ ಇದೇನು ವಿಚಿತ್ರ ? ಈಗ ಹೊರಬಿದ್ದಿರುವ, ಆಗ ಬರೆದ ಕಾಗದ ಹೀಗಿದೆಯಲ್ಲ ! ಎಂದು ವಿಸ್ಮಯಗೊಂಡರು.

‘ ಸೌ|| ಕಮಲಮ್ಮ ಗಂಡು ಮಗುವನ್ನೇ ಹೆತ್ತಿರಬಹುದು. ಆಮೇಲೆ, ಈ ರತ್ನಮ್ಮ ಮೋಸ ಮಾಡಿ ಆ ಮಗುವನ್ನು ತಾನು ಸಾಕಿ, ತನ್ನ ಹೆಣ್ಣು

ಮಗುವನ್ನು ಕಮಲಮ್ಮನಿಗೆ ಕೊಟ್ಟಿರಬಹುದು. ಪುಟ್ಟಪ್ಪನವರಿಗೆ ಈ ಕಾಗದ ತಲಪದೇ ಇದ್ದುದರಿಂದಲೂ, ಅವರು ಮಗುವನ್ನು ಆರು ತಿಂಗಳನಂತರ ನೋಡಿದುದರಿಂದಲೂ ಅನುಮಾನಕ್ಕೆ ಅವಕಾಶವಾಗಲಿಲ್ಲ. ಈ ಎರಡು ಮಕ್ಕಳನ್ನೂ ಪರೀಕ್ಷಿಸಿದರೆ ಮೋಸ ಹೌದೊ, ಅಲ್ಲವೊ ತಿಳಿಯುತ್ತದೆ' ಎಂಬ ಅರ್ಥದ ಕಾಗದವನ್ನು 'ಮಕ್ಕಳು ಹೆರುವುದರಲ್ಲಿ ಮೋಸವೆ?' ಎಂಬ ಶಿರೋನಾಮೆಯಲ್ಲಿ ಮಾರನೆಯ ದಿನದ 'ಧೀರವಾಣಿ' ಪ್ರಕಟಿಸಿತು. ಆ ಕಾಗದದ ಕೆಳಗೆ 'ಅನಾಮಧೇಯ' ಎಂಬ ಹೆಸರಿದ್ದುದರಿಂದ ಅದನ್ನು ಬರೆದವರಾರೆಂಬುದು ಸುಲಭವಾಗಿ ತಿಳಿಯುವಂತಿರಲಿಲ್ಲ.

ರತ್ನ, ತನ್ನ ಲಾಯರ್ ಚಂದ್ರಶೇಖರಪ್ಪನವರ ಹತ್ತಿರ ಹೋಗಿ, 'ಇದು ಮೋಸ. ಆ ಕೇಶವಮೂರ್ತೀನೇ ಬರೆದಿದಾನೆ........ಅವನೇ ಈ ಕಾಗದಾನೂ ದೊಡ್ಡದಾಗಿ, ಮಹಾ ದೊಡ್ಡ ವಿಷಯವಾಗಿ ಪ್ರಕಟಿಸಿರೋದು........ಅವನ ಮೇಲೆ ಕೇಸು ಮಾಡೋಣ; ಮಾನನಷ್ಟ ಮೊಕದ್ದಮೆ ಹೂಡೋಣ........" ಎಂದು ಹಾರಾಡಿದಳು. ಲಾಯರು ಸಮಾಧಾನ ಹೇಳಿ, "ಇದೊಂದು ಮುಗಿಯಲಿ, ತಡೀರಿ" ಎಂದರು.

ಆದರೆ, ಮಾರನೆಯ ದಿನವೇ ಕಮಲ, ಜ್ವರದಿಂದ ನರಳುತ್ತಿದ್ದ ಮಗು ಶಾರದೆಯನ್ನೆತ್ತಿಕೊಂಡು ಲಕ್ಷ್ಮಮ್ಮನ ಮನೆಯ ಮುಂದೆ ಗಾಡಿಯಿಂದ ಇಳಿದಳು.

ರತ್ನ ಪಡಸಾಲೆಯಲ್ಲಿದ್ದಳು.

ಮಗು ರಾಜುವನ್ನು ನಂಜುಂಡಿ ಚೌಕದ ವರೆಗೆ ವಾಕಿಂಗ್ ಕರೆದುಕೊಂಡು ಹೋಗಿದ್ದ.

ಲಕ್ಷ್ಮಮ್ಮ ವೆರಾಂಡದಲ್ಲಿ ನಿಂತುಕೊಂಡಿದ್ದಳು.

ಅನಿರೀಕ್ಷಿತವಾಗಿ ಮಗಳು ಬಂದುದನ್ನು ನೋಡಿ ಲಕ್ಷ್ಮಮ್ಮ "ಇದೇನೇ ತಾಯಿ, ಹೀಗ್ಬಂದ್ಬಿಟ್ಟೆ ಒಬ್ಳೇನೇ! ಏನಾಗಿದೆ ಮಗೂಗೆ?" ಎಂದು ಗಾಬರಿಯಿಂದ ಕೇಳಿದಳು.

ಸಾಮಾನು ತಂದು ಒಳಗಿಟ್ಟ ಗಾಡಿಯವನಿಗೆ ಬಾಡಿಗೆ ಕೊಟ್ಟು, ಕಮಲ ನೇರವಾಗಿ ಪಡಸಾಲೆಯನ್ನು ಹೊಕ್ಕಳು. ಅಲ್ಲೇ ಹಾಸಿದ್ದ ಜಮಖಾನೆಯ ಮೇಲೆ ಮಗುವನ್ನು ಮಲಗಿಸಿ, ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಈ ವಿಚಿತ್ರವನ್ನು ಕಂಡು ಇನ್ನೂ ಗಾಬರಿಗೊಂಡ ಲಕ್ಷಮ್ಮ ಓಡಿ ಬಂದು ಮಗಳನ್ನಪ್ಪಿಕೊಂಡು " ಏನಾಯ್ತಮ್ಮ, ಏನಾಯ್ತೇ. ನಿನ್ನ ಗಂಡ ಎಲ್ಲೇ ? " ಎಂದು ಕೇಳಿದಳು.

ಕಮಲ " ಮಗೂಗೆ ಜ್ವರ. ಒಂದು ವಾರವಾಯ್ತು, ಬಿಟ್ಟಿಲ್ಲ....ಅವರು, ನಿನ್ನೆ ನನ್ನ ಜೊತೆ ಜಗಳ ಆಡಿ, ನನ್ನನ್ನು ಇಲ್ಲಿಗೆ ಕಳಿಸಿಬಿಟ್ಟರು. ಈ ಮಗು ಅವರದಲ್ಲವಂತೆ....ನನಗೆ ರತ್ನ ಮೋಸ ಮಾಡಿದಳಂತೆ....ಎಲ್ಲ ಆ ' ಧೀರವಾಣಿ' ಪತ್ರಿಕೇಲಿ ಅಚ್ಚಾಗಿದೆ........' ಹೋಗು ನಿನ್ನ ತಾಯಿ ಮನೆಗೆ, ಇಲ್ಲಿರಬೇಡ. ಬಂದರೆ ಆ ಮಗು ಜೊತೆ ಬಾ. ಇಲ್ದಿದ್ರೆ ನಿನ್ನ ಮಗನ ಜೊತೆ ನೀನೂ ಅಲ್ಲೇ ಸುಖವಾಗಿರು ' ಅಂದು ಟಿಕೆಟ್ ಕೊಡಿಸಿ, ಗಾಡಿ ಬಾಡಿಗೆ ಕೊಟ್ಟು ಕಳಿಸಿ ಬಿಟ್ಟರು. ಮಗೂಗೆ ತುಂಬ ಸುಸ್ತಾಗಿ ಬಿಟ್ಟಿದೆ........ಈಗ ನಾನೇನ್ಮಾಡ ಲಮ್ಮ........ನಾನೆಷ್ಟೆಷ್ಟೋ ಹೇಳಿದೆ, ಇದು ಬ್ಯಾಡಾಂತಾ....ನೀನು ಕೇಳಲಿಲ್ಲ. ಒಂದು ತಿಂಗಳ ಏರ್ಪಾಟೂಂತ ಏನೇನೋ ಹೇಳಿ ನನ್ನೊಪ್ಪಿಸಿಬಿಟ್ಟೆ........ಈಗ ನೋಡಿ ನನ್ನ ಪಾಡು........ರತ್ನ ಎಲ್ಲಿ ? " ಎಂದು ಗೋಳಾಡಿದಳು.

ಅಲ್ಲಿಯೆ ದೂರದ ಮೂಲೆಯಲ್ಲಿ, ಮೇಜಿನ ಮುಂದಿದ್ದ ಕುರ್ಚಿಯ ಮೇಲೆ, ತಲೆ ತಗ್ಗಿಸಿಕೊಂಡು ಕುಳಿತಿದ್ದ ರತ್ನ ಕಲ್ಲಿನಂತೆ ಚಲಿಸದೆ ಹಾಗೆಯೇ ಕುಳಿತಿದ್ದಳು. ಅವಳ ಹೃದಯ ಕುದಿಯುತ್ತಿತ್ತು. ಮನಸ್ಸು ಎಲ್ಲೆಲ್ಲೋ ಅಲೆದಾಡುತ್ತಿತ್ತು.

' ರತ್ನ ಎಲ್ಲಿ ? ' ಎಂಬ ಮಾತು ಕೇಳಿದ ಕೂಡಲೆ ಓಡಿ ಬಂದು, ಮೌನ ವಾಗಿ ಮಗುವನ್ನೆತ್ತಿಕೊಂಡು ಎದೆಗೆ ತಬ್ಬಿಕೊಂಡಳು.

ಗೋಳಾಡುತ್ತಿದ್ದ ಕಮಲ ರತ್ನಳ ವಿಚಿತ್ರ ವರ್ತನೆಯನ್ನು ಕಂಡು ಅಳು ನಿಲ್ಲಿಸಿ, ಅವಳ ಮುಖವನ್ನೇ ದಿಟ್ಟಿಸಿ ನೋಡಿದಳು. ಕೆಂಪೇರಿದ ಆ ಮುಖ ದಲ್ಲಿ ದುಃಖ ತುಂಬ ಬಂಗಿತ್ತು. ಸುಂದರವಾದ ಆ ಎರಡು ಕಣ್ಣುಗಳು ಕಾಯಿಲೆಯ ಮಗುವಿನ ಮುಂದೆ ತಾಯಿಯ ಕಣ್ಣಾಗಿ ಹನಿ ತುಂಬಿ ಗಡಗಡನೆ ನಡುಗುತ್ತಿತ್ತು.

" ಕಮಲ........ರಾಜೂನ್ನ ಕರಕೊಂಡ್ಹೋಗಮ್ಮ ! " ಎಂದಳು.

೧೬

ಆ ಕೇಸಿನ ತೀರ್ಪು ಹೇಳಿ ಇಂದಿಗೆ ಸರಿಯಾಗಿ ಮೂರು ವರುಷ. ಚಿತ್ರಲೇಖ ಟಾಕೀಸಿನಲ್ಲಿ ಇಂದಿನ ಜನಸಂದಣಿ ಹೇಳ ತೀರದು. ನಾಡಿನ ಸುಪ್ರಸಿದ್ಧ ನರ್ತಕಿಯರ ಅಪೂರ್ವ ನೃತ್ಯ ಮೂರು ಗಂಟೆ ನಡೆಯಿತು. ಕಾರ್ಯಕ್ರಮ ಮುಗಿದ ಕೂಡಲೆ ಜನಸಂದಣಿ ಹೊರಗೆ ಹರಿಯಿತು. ಸೋಫಾದ ಮೇಲೆ ಮೂರು ಹೆಣ್ಣು ಮಕ್ಕಳ ಸಾಲಿನಲ್ಲಿ ಕುಳಿತಿದ್ದ ಮಹೇಶ್ವರಪ್ಪ ಹೊರಗೆ ಹೊರಡಲು ಎದ್ದು ನಿಂತ. ಪಕ್ಕದಲ್ಲಿದ್ದ, ಆರು ತಿಂಗಳ ಗರ್ಭಿಣಿ ಗಂಗಮ್ಮ ಎರಡು ವರುಷದ ಹೆಣ್ಣುಮಗುವನ್ನೆತ್ತಿಕೊಂಡು ನಿಧಾನವಾಗಿ ಮೇಲೆದ್ದಳು. ಈ ಸಂಸಾರ ಕೆಳಗಿಳಿದು ಬರುತ್ತಿದ್ದಾಗ, ಎದುರು ಸಾಲಿನ ಮೆಟ್ಟಿಲಿಳಿಯುತ್ತಿದ್ದ ರತ್ನ ಮತ್ತು ವಿಷಕಂಠು ಮಹೇಶ್ವರನ ಕಣ್ಣಿಗೆ ಕಾಣಿಸಿಕೊಂಡರು. ಜಾರ್ಜೆಟ್ ಸೀರೆ ಉಟ್ಟುಕೊಂಡು, ಹಳದಿಯ ಸಿಲ್ಕ್ ಕುಪ್ಪಸ ತೊಟ್ಟುಕೊಂಡು, ಚೆನ್ನಾಗಿ ಶೃಂಗಾರ ಮಾಡಿಕೊಂಡಿದ್ದ ರತ್ನ ನಾಲ್ಕು ವರುಷದ ಶಾರದೆಯನ್ನು ಮೊಳಕೈ ಮೇಲೆ ಎತ್ತಿಕೊಂಡಿದ್ದಳು. ಅವಳ ಆ ಎರಡು ಕಣ್ಣುಗಳು ಮಹೇಶ್ವರನ ಮುಖ ನೋಡಿ ರೆಪ್ಪೆ ಮುಚ್ಚಿ ನಾಚಿಕೊಂಡುವು; ಮುಖ ಕೆಳಗೆ ಬಾಗಿತು. ತಿಳಿಹಸುರಿನ ಸಿಲ್ಕ್ ಸುರಾಲು ಸಿಲ್ಕ್ ಜಂಪರ್ ಧರಿಸಿ ಕಾಲಿಗೆ ಪುಟ್ಟಪುಟ್ಟ ಗೆಜ್ಜೆ ಕಟ್ಟಿಕೊಂಡು ಸಿದ್ಧವಾಗುತ್ತಿದ್ದ ಕಪ್ಪುಗೂದಲಿನ ಆ ಹುಡುಗಿಯ ಮುಖವನ್ನು ಮಹೇಶ್ವರ ನೋಡಿದ. ಕಣ್ಣಿಗೆ ಕಂಡುದು ಮುಖವಲ್ಲ, ಆ ಎಳೆಯ ಎರಡು ಕಣ್ಣುಗಳು.

ಅದೇ ಕಣ್ಣು, ಅದೇ ಹೊಳಪು, ಅದೇ ನೋಟ!

---

# ಈ ಕಾದಂಬರಿಯ ಬಗ್ಗೆ

“ಕಾದಂಬರಿಯ ಹೆಸರು **‘ಹೆಣ್ಣಿನ ಕಣ್ಣು’** ನೋಡಿ ಗ್ರಂಥದ ಗತಿ ಗುರಿಗಳನ್ನು ಊಹಿಸಿದರೆ, ಕತೆ ಓದುತ್ತ ಓದುತ್ತ ಊಹೆ ಬೇರೆ ದಾರಿ ಹಿಡಿದು ಕತೆಗೆ ಕಳೆ ಕಟ್ಟುವ ಘಟನೆಗಳ ಸುರಸ ನಿರೂಪಣೆಯಿಂದ ಪುಷ್ಟಿಗೊಂಡು, ಕಲ್ಪನೆಯ ಆಕಾಶಬುಟ್ಟಿಯಲ್ಲಿ ನಿಮ್ಮನ್ನು ಹೊತ್ತು ಹೋಗುತ್ತದೆ. ನಿತ್ಯ ಜೀವನಕ್ಕೆ ಪ್ರಾಮಾಣಿಕವಾದ ಪ್ರತಿಬಿಂಬದ ಕತೆಗಳಿಗೂ ಕಲ್ಪನಾ ಕತೆಗಳಿಗೂ ಇರುವ ತಾರತಮ್ಯವನ್ನು ಕಾಣಬೇಕಾದರೆ **‘ಹೆಣ್ಣಿನ ಕಣ್ಣೊ’**ಂದು ಸುಲಭ ಸಾಧನ ಎನ್ನಬಹುದು. ಆದರೂ ಕಲ್ಪನೆಯ ಕತೆ ಜೀವನದ ಆಗು ಹೋಗುಗಳ, ವ್ಯಕ್ತಿ ವೈಚಿತ್ರಗಳ ಗಡಿಯಲ್ಲಿ ಹರಿದಾಗ ಉದ್ದೇಶ ಸಾಫಲ್ಯವಾಗುತ್ತದೆಂದು ಲೇಖಕರು ಮೊದಲೇ ಹೇಳಿರುವುದನ್ನು ಒಪ್ಪಬಹುದು.

“ಈ ಕಾದಂಬರಿಯಲ್ಲಿನ ವಿಟನಲ್ಲದ ವಿಟ ನಾಗರಾಜ, ‘ಓರೆ’ ಜೀವನದ ಒರೆಗಲ್ಲ ಪ್ರಯೋಗಕ್ಕೆ ಸಿಕ್ಕಿ, ಗಾಣಕ್ಕಿಟ್ಟ ರಸಗಬ್ಬಿನ ಜಲ್ಲೆಗಳಾದ ರತ್ನ, ಕಮಲ, ವ್ಯಾಪಾರಿಯಲ್ಲದ ವ್ಯಾಪಾರಿ ಕರಿಯಪ್ಪ, ‘ತಾಯಿ’ ಲಕ್ಷ್ಮಮ್ಮ ಇವರುಗಳು ನಿತ್ಯ ಜೀವನದಲ್ಲಿ ‘ನಮ್ಮ ನೆರೆಹೊರೆಯವರೋ’ ಎನ್ನುವಷ್ಟು ನೈಜ ನಿರೂಪಣಾಶಕ್ತಿ ಶ್ರೀನಿವಾಸರಿಗೆ ಸಾಧಿಸಿದೆ.”

**—ಪ್ರಜಾವಾಣಿ**

*　　*　　*　　*

“ಸಮಾಜದಲ್ಲಿ ಸೂಳೆಗಾರಿಕೆ ಆರಂಭವಾಗುವುದು ಯಾವ ರೀತಿ, ಅದು ಬೆಳೆಯುವುದು ಹೇಗೆ, ಕೊನೆಗೆ ಅದಕ್ಕೆ ಬಲಿಯಾಗುವ ನಿರಪರಾಧಿ ಯಾರು ಎಂಬುದನ್ನು ಲೇಖಕರು ತಮ್ಮ ಈ ಕಾದಂಬರಿಯಲ್ಲಿ ವಿಸ್ತರಿಸಿದ್ದಾರೆ.”

" ಸಾಮಾಜಿಕ ನೀತಿಯನ್ನು ಬೋಧಿಸುವ ಸಲುವಾಗಿ ಬರೆದಿರುವ ಈ ಕಾದಂಬರಿಯು ಉತ್ತಮಪರಿಣಾಮಕಾರಿಯಾಗಿದೆ; ಮನಸ್ಸನ್ನು ಭೇದಿಸುವಂತಿದೆ.

" ಇಂತಹ ಸಾಮಾಜಿಕ ಕಾದಂಬರಿಗಳು ಹೆಚ್ಚಾಗಬೇಕಾದ ಕಾಲದಲ್ಲಿ ಶ್ರೀ ಶ್ರೀನಿವಾಸರು ಜನತೆಗೆ ಒಪ್ಪಿಸಿರುವ ಈ ಕಾದಂಬರಿಯನ್ನು ಆದರದಿಂದ ಸ್ವೀಕರಿಸಲಾಗುವುದೆಂಬ ಭರವಸೆ ನಮಗಿದೆ."

—ಕಾಯಿನಾಡು

* * * *

" ವೇಶ್ಯಾ ವೃತ್ತಿ ಹೇಗೆ ನಿಲ್ಲುತ್ತದೆ? ಸಮಾಜದ ದೌರ್ಬಲ್ಯಗಳೇ ಅದರ ಕಾಲುಗಳು. ಸಂಘದೋಷದಿಂದ ದುರ್ಬಲಚಿತ್ತನಾದ ನಾಗರಾಜ, ವಿಲಾಸ ಲೌಲ್ಯದಿಂದ ಮಾದಪ್ಪ, ಮನೆಯ ಹೆಂಡತಿಯ ದೂರೀಕರಣದಿಂದ ಮಹೇಶ್ವರ ಅರಿತೂ ಅರಿತೂ ದೀಪದ ಹುಳುಗಳಾಗುತ್ತಾರೆ. ಅತೃಪ್ತ ಕಾಮ ಪಿಪಾಸೆಯನ್ನು ಹಿಂಗಿಸಿಕೊಳ್ಳುವ ಹೋಟೆಲಿನಂತಿದೆ ವೇಶ್ಯಾಗೃಹ.

" ಶ್ರೀ ಶ್ರೀನಿವಾಸರು ಈ ವಿಷಯದ ಬಹು ಮುಖಗಳನ್ನು ತೆರೆದು ತೋರಿಸಿದ್ದರಲ್ಲಿ ಸಾಕಷ್ಟು ವ್ಯಾಪಕತೆಯಿದೆ........"

" ಶ್ರೀನಿವಾಸರ ಶೈಲಿ ಸರಳವೂ ಸರಾಗವೂ ಆಗಿದೆ. ಸಾಮಾಜಿಕ ಸಮಸ್ಯೆಗಳ ಹಿಡಿತವೂ ಅವರಿಗಿದೆ. ಈ ಗುಣಗಳು ಕಾದಂಬರಿಯನ್ನು ಸುವಾಚ್ಯವಾಗಿ ಮಾಡಿವೆ."

—ಕರ್ಮವೀರ

ಮೋಹನ ಪ್ರಕಾಶನ ★ ಕೃಷ್ಣಮೂರ್ತಿಪುರಂ ★ ಮೈಸೂರು

# ಮೋಹನ ಕಾದಂಬರಿಗಳು

## ಪ್ರಕಟವಾಗಿವೆ

ಚಂದವಳ್ಳಿಯ ತೋಟ—ತ. ರಾ. ಸು.
ಬಲೆಯ ಬೀಸಿದರು—ಬಸವರಾಜ ಕಟ್ಟೀಮನಿ
ಚಿತ್ರಕೂಟ—ವೀರಕೇಸರಿ
ಅನಾಥೆ—ಗೋಪಾಲಕೃಷ್ಣ ಅಡಿಗ
ಮಂತ್ರಶಕ್ತಿ—ಇಂದಿರಾತನಯ
ಮನೆ ತುಂಬಿದ ಹೆಣ್ಣು—ಕೃಷ್ಣಮೂರ್ತಿ ಪುರಾಣಿಕ
ಹೊಸ ಹಗಲು—ತ. ರಾ. ಸು.
ರಾಜದ್ರೋಹಿ—ಶ್ರೀನಿವಾಸರಾವ್ ಕೊರಟಿ
ಹೆಣ್ಣಿನ ಕಣ್ಣು—ರಾ. ವೆಂ. ಶ್ರೀನಿವಾಸ

## ಅಚ್ಚಿನಲ್ಲಿ

ಹಣ್ಣು-ಹಸುರು—ಎಸ್. ಅನಂತನಾರಾಯಣ
ಎರಡು ಹೆಣ್ಣು-ಒಂದು ಗಂಡು—ತ. ರಾ. ಸು.
ವಿಜಯೋತ್ಸವ—ತ. ರಾ. ಸು.

## ಬರಲಿವೆ

ಡಾ|| ವೀಣಾ—ದೇವುಡು
ವಂಶೋದ್ಧಾರಕ—ತ್ರಿವಿಕ್ರಮ
ನನ್ನ ಚಿನ್ನ—ನರೇಂದ್ರಬಾಬು
ಹೆಣ್ಣು ಜನ್ಮ—ಅ. ನ. ಕೃ.
ದುರ್ಗೋದಯ—ತ. ರಾ. ಸು.
ವಸಂತ ಮಾಸ—ವಿ. ಎಂ. ಇನಾಂದಾರ್
ತೋಳ ಸಾಕಿದ ಮಗಳು—ನಾ. ಕಸ್ತೂರಿ
ಕಲ್ಯಾಣಸ್ವಾಮಿ—ರಾ. ವೆಂ. ಶ್ರೀನಿವಾಸ




# ಹೆಣ್ಣಿನ ಕಣ್ಣು

ವಿಚಿತ್ರ ಪ್ರಸಂಗ! ವಿಧಿಯಿಲ್ಲದೆ ಲಕ್ಷ್ಮಮ್ಮ ವೇಶ್ಯಾ ವೃತ್ತಿಗೆ ಇಳಿಯಬೇಕಾಯಿತು. ಒಬ್ಬೊಂಟಿಗ ಸೇಟ್ ಹೀರಾಲಾಲ್ ಅವಳಿಗೆ ಪೋಷಕನಾದ. ಸಮಾಜದಲ್ಲಿ ನೀತಿ ಮತ್ತು ನ್ಯಾಯವನ್ನು ಕಾಯುವ ಗುರುತರ ಜವಾಬ್ದಾರಿಯನ್ನು ವಹಿಸಿರುವ ಪೋಲೀಸ್ ಕಾನ್‌ಸ್ಟೇಬಲ್ ಕರಿಯಪ್ಪ ಸೂಳೆಗಾರಿಕೆಗೆ ಸಹಾಯಕನಾದ. ಅದು ಸಾಲದೆ, ತಪ್ಪಿಸಿಕೊಂಡ ಹುಡುಗಿ ರತ್ನಳನ್ನು ಲಕ್ಷ್ಮಮ್ಮನ ಕೈಲಿ ಹಾಕಿ ಆ ಮನೆಯಲ್ಲಿ ಮತ್ತೊಂದು ಸಸಿಯನ್ನು ಬೆಳಸಲಾರಂಭಿಸಿದ. ವೇಶ್ಯೆಯ ಮಗಳು ಕಮಲ ತನ್ನ ತಾಯಿಯ ವೃತ್ತಿಯನ್ನು ಅವಲಂಬಿಸಲು ನಿರಾಕರಿಸಿದಳು. ಆದರೆ ಕುಲೀನ ಮತದಲ್ಲಿ ಜನಿಸಿದ್ದ ರತ್ನ ಆ ವೇಶ್ಯೆಯ ಅಚ್ಚುಮೆಚ್ಚಿನ ಮಗಳಾಗಿ, ಶಿಷ್ಯಳಾಗಿ ಮುಂದುವರಿದಳು. ಆ ದೀಪಕ್ಕೆ ಮನಸೋತು ಊರಿನ ಅನೇಕಪತಂಗಗಳು ಬಂದು ಬಿದ್ದುವು. ಸಾಹುಕಾರರ ಮಗ ನಾಗರಾಜ ಅವಳ ಕೈಗೊಂಬೆಯಾಗಿ, ಕೊನೆಗೆ ಭಿಕಾರಿಯಾದ. ಸಭ್ಯ ಗೃಹಸ್ತನಾದ ಮಹೇಶ್ವರನೂ ಆಕೆಯ ಬುಟ್ಟಿಗೆ ಬಿದ್ದ! ಅಬ್ಬ! ಅವನಿಗೆ ಎಂಥ ಮೋಸವಾಯಿತು! ಮಹೇಶ್ವರನ ಬಗ್ಗೆ ರತ್ನ ನಡಸಿದ ಒಂದೊಂದು ಕೆಲಸವನ್ನು ನೆನಸಿಕೊಂಡಾಗಲೂ ಮೈ ಜುಮ್ಮೆನ್ನುತ್ತದೆ! ನಾಗರಾಜ ಹಾಳಾದ. ಆದರೆ ಮಹೇಶ್ವರ? ಅವನೂ ಸೋತನೆ? ರತ್ನ ಗೆದ್ದಳೆ?........

---

ಮೋಹನ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು